ಸಂಚಿಕೆ 1 / ಮಾರ್ಚ್ 2021
ಚಾತುರ್ಮಾಸಿಕ / ಕನ್ನಡ ಆವೃತ್ತಿ / ಬೆಂಗಳೂರು

Azim Premji University

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

# ಲರ್ನಿಂಗ್ ಕರ್ವ್

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಒಂದು ಪ್ರಕಟಣೆ




## ಪ್ರತಿಯೊಂದು ಮಗುವೂ ಕಲಿಯಬಲ್ಲದು ಭಾಗ 1

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ 'ಲರ್ನಿಂಗ್ ಕರ್ವ್' ಶಿಕ್ಷಣವನ್ನು ಕುರಿತ ಪ್ರಕಟಣೆಯಾಗಿದ್ದು ಸಾರ್ವಕಾಲಿಕ ಮಹತ್ವವುಳ್ಳ ಮತ್ತು ಮೌಲ್ಯವುಳ್ಳ ಸಾಂದರ್ಭಿಕ ಹಾಗು ನಿರ್ದಿಷ್ಟ ವಿಷಯಾಧಾರಿತ ಚರ್ಚಾ ವಿಷಯಗಳನ್ನು ಶಿಕ್ಷಕರು, ಶಿಕ್ಷಕ ಶಿಕ್ಷಕರು, ಶಾಲಾ ಮುಖ್ಯಸ್ಥರು, ಶಿಕ್ಷಣಾಧಿಕಾರಿಗಳು, ಶಿಕ್ಷಣ ಕಾರ್ಯಕರ್ತರು, ಪೋಷಕರು ಹಾಗು ಸರ್ಕಾರೇತರ ಸಂಸ್ಥೆಗಳಿಗೆ ತಲುಪಿಸುವ ಮಹತ್ತರ ಆಶಯವನ್ನು ಹೊಂದಿದೆ. ಇದು ವಿಭಿನ್ನ ಅಭಿಪ್ರಾಯಗಳನ್ನು ಮತ್ತು ದೃಷ್ಟಿಕೋನಗಳನ್ನು ವ್ಯಕ್ತಪಡಿಸಲು ವೇದಿಕೆಯನ್ನು ಒದಗಿಸುವುದೇ ಅಲ್ಲದೆ ಹೊಸ ಹೊಸ ಮತ್ತು ತಜ್ಞ ವಿಚಾರಧಾರೆಗಳನ್ನು, ಆಲೋಚನೆಯನ್ನು ಪ್ರಚೋದಿಸುವ ದೃಷ್ಟಿಕೋನಗಳನ್ನು ಹಾಗು ನವೀನ ಬೋಧನಾ ವಿಧಾನಗಳ ಕಥನಗಳನ್ನು ಹಂಚಿಕೊಳ್ಳಲು ಉತ್ತೇಜಿಸುತ್ತದೆ. ಶೈಕ್ಷಣಿಕ ರಂಗದ ಈ ವಿಚಾರ ಮಂಥನದಲ್ಲಿ ಶೈಕ್ಷಣಿಕ ಜ್ಞಾನ ಮತ್ತು ಪ್ರಾಯೋಗಿಕ ಅನುಭವಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಯತ್ನ ನಮ್ಮದಾಗಿದೆ.

# ಸಂಪಾದಕರ ಮಾತು



ಮೊದಲನೆಯದಾಗಿ ಮತ್ತು ಎಲ್ಲಕ್ಕಿಂತಲೂ ಮುಖ್ಯವಾಗಿ ಮಕ್ಕಳು ಮನುಷ್ಯರೇ ಆಗಿರುವುದರಿಂದ, ಅವರ ಬೆಳವಣಿಗೆಯ ವಿನ್ಯಾಸಗಳು ಪರಿಸರದ ಸ್ಥಿತಿಗತಿಯನ್ನು ಪ್ರಭಾವಿಸಿರುತ್ತದೆ. ಅವಳಗಳು ಕೂಡ ತಮ್ಮ ಸಾಮರ್ಥ್ಯ ಹಾಗು ಬೆಳವಣಿಗೆಯ ಹಂತಗಳಲ್ಲಿ ಭಿನ್ನವಾಗಿರುವುದರಿಂದ ಯಾವ ಪ್ರಮಾಣದಲ್ಲಿ ಒಂದು ಮಗು ಕಲಿಯುತ್ತದೆ ಎಂಬುದನ್ನು ಮೊದಲೇ ನಿರ್ಧರಿಸುವುದು ಬಹುಮಟ್ಟಿಗೆ ಅಸಾಧ್ಯ. ಹಾಗಾಗಿ ವಿಶಾಲ ವ್ಯಾಪ್ತಿಯ ಸಾಮರ್ಥ್ಯಗಳ ಮೂಲಕ ಮಕ್ಕಳು ಶಾಲೆಯ ಮೆಟ್ಟಿಲು ತುಳಿಯುವುದರಿಂದ ಅವರ ಸಾಧ್ಯತೆಗಳು ಕೂಡಾ ವಿಸ್ತೃತವಾಗಿರುತ್ತವೆ.

ಆದರೂ ಪ್ರಾಥಮಿಕ ಪಠ್ಯವನ್ನು  ಎಲ್ಲಾ ಮಕ್ಕಳು ಒಂದೇ ಗತಿಯಲ್ಲಿ, ಒಂದೇ ರೀತಿಯಲ್ಲಿ ಕಲಿಯುತ್ತಾರೆ ಮತ್ತು ಕಲಿಕೆಯ ಹಂತ, ವ್ಯಾಪ್ತಿ ಕೂಡಾ ಸಮಾನ ರೀತಿಯಲ್ಲಿರುತ್ತದೆ ಎಂಬ ನಂಬುಗೆಗಳಿಗೂ ಯಾವುದೇ ಸಂಶೋಧನೆಯಾಗಲೀ, ವೈಯಕ್ತಿಕ ಅನುಭವವಾಗಲೀ ಆಧಾರ ಒದಗಿಸುವುದಿಲ್ಲ. ಆರ್ಥಿಕ ಮತ್ತು ಸಾಮಾಜಿಕ ಸ್ತರದಲ್ಲಿ ನಮ್ಮ ಜೀವನದ ಸ್ಥಿತಿಗತಿಗಳಲ್ಲಿ ಸಾಕಷ್ಟು ಭಿನ್ನತೆಗಳಿದ್ದು, ದೈನಂದಿನ ಬದುಕು ಸಂಸ್ಕೃತಿ ನಿರ್ದಿಷ್ಟವಾಗಿರುತ್ತದೆ. ಜಗತ್ತಿನ ಒಂದು ಭಾಗದಲ್ಲಿ ಅಗತ್ಯ ಕಲಿಕೆ ಎಂದು ನಿರ್ಧರಿತವಾಗಿರುವುದು, ಜಗತ್ತಿನ ಇನ್ನೊಂದು ಭಾಗದಲ್ಲಿ ಅತ್ಯವಶ್ಯವಲ್ಲ ಎಂದು ಪರಿಗಣಿತವಾಗಿರಬಹುದು. ಇಂಥ ಪರಿಸ್ಥಿತಿಯಲ್ಲಿ ಕಲಿಯುವ ವಿಧಾನಗಳೂ ಭಿನ್ನವಾಗಿರುವುದು ಸಹಜ.

ಅಲ್ಲದೆ, ಪ್ರತಿ ಮಗುವೂ ಕಲಿಯಬಲ್ಲದು ಎಂದು ನಾವು ಹೇಳುವಾಗ, ಮಕ್ಕಳು ತಮ್ಮ ಜೀವನದ ಮೊದಲ ಮೂರು ವರ್ಷಗಳಲ್ಲಿ ಬಹುಮಟ್ಟಿಗೆ ಯಾರಿಂದಲೂ ಕಲಿಸಲ್ಪಡದಿದ್ದರೂ ವಾಸ್ತವವಾಗಿ ಕಲಿಯುವ ವಿಷಯಗಳನ್ನು ನಾವು ಪರಿಗಣಿಸುವುದೇ ಇಲ್ಲ. ಮಕ್ಕಳ ಗ್ರಹಣಶಕ್ತಿ ಮತ್ತು ದೈಹಿಕ ಬೆಳವಣಿಗೆಯ ಜೊತೆಗೆ, ಹೆಚ್ಚು ಗಾಢವಾದ ಕಲಿಕೆ ಎನ್ನಬಹುದಾದ, ಭಾಷಾ ಸಾಮರ್ಥ್ಯದ ಬಗ್ಗೆ ಇಲ್ಲಿ ಹೇಳುತ್ತಿದ್ದೇನೆ. ಮಕ್ಕಳು ಹುಟ್ಟಿನಿಂದಲೇ ವ್ಯಾಕರಣದ ಜ್ಞಾನವನ್ನು ಅರಿತಿದ್ದು, ತಮ್ಮ ಮೊದಲ ಭಾಷೆಯನ್ನು ಹೊರಗಿನ ಯಾವ ಸಹಾಯವೂ ಇಲ್ಲದೇ  ಮಾತನಾಡಬಲ್ಲರು ಎಂದು ಭಾಷಾತಜ್ಞ ನೋಮ್ ಚೋಮ್ಸ್ಕಿ ಅವರು ಹೇಳುತ್ತಾರೆ. ಹೀಗಾಗಿ, ಪ್ರತಿ ಮಗುವೂ ಕಲಿಯಬಲ್ಲದು (Every Child Can Learn) ಎಂದು ನಾವು ಹೇಳುವುದರ ಜೊತೆಗೆ ಎಚ್ಚರಿಕೆಯ ಮಾತೊಂದನ್ನೂ ಸೇರಿಸುವ ಅಗತ್ಯವಿದೆ: ನಾವು ಹೇಳುವ ಕಲಿಕೆಯು ಮಗು ಶಾಲೆಯ ಮೆಟ್ಟಿಲು ಹತ್ತಿದ ಬಳಿಕ ಆಗುವ ಔಪಚಾರಿಕ ಕಲಿಕೆಯಷ್ಟೇ. ಶಾಲಾ ಶಿಕ್ಷಣವು "...ಕಲಿಕೆಗೆ ಎಡೆಮಾಡುವುದಿಲ್ಲ. ಪ್ರಪಂಚದಾದ್ಯಂತ, ಶಾಲೆಯ ಒಳಗೆ ಕಲಿಯುವವರಿಗಿಂತ ಶಾಲೆಯ ಹೊರಗೆ ಕಲಿಯುವವರೇ ಹೆಚ್ಚಿದ್ದಾರೆ" ಎನ್ನುತ್ತದೆ ವಿಶ್ವಸಂಸ್ಥೆಯ ಮಕ್ಕಳ ನಿಧಿ (UNICEF) ವರದಿ.

ಔಪಚಾರಿಕ ಕಲಿಕೆಯ ಪ್ರತಿ ಅಂಶವೂ – ಅದರ ರಚನೆ, ಪಠ್ಯಪುಸ್ತಕ, ಪಠ್ಯಕ್ರಮ, ಬೋಧನಾ ವಿಧಾನಗಳು, ತರಗತಿ ಕೊಠಡಿಯ ಶಿಷ್ಟಾಚಾರ, ಅಲ್ಲಿ ಕುಳಿತುಕೊಳ್ಳುವ ರೀತಿ, ವೇಳಾಪಟ್ಟಿಗಳು – ಒಂದು ಚೌಕಟ್ಟಿಗೆ ಒಳಪಟ್ಟಿರುತ್ತದೆ – ವೈಯಕ್ತಿಕ ಭಿನ್ನತೆಗಳನ್ನು ಪರಿಗಣಿಸದೆ, ಜನ ಒಪ್ಪುವ ಮಾನದಂಡಗಳಿಗೆ ಸರಿಹೊಂದದ ಅಥವಾ ಅವುಗಳಿಗೆ ಹೊಂದಿಕೊಳ್ಳಲು  ಒಪ್ಪದ ಮಗುವಿಗೆ ನಾವು ಕಷ್ಟಕರ ಮಗುವೆಂದೋ, ಕಲಿಕಾ ತೊಂದರೆಗಳನ್ನು ಎದುರಿಸುತ್ತಿರುವ ಮಗುವೆಂದೋ ಹಣೆಪಟ್ಟಿ ಕಟ್ಟುವುದು ಸಾಮಾನ್ಯ. ಆದರೆ ತಾತ್ವಿಕವಾಗಿ ಹಾರ್ವರ್ಡ್ ಗಾರ್ಡ್‌ನರ್‌ನ "ಬಹುವಿಧ ಬುದ್ಧಿಮತ್ತೆ"ಗಳ (Theory of Multiple Intelligences) ಸಿದ್ಧಾಂತಕ್ಕೆ ಮಣೆಹಾಕಲು ಸಾಕಷ್ಟು ಉತ್ಸಾಹ ತೋರುತ್ತೇವೆ. ಮಕ್ಕಳಿಗೆ ವೈವಿಧ್ಯಮಯ ಸಾಮರ್ಥ್ಯಗಳಿರುತ್ತವೆ (ಬಹುವಿಧದ ಬುದ್ಧಿಮತ್ತೆಗಳು) ಎಂಬುದನ್ನು ನಾವು ಒಪ್ಪಿಕೊಂಡಲ್ಲಿ ಬೋಧನೆಯ ವಿಧಾನಗಳೂ ಕೂಡ ಅದಕ್ಕೆ ತಕ್ಕಂತೆ ವಿಭಿನ್ನವಾಗಿರಬೇಕು ಮತ್ತು ಬಹುವಿಧದ ಬೋಧನಾಶೈಲಿಗಳೂ ಅಗತ್ಯವಾಗಿ ಇರಬೇಕು. ಸಾಕಷ್ಟು ಆರೈಕೆ, ಸೂಕ್ತ ಸೌಕರ್ಯಗಳು, ಆರೋಗ್ಯ ಸೇವೆ, ಮತ್ತು ಪೌಷ್ಟಿಕಾಂಶ, ಶಾಲೆಯ ಒಳಗೆ ಹಾಗೂ ಹೊರಗೆ ಕಲಿಯುವ ಅವಕಾಶಗಳು, ಬೆಂಬಲ ನೀಡುವ ಹಿರಿಯರು (ಪೋಷಕರು ಹಾಗು ಶಿಕ್ಷಕರು), ಸುರಕ್ಷಿತವೂ,  ಭಯರಹಿತವೂ ಆದ ಪರಿಸರದ ಹಿನ್ನೆಲೆ ಇವಿಷ್ಟೂ, ವಿಶೇಷವಾಗಿ ಪೂರ್ವ ಪ್ರಾಥಮಿಕ ಶಿಕ್ಷಣದ ಹಂತದಲ್ಲಿರುವುದು ಎಲ್ಲ ಮಕ್ಕಳ ಶಿಕ್ಷಣಕ್ಕೆ ಅಗತ್ಯವಾಗುತ್ತದೆ. ಪ್ರತಿ ಮಗುವೂ ಕಲಿಯಬಲ್ಲದು ಎಂದು ನಾವು ನಂಬುವುದೇ ಆದರೆ, ಅದು ನಿಶ್ಚಯವಾಗಿ ನೆರವೇರುವಂತೆ ನೋಡಿಕೊಳ್ಳುವ ಹೊಣೆಗಾರಿಕೆಯೂ ನಮ್ಮದೇ, ಅಂದರೆ ಹಿರಿಯರದೇ ಆಗಿರುತ್ತದೆಯೇ ಹೊರತು ಮಕ್ಕಳದ್ದಲ್ಲ.

ಹೆಣ್ಣುಮಕ್ಕಳು, ವಲಸೆ ಕಾರ್ಮಿಕರ ಮಕ್ಕಳು, ಸಂಘರ್ಷದ ವಲಯಗಳಲ್ಲಿ ಬದುಕುವ ಮಕ್ಕಳು, ಶಾಲೆ ತೊರೆದ ಮಕ್ಕಳು ಹಾಗೂ ಶಾಲೆಗೆ ತೆರಳುತ್ತಿರುವ ಮೊದಲ ತಲೆಮಾರಿನ ಮಕ್ಕಳಂತಹ ಕೆಲವು ಗುಂಪುಗಳ ಮಕ್ಕಳು ಉಳಿದ ಮಕ್ಕಳಿಗಿಂತ ಹೆಚ್ಚು ದುರ್ಬಲರಾಗಿರುವ ಸಾಧ್ಯತೆಯಿರುತ್ತದೆ. ಸೌಕರ್ಯಗಳಿದ್ದರೂ ಶಿಕ್ಷಕರಿಗೆ ಕಳಪೆ ತರಬೇತಿ, ಕಲಿಕಾ ಸಾಮಗ್ರಿಗಳ ಕೊರತೆ, ಮೂಲಸೌಕರ್ಯ ಹಾಗೂ ಪೌಷ್ಟಿಕಾಂಶದ ಕೊರತೆ ಇತ್ಯಾದಿ ಅಂಶಗಳು ಮಕ್ಕಳನ್ನು ಕಲಿಕೆಯಿಂದ ಹೊರಗಿಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಭಾರತದಲ್ಲಿ, ಭಾಷೆಯು ಪರಿಗಣಿಸಬೇಕಾದ ಒಂದು ಮಹತ್ವದ ಸಂಗತಿ. ಮಕ್ಕಳು ತಮ್ಮದೇ ಗತಿಯಲ್ಲಿ ಕಲಿಯುತ್ತಾರೆ ಎಂದು ನಾವು ಪ್ರತಿಪಾದಿಸಿದರೂ ಕೂಡಾ, ನಮ್ಮ ಮೌಲ್ಯಮಾಪನದ ವಿಧಾನಗಳು ವ್ಯಾಪಕ ತಾರತಮ್ಯ ಸೃಷ್ಟಿಸುವಷ್ಟು ಬಿಗಿಯಾಗಿವೆ. ಪ್ರತಿಯೊಬ್ಬರೂ ಒಂದೇ ಪರೀಕ್ಷೆಯನ್ನು ಬರೆದು, ಉತ್ತೀರ್ಣರಾಗಿ, ಮುಂದೆ ಪ್ರವೇಶ ಪರೀಕ್ಷೆಗಳಿಗೆ ತಮ್ಮನ್ನು ತಾವೇ ಒಡ್ಡಿಕೊಳ್ಳಬೇಕು.

ಕೌಶಲ ರಹಿತ ಶಾಲಾ ಕಲಿಕೆಯಿಂದ ಮಕ್ಕಳು ಅವಕಾಶ–ವಂಚಿತರಾಗುತ್ತಾರಲ್ಲದೆ, ಸಮಾಜದಿಂದ ಉತ್ತಮವಾದದ್ದನ್ನು ಪಡೆದು, ಉತ್ತಮವಾದುದನ್ನು ಸಮಾಜಕ್ಕೆ ಕೊಡುವ, ಜವಾಬ್ದಾರಿಯುತ ನಾಗರಿಕರಾಗಿ ಉತ್ತಮ ಭವಿಷ್ಯವನ್ನು ಕಟ್ಟಿಕೊಳ್ಳುವ ಸಾಧ್ಯತೆಗಳೂ ಕ್ಷೀಣಿಸುತ್ತವೆ. ಇಂತಹ ಅನೇಕ ತಲ್ಲಣಗಳನ್ನು ಕುರಿತಾಗಿ ದೇಶದ ಎಲ್ಲ ಭಾಗದ ಚಿಂತಕರ ವಿಸ್ತೃತ ಹರಹುಳ್ಳ ಲೇಖನಗಳನ್ನು ಈ ಸಂಚಿಕೆಯು ಒಳಗೊಂಡಿದ್ದು, ಸಹಾನುಭೂತಿ ಮತ್ತು ತಾದಾತ್ಮ್ಯವುಳ್ಳ ಶಿಕ್ಷಕರಿದ್ದಲ್ಲಿ ಪ್ರತಿ ಮಗುವೂ ನಿಜವಾಗಿ ಕಲಿಯಬಹುದು ಎಂಬ ನಂಬಿಕೆಯನ್ನು ಈ ಲೇಖನಗಳು ಘಂಟಾಘೋಷವಾಗಿ ಸಾರುತ್ತವೆ. ಈ ನಿರೂಪಣೆಯ ಹಿನ್ನೆಲೆಯನ್ನು ಇಲ್ಲಿನ ಪ್ರಧಾನ ಲೇಖನಗಳು ನೀಡಿದರೆ, ಉಳಿದ ಲೇಖನಗಳು ಸೂಕ್ತ ಮನೋಭಾವವಿದ್ದಾಗ ಏನನ್ನಾದರೂ ಮಾಡಲು ಸಾಧ್ಯ ಎಂಬುದನ್ನಷ್ಟೇ ದೃಢಪಡಿಸುತ್ತವೆ. ಉದಾಹರಣೆಗೆ, ಒಂದು ಲೇಖನವು ಹಲವು ಆಡುಭಾಷೆಗಳಿರುವ ದೇಶದ ದುರ್ಗಮ ಭಾಗದಲ್ಲಿ ಮಕ್ಕಳಿಗೆ ಶಿಕ್ಷಣ ನೀಡಲು ನಡೆಯುತ್ತಿರುವ ಪ್ರಯತ್ನಗಳನ್ನು ನಿರೂಪಿಸಿದರೆ, ಮತ್ತೊಂದು ಲೇಖನವು, ನಮ್ಮಲ್ಲಿ ಮಕ್ಕಳಿಗಾಗಿ ಮಿಡಿಯುವ ಹೃದಯವಿದ್ದು, ನಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಲ್ಲಿ ಮತ್ತು ತನ್ಮಯತೆಯಿದ್ದಲ್ಲಿ ಕಲಿಕೆ ಹೇಗೆ ವೃದ್ಧಿಸುತ್ತದೆ ಎಂಬುದನ್ನು ವರ್ಣಿಸುತ್ತದೆ. ಮತ್ತೊಂದು ಲೇಖನವು ಪ್ರಸಕ್ತ ಶಿಕ್ಷಣ ನೀತಿಗಳನ್ನು ಒಂದು ನಿರ್ದಿಷ್ಟ ಹಿನ್ನೆಲೆಯಲ್ಲಿರಿಸಿ ವಿಶ್ಲೇಷಿಸಿದರೆ, ಮಗದೊಂದು, ಮಕ್ಕಳಲ್ಲಿ "ಭಯಮೂಡಿಸುವ" ಗಣಿತದಂತಹ ವಿಷಯವನ್ನು ಕಲಿಸಲು ಪ್ರಾಯೋಗಿಕ ಸಲಹೆಗಳನ್ನು ನೀಡುತ್ತದೆ. ಭಾಷೆಯನ್ನು ಗಳಿಸುವ ವಿಧಾನವನ್ನು ಚರ್ಚಿಸುವ ಲೇಖನವು, ಉನ್ನತ ಕಲಿಕೆಯ ತಳಹದಿಯಾದ ಓದು ಮತ್ತು ಸಾಕ್ಷರತೆಯ ಕಲಿಕೆಗಾಗಿ ಕಥೆ ಹಾಗೂ ಚಿತ್ರಗಳನ್ನು ಕಾಲ್ಪನಿಕವಾಗಿ ಬಳಸಲು ಶಿಫಾರಸ್ಸು ಮಾಡುತ್ತದೆ. ಚಿಂತನೆಯ ಆನ್ವಯಿಕತೆ, ಸಹಾನುಭೂತಿಯಿಂದ ಅರ್ಥೈಸುವಿಕೆ ಮತ್ತು ಕಲ್ಪನೆಯ ಮೂಲಕ ಪ್ರತಿ ಮಗುವಿನಿಂದಲೂ ಅತ್ಯುತ್ತಮವಾದುದನ್ನು ಹೊರತರುವ ನಿಟ್ಟಿನಲ್ಲಿ ಮಹಾನ್ ಸಾಧನೆಗಳನ್ನು ಮಾಡಬಹುದಾದರೂ, ಕಲ್ಪನಾಶೂನ್ಯವೂ, ದಯಾರಹಿತವೂ ಆದ ನಿರ್ವಹಣೆಯು ಇದಕ್ಕೆ ತಡೆಯೊಡ್ಡುತ್ತದೆ ಎಂಬುದು ಈ ಲೇಖನಗಳ ಉದ್ದಕ್ಕೂ ಕಂಡುಬರುವ ಸಮಾನ–ರೂಪದ ಎಳೆಯಾಗಿದೆ.

ಎಂದಿನಂತೆ ಯೂನಿವರ್ಸಿಟಿಯ ಅನುವಾದ ಉಪಕ್ರಮ ಹಾಗೂ ಅವರ ಅನುವಾದಕರ ತಂಡಕ್ಕೆ ನಮ್ಮ ಧನ್ಯವಾದಗಳು.

ಸ್ವಾಗತಕ್ಕಿಂತಲೂ ಸಲಹೆಸೂಚನೆಗಳು ಹೆಚ್ಚು ಮಹತ್ವದ್ದು. ಮುಂದಿನ ಸಂಚಿಕೆಯಿಂದ "ಸಂಪಾದಕರಿಗೆ ಪತ್ರಗಳು" ಎಂಬ ಹೊಸ ಅಂಕಣವು ಆರಂಭವಾಗಲಿದ್ದು, ಅಲ್ಲಿ ಓದುಗರಿಗೆ ಹೊಸ ದೃಷ್ಟಿಕೋನ, ಅವರ ಅಭಿಪ್ರಾಯಗಳು, ಸಲಹೆಗಳು ಹಾಗೂ ವಿಮರ್ಶೆಗಳಿಗೆ ಅವಕಾಶವಿದೆ ಎಂದು ತಿಳಿಸಲು ನಾವು ಹರ್ಷಿಸುತ್ತೇವೆ.

ದಯವಿಟ್ಟು ಕೆಳಗೆ ನೀಡಿರುವ ಇಮೇಲ್‌ಗೆ ನಿಮ್ಮ ಪ್ರತಿಕ್ರಿಯೆಗಳನ್ನು ಕಳುಹಿಸಿ.

**ಪ್ರೇಮಾ ರಘುನಾಥ್**
ಮುಖ್ಯ ಸಂಪಾದಕರು

# ಪರಿವಿಡಿ

# ಪರಿವಿಡಿ

# ಎಲ್ಲರಿಗೂ ಶಿಕ್ಷಣ | ಒಂದು ಸಂಭವನೀಯ ಸುಂದರ ಚಿತ್ರಣ

ಅನಂತ್ ಗಂಗೋಲ

'ಎಲ್ಲರಿಗೂ ಶಿಕ್ಷಣ' (Education for All) ಎಂಬ ಪರಿಕಲ್ಪನೆಯು ಒಳಗೊಳ್ಳುವಿಕೆಯ ಸಮಾಜದ ಅಡಿಪಾಯ. ಆದರೆ ಅಸ್ತಿತ್ವದಲ್ಲಿರುವ ಶಿಕ್ಷಣ ವ್ಯವಸ್ಥೆ ಮತ್ತು ಚಿಂತನೆಗಳನ್ನು ವಿಸ್ತರಿಸುವುದರಿಂದಷ್ಟೇ ಇದನ್ನು ಸಾಧಿಸಲು ಸಾಧ್ಯವಿಲ್ಲ. ಆಲೋಚನೆಯಲ್ಲಿ ಕ್ರಿಯಾತ್ಮಕ ಬದಲಾವಣೆ ಅಗತ್ಯ. ಆದ್ದರಿಂದಲೇ ಪ್ರಸ್ತುತ ಚಾಲ್ತಿಯಲ್ಲಿರುವ ಶಿಕ್ಷಣ ವ್ಯವಸ್ಥೆಯ ನಂಬಿಕೆ, ಸಿದ್ಧಾಂತ, ಆಚರಣೆ ಮತ್ತು ಸಂಪನ್ಮೂಲಗಳ ಬಗ್ಗೆ ಯೋಚಿಸುವುದು ಮತ್ತು ಈ ಶಿಕ್ಷಣ ವ್ಯವಸ್ಥೆ ಸೂಕ್ತವಾಗಿದೆಯೇ ಅಥವಾ ಮೂಲಭೂತ ಬದಲಾವಣೆಗಳ ಅವಶ್ಯಕತೆ ಇದೆಯೇ ಎಂದು ನಿರ್ಣಯಿಸುವುದು ಅಗತ್ಯ.

**ಒಂದು ಕನಸಿನ ಪಯಣ**

ಒಬ್ಬ ವ್ಯಕ್ತಿಯ ಮತ್ತು ದೇಶದ ಬೆಳವಣಿಗೆಯಲ್ಲಿ ಶಿಕ್ಷಣದ ಪಾತ್ರ ಅಪಾರವಾದ್ದರಿಂದ ಪ್ರತಿಯೊಬ್ಬನೂ ಶಿಕ್ಷಣ ಪಡೆಯಲೇಬೇಕೆಂಬ ಸರಳ ಉದ್ದೇಶವುಳ್ಳ 'ಎಲ್ಲರಿಗೂ ಶಿಕ್ಷಣ' ಎಂಬ ಪರಿಕಲ್ಪನೆಯು ಒಂದು ಸುಂದರ ಕನಸು. ಅನುಸರಣೆಗೆ ಇದೊಂದು ಉದಾತ್ತ ಆದರ್ಶವಾದರೂ ಅನಕ್ಷರತೆಯಿಂದ ಸಾಕ್ಷರತೆಯೆಡೆಗೆ ಸಮಾಜದಲ್ಲಿ ಬದಲಾವಣೆ ತರಲು ಇದು ಅತ್ಯಮೂಲ್ಯ ಸಾಧನ. ಪ್ರತ್ಯೇಕತೆಯಿಂದ ಒಳಗೊಳ್ಳುವಿಕೆಯತ್ತ, ಅಸಮಾನತೆಯಿಂದ ಸಮಾನತೆಯತ್ತ, ಅನ್ಯಾಯದಿಂದ ನ್ಯಾಯದತ್ತ ಮತ್ತು ಸಂಘರ್ಷದಿಂದ ಶಾಂತಿಯತ್ತ ಸಮಾಜದ ಪರಿವರ್ತನೆಗೆ ಶಿಕ್ಷಣ ಒಂದು ವಾಹಕವಾಗಬಲ್ಲುದು. ಹಾಗಾಗಿ ಪರಿಣಾಮ ಮತ್ತು ಅನುಷ್ಠಾನಗಳ ವಿವಿಧ ನಿರೀಕ್ಷೆಗಳನ್ನು ಒಳಗೊಂಡ ಬಹು ಆಯಾಮವುಳ್ಳ ಕನಸು ಇದು. ಆರಂಭದಲ್ಲಿ ಶ್ರೇಣೀಕೃತ ಸಮಾಜದಲ್ಲಿ ಶಿಕ್ಷಣ ಕೇವಲ ಮೇಲ್ವರ್ಗಕ್ಕೆ ಮಾತ್ರ ಸೀಮಿತವೆಂಬ ನಿರ್ಬಂಧದ ಜೊತೆಗೆ, ಕಲಿಕೆಯ ತೆಕ್ಕೆಗೆ ಎಲ್ಲರನ್ನೂ ಒಳಗೊಳಿಸುವ ಇಚ್ಛಾಶಕ್ತಿಯ ಕೊರತೆಯೂ ಇತ್ತು. ಸೂಕ್ತ ಚಿಂತನಾಕ್ರಮ, ಸಂಘಟಿತ ಸಾಮಾಜಿಕ ಪ್ರಜ್ಞೆ ಮತ್ತು ಮೂಲಸೌಕರ್ಯಗಳ ಕೊರತೆ ಅಥವಾ ಇವೆಲ್ಲದರ ಒಟ್ಟು ಪರಿಣಾಮದಿಂದಲೂ ಉದ್ದೇಶಿತ ಬದಲಾವಣೆ ತರುವಲ್ಲಿ ವಿಫಲರಾಗಿರಬಹುದು.

ಸ್ವಾತಂತ್ರ್ಯಾ ನಂತರದ ಮೊದಲ ಐದು ದಶಕಗಳಲ್ಲಿ ಶಿಕ್ಷಣ ಬಹುಸಂಖ್ಯಾತರನ್ನು ತಲುಪಲಿಲ್ಲ. ಈ ದೂರ ಉಳಿಯುವಿಕೆಯು ಶಾಲಾ ಕಟ್ಟಡಕ್ಕಿದ್ದ ಭೌತಿಕ ಅಂತರ ಮಾತ್ರವಾಗಿರದೆ, ಒಳಗೊಳ್ಳುವ ಸಮಾಜದತ್ತ ಮೂಲ ಮೆಟ್ಟಿಲಾಗಬಲ್ಲ ಶಿಕ್ಷಣದ ಶಕ್ತಿಯನ್ನು ನಿರ್ಲಕ್ಷಿಸಿದ ಶಿಕ್ಷಣದ ಮೇಲಿನ ನಂಬಿಕೆ ಮತ್ತು ಶೈಕ್ಷಣಿಕ ಆದ್ಯತೆಯ ಕೊರತೆಯೂ ಆಗಿತ್ತು. ಯಾಕೆಂದರೆ ಅದು ಒಂದು ಒಳಗೊಳ್ಳುವ ಸಮಾಜಕ್ಕೆ ಮೂಲಭೂತ ಪ್ರವೇಶಿಕೆಯಾಗುವ ಪ್ರಭಾವವನ್ನು ಕಡೆಗಣಿಸಿತು. ಬಹಳಷ್ಟು ಪ್ರದೇಶಗಳಲ್ಲಿ ಶಾಲೆಗಳೇ ಇರಲಿಲ್ಲ, ಶಾಲೆ ಮತ್ತು ಮಕ್ಕಳು ಎರಡೂ ಇರುವ ಕಡೆ ಎಲ್ಲರನ್ನೂ ಒಳಗೊಳ್ಳುವ ದೃಢ ನಿಶ್ಚಯ ಇರಲಿಲ್ಲ.

14 ವರ್ಷದ ಒಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ (Universal Elementary Education-UEE)ವನ್ನು ಸಂವಿಧಾನವೇ ನಿರ್ದೇಶಿಸಿದೆ. ಅನಂತರದ ಪಂಚವಾರ್ಷಿಕ ಯೋಜನೆಗಳಲ್ಲೂ ಈ ಗುರಿಯೆಡೆಗೆ ಲಕ್ಷ್ಯ ಹರಿಸಲಾಗಿದೆ. ಆದರೆ ಬಾಣಗಳು ಗುರಿ ತಲುಪುವ ಮೊದಲೇ ಬಿದ್ದು ಹೋದವು: ರಾಧಾಕೃಷ್ಣನ್ ಆಯೋಗ (1948–49) ಮತ್ತು ಮುದಲಿಯಾರ್ ಆಯೋಗ (1952–53)ಗಳು ಕ್ರಮವಾಗಿ ವಿಶ್ವವಿದ್ಯಾನಿಲಯ ಮತ್ತು ಪ್ರೌಢ ಶಿಕ್ಷಣದ ಮೇಲಷ್ಟೇ ಗಮನ ಕೇಂದ್ರೀಕರಿಸಿದವು. ನಂತರ ಬಂದ ಕೊಠಾರಿ ಆಯೋಗ (1964–66) ಮಾತ್ರ ಪ್ರಾಥಮಿಕ ಶಿಕ್ಷಣವನ್ನೂ ಒಳಗೊಳ್ಳುವಂತೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ಆದರೆ ಶಿಕ್ಷಣದ ಸಾರ್ವತ್ರಿಕತೆ ಎಂಬುವುದು ಇನ್ನೂ ಹಾರೈಕೆಯಾಗಿ ಅಷ್ಟೇ ಉಳಿದಿತ್ತು.

**ಒಂದು ಸುಗಮ ಹಾದಿ**

ನಂತರದಲ್ಲಿ 'ಎಲ್ಲರಿಗೂ ಶಿಕ್ಷಣ' ವಿಷಯದ ಮೇಲೆ ನಡೆದ ವಿಶ್ವ ಅಧಿವೇಶನ (World Conference on Education for All) (ಇಎಫ್ಎ, ಜಾಮಿಯನ್, ಥಾಯ್ಲೆಂಡ್, ಮಾರ್ಚ್ 1990) ಮತ್ತು ವಿಶ್ವ ಶಿಕ್ಷಣ ವೇದಿಕೆ (World Education Forum) ಯಿಂದಾಗಿ (ಡಕರ್, ಸೆನೆಗಲ್, ಏಪ್ರಿಲ್ 2000) ಭಾರತದೆಡೆಗೆ ಅಂತರರಾಷ್ಟ್ರೀಯ ಗಮನವು ಹರಿದು, ಖಾಸಗಿ, ಸರ್ಕಾರಿ ಜಂಟಿ ಸಹಭಾಗಿತ್ವ ಮತ್ತು ಬಾಹ್ಯ ಹೂಡಿಕೆಗಳು ಆರಂಭಗೊಂಡವು. 1994ರಲ್ಲಿ ಸರಕಾರದ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (The Government's District Primary Education Programme - DPEP) ಚಾಲನೆಗೆ ಬಂದಿತು. 2000ನೇ ವರ್ಷದಲ್ಲಿ ಮಹತ್ವದ ಸರ್ವ ಶಿಕ್ಷಣ ಅಭಿಯಾನ (Sarva Shiksha Abhiyan- SSA) ರೂಪುತಾಳಿತು. ಇದನ್ನು ಅನುಸರಿಸಿ 2009ರಲ್ಲಿ 'ಕಡ್ಡಾಯ ಶಿಕ್ಷಣದ ಹಕ್ಕು' ಕಾಯ್ದೆ (Right to Education Act) ಜಾರಿಗೆ ಬಂದಿತು.

ಕಳೆದ ಮೂರು ದಶಕಗಳಲ್ಲಿ ಪ್ರಾಥಮಿಕ ಹಂತದಲ್ಲಿ ಶಾಲೆಗಳು, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಗಣನೀಯ ಏರಿಕೆ ಆಗಿದೆ. ಆ ಮೂಲಕ ಔಪಚಾರಿಕ ಶಿಕ್ಷಣದ ವ್ಯಾಪ್ತಿಯಿಂದ ಚಾರಿತ್ರಿಕವಾಗಿ ಹೊರಗೇ ಉಳಿದಿದ್ದ ಹಲವು ಸಮುದಾಯಗಳು ಔಪಚಾರಿಕ ಶಿಕ್ಷಣದ ತೆಕ್ಕೆಗೆ ಸೇರಿಕೊಂಡವು. ಅತ್ಯಂತ ದೂರ ಪ್ರದೇಶಗಳಲ್ಲಿ ಅಥವಾ ಸಂಕಷ್ಟದಲ್ಲಿ ಬದುಕುತ್ತಿದ್ದ, ಎಲ್ಲಾ ರೀತಿಯ ಸವಲತ್ತುಗಳಿಂದ ವಂಚಿತರಾದ ಬುಡಕಟ್ಟು ಮತ್ತು ದಲಿತ ಸಮುದಾಯಗಳು, ಅದರಲ್ಲೂ ಗಮನಾರ್ಹ ಸಂಖ್ಯೆಯ ಹೆಣ್ಣುಮಕ್ಕಳನ್ನು ಇದು ಒಳಗೊಂಡಿತು. ಈ ಎಲ್ಲಾ ಆರಂಭಿಕ ಕೆಲಸಗಳು ಪೋಷಕರಲ್ಲಿ ಭರವಸೆ ಮತ್ತು ಮಹತ್ವಾಕಾಂಕ್ಷೆ ಮೂಡಲು ಕಾರಣವಾಯಿತು. ಯಾಕೆಂದರೆ ಈ ಹಂತದಲ್ಲಿ ಶಾಲೆಗೆ ಸೇರಿದ ಬಹಳಷ್ಟು ಮಕ್ಕಳು ಶಾಲೆಯ ಮುಖ ಕಂಡವರಲ್ಲ ಅಥವಾ ಪ್ರಾಥಮಿಕ ತರಗತಿಗಳಿಂದಾಚೆಗೆ ಶಿಕ್ಷಣ ಪಡೆಯಲು ಸಾಧ್ಯ ಇದ್ದವರಲ್ಲ.

**ಎಲ್ಲರಿಗೂ ಶಿಕ್ಷಣ: ಒಂದು ದಾರಿದೀಪ**

೯೦ರ ದಶಕದಲ್ಲಿ ಆರಂಭವಾದ ಡಿಪಿಇಪಿಯ ಸಾಧನೆ

ಅಸಾಧಾರಣವಾದದ್ದು. ಇಂದಿಗೂ ಹತಾಶೆ, ದುಃಖ, ಅಸಮಾನತೆ ಮತ್ತು ಬಡತನಗಳನ್ನೇ ಹೊದ್ದುಕೊಂಡಿದ್ದವರಿಗೆ ಸಮಾನ ಅವಕಾಶಗಳು, ಉತ್ಸಾಹ, ವಿಶ್ವಾಸ, ವಿಚಾರ ಮತ್ತು ಜ್ಞಾನವನ್ನು ಕಟ್ಟಿಕೊಡುವುದರ ಮೂಲಕ 'ಎಲ್ಲರಿಗೂ ಶಿಕ್ಷಣ'ವು ಸಮಾಜದ ಪರಿವರ್ತನೆಗೆ ಕಾರಣವಾಗಿದೆ. ಇಂದು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಹಿನ್ನೆಲೆಗಳನ್ನೂ ಮೀರಿ ಬಹಳಷ್ಟು ಸಮುದಾಯಗಳ ಮಕ್ಕಳು, ಮತ್ತವರ ಪೋಷಕರು ಶಿಕ್ಷಣದ ಲಾಭ ಪಡೆಯುತ್ತಿದ್ದಾರೆ. ಭಾರತಕ್ಕೆ ವಿದ್ಯಾರ್ಥಿವೇತನವೆಂಬ ಪರಿಕಲ್ಪನೆ ಹೊಸತಲ್ಲವಾದರೂ, 'ಎಲ್ಲರಿಗೂ ಶಿಕ್ಷಣ'ವೆಂಬ ಪರಿಕಲ್ಪನೆ ಮಾತ್ರ ಹೆಚ್ಚುಕಡಿಮೆ ಹೊಸತು. ಆ ಮೂಲಕ, ಸಾಮಾಜಿಕ ಪರಿವರ್ತನೆಗಾಗಿ ಒಂದು ಮೌನ ಚಿಂತನ–ಮಂಥನ ನಡೆಯುವಂತಾಯಿತು. ಬಹುಕಾಲದಿಂದ ಕಾಪಿಟ್ಟುಕೊಂಡು ಬಂದ ಕನಸಿನ ಸಾಕಾರಕ್ಕೆ ಇದೊಂದು ಅವಕಾಶವಾಯಿತು.

**ಕಾಳಜಿಗಳು: ಅಡೆತಡೆಗಳು**

ಇಂದಿನ ಕಾರ್ಯವಿಧಾನ ಒಳಗೊಳ್ಳುವಿಕೆಯೆಡೆಗೆ ಇದ್ದಾಗಲೂ ನಾವು ನಮ್ಮನ್ನೇ ಕೇಳಿಕೊಳ್ಳಬೇಕು: ಎಲ್ಲರಿಗೂ ಶಿಕ್ಷಣವೆಂಬ ಇಂಥ ವಿಸ್ತೃತ ಚಿಂತನೆಯ ಮೂಲಕ ಒಳಗೊಳ್ಳುವಿಕೆಯ ಸಮಾಜವನ್ನು ನೋಡಲು, ಒಪ್ಪಿಕೊಳ್ಳಲು ಮತ್ತು ಆ ನಿಟ್ಟಿನಲ್ಲಿ ಕಾರ್ಯ–ಪ್ರವೃತ್ತರಾಗಲು ನಾವು ಸಿದ್ಧರಿದ್ದೇವೆಯೇ? ನಾವೆಲ್ಲರೂ ಒಟ್ಟಾಗಿ ಹೆಚ್ಚು ನ್ಯಾಯಸಮ್ಮತ ಮತ್ತು ಸಮಾನತೆಯ ಜಗತ್ತನ್ನು ಬಯಸುತ್ತೇವೆಯೇ?

ಈ ಎರಡೂ ಪ್ರಶ್ನೆಗಳಿಗೂ ಉತ್ತರ 'ಇಲ್ಲ' ಎಂದೇ ಆಗಿದೆ. 1990ರ ಜಾಮಿಯನ್ ಅಧಿವೇಶನ (The Jomtien Conference-1990) ಮತ್ತು ಆ ಬಳಿಕ ನಡೆದ 1997ರ ಡಕರ್ ಘೋಷಣೆ (Dakar Declaration), ಒಂದು ತುರ್ತು ಕರಾರು ರೂಪಿಸಿ, ಆ ಮೂಲಕ 'ಎಲ್ಲರಿಗೂ ಶಿಕ್ಷಣದ' ಕಡೆಗೆ ಸಾಗಲು ಶಕ್ಯವಾಗುವಂತೆ ದೇಶಗಳಿಗೆ ಆರ್ಥಿಕ ಸಂಪನ್ಮೂಲಗಳನ್ನು ಒದಗಿಸಿತು. ಇದರ ಪರಿಣಾಮವಾಗಿ ಸರ್ವ ಶಿಕ್ಷಣ ಅಭಿಯಾನ (SSA) ಎಂಬ ಮಹತ್ವದ ಯೋಜನೆಯು ಆರಂಭವಾಯಿತು. ಹೊಸ ಶಾಲೆಗಳು ಪ್ರಾರಂಭವಾದವು, ಹೊಸ ವಿದ್ಯಾರ್ಥಿಗಳು ದಾಖಲಾದರು ಮತ್ತು ಹೊಸ ಶಿಕ್ಷಕರು ನೇಮಕಗೊಂಡರು.

ಆದರೆ ಶಿಕ್ಷಕರನ್ನು ಸಜ್ಜುಗೊಳಿಸಲು ಮತ್ತು ಶೈಕ್ಷಣಿಕ ಬೆಂಬಲ ನೀಡುವ ಹೊಸ ವ್ಯವಸ್ಥೆಯನ್ನು ರೂಪಿಸುವ, ಅಭಿವೃದ್ಧಿಪಡಿಸುವ ಮಹತ್ವದ ವಿಚಾರವೇ ಬಹುಕಾಲದವರೆಗೆ ಈಡೇರಲೇ ಇಲ್ಲ. ಇದರ ಪರಿಣಾಮವಾಗಿ ಸಿದ್ಧತೆ ಇಲ್ಲದ/ತರಬೇತಿ ಇಲ್ಲದ ಶಿಕ್ಷಕರು ಶಾಲೆಗಳಿಗೆ ನೇಮಕಗೊಳ್ಳುವುದರ ಜೊತೆಗೆ ಅಸಮರ್ಪಕ ಅಥವಾ ಶೈಕ್ಷಣಿಕ ಬೆಂಬಲ ವ್ಯವಸ್ಥೆಯೇ ಇಲ್ಲದ ಪರಿಸ್ಥಿತಿ ಉಂಟಾಯಿತು. ಶಾಲೆಗಳಿಗೆ ಭಾರೀ ಪ್ರಮಾಣದಲ್ಲಿ ವಿದ್ಯಾರ್ಥಿ ಸಮೂಹ ಹರಿದು–ಬಂದಾಗ, ಅದರಲ್ಲೂ ಬಹುತೇಕರು ಮೊದಲ ತಲೆಮಾರಿನ ಕಲಿಕಾರ್ಥಿ ಕುಟುಂಬದವರಾಗಿದ್ದುದರಿಂದ ಅವರನ್ನು ಹೇಗೆ ನಿರ್ವಹಿಸುವುದು ಎಂಬ ತಿಳುವಳಿಕೆಯ ಕೊರತೆ ಕಂಡುಬಂದಿತು. ಆ ಮಕ್ಕಳಿಗೆ ಶಾಲೆಯ ಭಾಷೆ ಮತ್ತು ಸಂಸ್ಕೃತಿಯನ್ನು ಅರ್ಥ–ಮಾಡಿಕೊಳ್ಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ ಮತ್ತು ಶಿಕ್ಷಕರಿಗೂ ಈ ವಿಶಾಲ ಸಮೂಹದ ಮಕ್ಕಳ ಭಾಷೆ ಮತ್ತು ಅವರ ಸಮ್ಮಿಶ್ರ ಸಂಸ್ಕೃತಿಯೊಂದಿಗೆ ವ್ಯವಹರಿಸುವುದು ಕಷ್ಟಸಾಧ್ಯವಾಯಿತು. ದೇಶದ ಅತ್ಯಂತ ದೂರಪ್ರದೇಶಗಳ ಸರಕಾರಿ ಶಾಲೆಗಳಿಗೆ ನೇಮಕವಾದ ಬಹುತೇಕ ಶಿಕ್ಷಕರಿಗೆ ತಮ್ಮದಲ್ಲದ ಸಮುದಾಯಗಳ ಜೊತೆ ವಾಸಿಸುವ ಅಥವಾ ಅಂತಹ ಶಾಲೆಗಳಿಗೆ ಪ್ರಯಾಣಿಸುವ ಸವಾಲು ಎದುರಾಯಿತು. ತರಬೇತಿ ಇಲ್ಲದ ಮತ್ತು ಕಡಿಮೆ ವೇತನ ಪಡೆಯುವ ಶಿಕ್ಷಕರು ಅತ್ಯವಶ್ಯಕತೆಯಿದ್ದ ಮತ್ತು ಅತ್ಯಂತ ಅನನುಕೂಲತೆಗಳಿದ್ದ ಮಕ್ಕಳಿಗೆ ಶಿಕ್ಷಣವನ್ನು ನಿರ್ವಹಿಸು–ವಂತಾಯಿತು. ಎಲ್ಲಾ ವಿಚಾರಗಳನ್ನು ಸಮರ್ಪಕವಾಗಿ ಅರ್ಥೈಸಿಕೊಳ್ಳದ ಪರಿಣಾಮವಾಗಿ ಕಳಪೆ ನಿರ್ವಹಣೆಯ ಸಾರ್ವಜನಿಕ ಶಿಕ್ಷಣ ವ್ಯವಸ್ಥೆ, ಕಲಿಕೆಯೇ ಇಲ್ಲದ ಮಕ್ಕಳು, ಸಂಬಂಧ ಕಳಚಿದ ಸಮುದಾಯಗಳು ಮತ್ತು ಸ್ಥೈರ್ಯಗುಂದಿದ ಶಿಕ್ಷಕರು ರೂಪುಗೊಂಡರು.

**ಮೌಲ್ಯಮಾಪನದ ಸಮಯ**

ಇದನ್ನ ಪರಿಹರಿಸುವುದು ಹೇಗೆ? ಈಗ ಚಾಲ್ತಿಯಲ್ಲಿರುವ ತಿಳುವಳಿಕೆ, ಕಾಳಜಿ, ಸಂರಚನೆ, ಮನೋಭಾವ ಮತ್ತು ಕಾರ್ಯತಂತ್ರಗಳಿಂದ 'ಎಲ್ಲರಿಗೂ ಶಿಕ್ಷಣ'ದ ಗುರಿಯನ್ನು ಸಾಧಿಸಲು ಸಾಧ್ಯವಿದೆಯೆ? ಅಥವಾ ಈ ಗುರಿ ಸಾಧನೆಗೆ ಹೊಸ ಬಗೆಯ ತಿಳುವಳಿಕೆ, ಹೊಸ ಕಾಳಜಿ ಮತ್ತು ಮನೋಭಾವ, ಜೊತೆಗೆ ಹೊಸ ಕಾರ್ಯತಂತ್ರ, ಸಂರಚನೆ ಮತ್ತು ಮಾನದಂಡಗಳ ಅಗತ್ಯವಿದೆಯೇ?

**ದೊಡ್ಡ ಬದಲಾವಣೆ ಎಂದರೆ ಹಲವು ಪುಟ್ಟ ಬದಲಾವಣೆಗಳು**

ಮೊದಲ ಬದಲಾವಣೆ ಎಂದರೆ ಶಾಲೆಗೆ ದಾಖಲಾಗದೆ ಇರುವ ವಿವಿಧ ಅಂಗ, ಸಮುದಾಯಗಳ ಮಕ್ಕಳನ್ನು ಸರಕಾರಿ ಶಾಲೆಗಳಿಗೆ ಸೇರಿಸುವುದು, ಅದೇ ವೇಳೆಗೆ ಅನುಕೂಲಸ್ಥರ ಮಕ್ಕಳು ಖಾಸಗಿ ಶಾಲೆಗಳಿಗೆ ಬದಲಾಯಿಸಿಕೊಂಡು, ಅಂತರ ಕಾಯ್ದುಕೊಂಡದ್ದು. ಇದರ ಪರಿಣಾಮವಾಗಿ ಸರಕಾರಿ ಶಾಲೆಗಳು ಬೇರೆ ಆಯ್ಕೆಗಳೇ ಇಲ್ಲದಿರುವ ಅತ್ಯಂತ ಬಡತನದ ಹಿನ್ನೆಲೆಯ ಮಕ್ಕಳ ಶಾಲೆಗಳೆನಿಸಿದವು.

ಸರ್ಕಾರೇತರ ಸಂಸ್ಥೆ(ಎನ್‌ಜಿಒ)ಗಳಿಗೆ ಸರ್ಕಾರಿ ಶಿಕ್ಷಣ ವ್ಯವಸ್ಥೆಯೊಂದಿಗೆ ತೊಡಗಿಕೊಳ್ಳುವ ಅವಕಾಶ ಸೃಷ್ಟಿಯಾಗಿದ್ದು ಎರಡನೆಯ ಬದಲಾವಣೆ. ಎನ್‌ಜಿಒಗಳು ಶಾಲೆಗಳಲ್ಲಿ ಮತ್ತು ರಾಷ್ಟ್ರ, ರಾಜ್ಯ ಮತ್ತು ಸ್ಥಳೀಯ ಮಟ್ಟದಲ್ಲಿ ಇಲಾಖೆಯೊಂದಿಗೆ ವಿವಿಧ ಪಾತ್ರಗಳನ್ನು ನಿರ್ವಹಿಸುವುದಕ್ಕೆ ಪ್ರಾರಂಭಿಸಿದವು. ಟೀಚ್ ಫಾರ್ ಇಂಡಿಯಾ (ಟಿಎಫ್‌ಐ), ಕೈವಲ್ಯ ಎಜುಕೇಷನ್ ಫೌಂಡೇಷನ್, ಅಜೀಂ ಪ್ರೇಮ್‌ಜಿ ಫೌಂಡೇಷನ್ ಮತ್ತು ಇನ್ನೂ ಹಲವು ಸಂಸ್ಥೆಗಳ ಕೊಡುಗೆಗಳು ತಳಮಟ್ಟದಲ್ಲಿ ಪರಿಣಾಮವನ್ನುಂಟು ಮಾಡುವುದಕ್ಕೆ ಪ್ರಾರಂಭಿಸಿದವು. ಸದ್ಯ ತಳಮಟ್ಟದಲ್ಲಿ ಹೆಚ್ಚಿನ ಜನ ಮತ್ತು ಗುಂಪುಗಳು ತೊಡಗಿಕೊಂಡಿದ್ದು, ವಿವಿಧ ಶೈಕ್ಷಣಿಕ ಸಂವಾದಗಳನ್ನು ಮುನ್ನೆಲೆಗೆ ತರುತ್ತಿದ್ದಾರೆ.

ಈ ಎಲ್ಲಾ ಬೆಳವಣಿಗೆಗಳ ಧನಾತ್ಮಕ ಅಂಶವೆಂದರೆ ಯಾರು ಹೊರಗುಳಿದಿದ್ದರೋ ಅವರು ನಮ್ಮ ಕಾಲದ ಅತ್ಯಂತ ಮಹತ್ವದ ಜೀವನ ಕೌಶಲವಾದ ಓದು ಮತ್ತು ಬರೆಯುವುದನ್ನು ಗಳಿಸುವ ಸಮಾಜದ ತೆಕ್ಕೆಯೊಳಗೆ ಸೇರಿಕೊಳ್ಳುವಂತಾದದ್ದು. ಹಲವು ವಿದ್ವಾಂಸರು ಮತ್ತು ಸಾಮಾಜಿಕ ಅರಿವುಳ್ಳ ಜನರು ಗುಣಮಟ್ಟದ ಶಿಕ್ಷಣವನ್ನು ಒದಗಿಸುವ ಜವಾಬ್ದಾರಿಯನ್ನ ವಹಿಸಿಕೊಳ್ಳುವುದಕ್ಕೆ ಆರಂಭಿಸಿದರು. ಮಕ್ಕಳ ಆರಂಭಿಕ ವರ್ಷಗಳ ಸಾಮಾಜಿಕ ತಳಪಾಯ ಮತ್ತು ಪೌಷ್ಟಿಕತೆ, ಆರೋಗ್ಯ ಸುಧಾರಣೆಗಾಗಿ ಆರಂಭಿಕ ಬಾಲ್ಯಕಾಲದ ಶಿಕ್ಷಣದ (Early Childhood Education-ECE) ಪರವಾಗಿ ವಕಾಲತ್ತು ವಹಿಸುವುದು ಆರಂಭಗೊಂಡವು. ಆದಾಗ್ಯೂ, ಇದರ ಇನ್ನೊಂದು ಮಗ್ಗುಲಿನ ಕಥೆ ಅರೆಮನಸ್ಕ ಬದ್ಧತೆ ಮತ್ತು ರಾಜಕೀಯ ಇಚ್ಛಾಶಕ್ತಿಯದ್ದು; ಸಮಾಜದ ದೊಡ್ಡ ಭಾಗದ ಸಂಪೂರ್ಣ ನಿರಾಸಕ್ತಿ; ಹಾಗೂ ಅಗತ್ಯತೆ ಮತ್ತು ಬೇಡಿಕೆಗಳನ್ನು ಅರ್ಥಮಾಡಿಕೊಳ್ಳಲು ಬೇಕಾಗಿರುವ ಶೈಕ್ಷಣಿಕ ಸಂಶೋಧನೆ,

ಆವಿಷ್ಕಾರಗಳ ಕೊರತೆ. ಆದ್ದರಿಂದ, ಮಕ್ಕಳ ಕಲಿಕಾ ಫಲಿತಗಳು ಮತ್ತು ಕಲಿಕಾ ಅನುಭವಗಳ ಮೇಲಿನ ತಕ್ಷಣದ ಪರಿಣಾಮ ಮತ್ತು ಪ್ರಭಾವ ಉತ್ತೇಜಕರವಾಗಿ ಇರಲಿಲ್ಲ. ಧನಾತ್ಮಕ ಅಂಶವನ್ನು ಕುರಿತ ಮೊದಲ ವಿವರಣೆ ಭರವಸೆಯನ್ನು ಕೊಡುತ್ತದೆ ಮತ್ತು ವ್ಯಾಪಕವಾದ ಹತಾಶೆಗಳ ವಿರುದ್ಧ ಹೋರಾಡಲು ನೆರವಾಗುತ್ತದೆ. ಆದರೆ ಎರಡನೆಯ ವಿವರಣೆ, ಪ್ರಜ್ಞಾಪೂರ್ವಕ ಅಥವಾ ಅಪ್ರಜ್ಞಾ-ಪೂರ್ವಕವಾಗಿ ಈಗಾಗಲೇ ನಿರಾಶೆಗೊಳಗಾಗಿರುವ ಸಮಾಜಕ್ಕೆ ಮತ್ತಷ್ಟು ಹತಾಶೆಯನ್ನು ಮೂಡಿಸುತ್ತದೆ.

ನನ್ನ ತಿಳುವಳಿಕೆ ಮತ್ತು ದೃಷ್ಟಿಕೋನಗಳ ಪ್ರಕಾರ, 'ಎಲ್ಲರಿಗೂ ಶಿಕ್ಷಣ' ಎಂಬ ಸಲಹೆಯು ಒಂದು ಹೊಸ ಮತ್ತು ಸವಾಲಿನ ಸಾಮಾಜಿಕ ಪರಿಕಲ್ಪನೆ. ಹೊಸ ಸಂದರ್ಭಕ್ಕೆ ಪ್ರತಿಯಾಗಿ ಹಳೆಯ ಮತ್ತು ಪ್ರಚಲಿತದಲ್ಲಿರುವ ಮಾನದಂಡಗಳನ್ನು ಮೌಲ್ಯಮಾಪನ ಮಾಡುವುದರಿಂದ ಮಾತ್ರ ಅಪೂರ್ಣ ಮತ್ತು ತಪ್ಪು ನಿರೂಪಣೆಗೆ ಕಾರಣವಾದ ಪರಿಸ್ಥಿತಿಯೊಳಗೆ ಹುದುಗಿರುವ ಸಮಸ್ಯೆಗಳನ್ನು ಹೊರಗೆಳೆಯುವುದು ಸಾಧ್ಯವಾಗುತ್ತದೆ. ಅದು ಶೈಕ್ಷಣಿಕ ಪ್ರಯತ್ನಗಳ ಜೊತೆ ತೊಡಗಿಸಿಕೊಂಡಿರುವವರನ್ನು ಮತ್ತಷ್ಟು ನಿರಾಶೆಗೊಳಿಸಬಹುದು. ಆದ್ದರಿಂದ, ಈ ಮಹತ್ವದ ಯೋಜನೆಗೆ ಹೊಸ ಮಾನದಂಡಗಳನ್ನು ಹುಡುಕುವುದಕ್ಕೆ ಹೊಸ ದೃಷ್ಟಿಕೋನಗಳು ಬೇಕು.

**ಬದಲಾಗುತ್ತಿರುವ ಸಂದರ್ಭವನ್ನು ಅರ್ಥೈಸುವುದು:**
ನಮ್ಮ ದೇಶ ಹಲವು ಬಗೆಯ ವೈವಿಧ್ಯತೆಗಳಿಂದ ಮಾತ್ರವಲ್ಲ ಅಸಮಾನತೆಗಳಿಂದಲೂ ಕೂಡಿದೆ. ಮೊದಲನೆಯದಾಗಿ, ಶೈಕ್ಷಣಿಕ ರಂಗದಲ್ಲಿ ಕೆಲಸ ಮಾಡುತ್ತಿರುವ ಮಕ್ಕಳು, ಶಿಕ್ಷಕರು ಮತು ಇತರರು ಸಾಂಪ್ರದಾಯಿಕ ಪಿತೃಪ್ರಧಾನ ಮತ್ತು ಜಮೀನ್ದಾರಿ ವ್ಯವಸ್ಥೆಯ ಹಿನ್ನೆಲೆಯಿರುವ ಒಂದು ಸಮಾಜದಿಂದ ಬಂದವರಾಗಿರುತ್ತಾರೆ. ಎರಡನೆಯದಾಗಿ ಶಾಲೆಗಳು ಕೂಡಾ ಇದೇ ತರಹದ ಮತ್ತು ಇತರ ಹಲವು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಅಸಮಾನತೆಗಳಲ್ಲಿ ಕಾರ್ಯನಿರ್ವಹಿಸುತ್ತವೆ. ಸಾಮಾಜಿಕ-ರಾಜಕೀಯ ಸಮಾನತೆ, ಪರಸ್ಪರ ಸಹೋದರತೆ ಅಥವಾ ಹೃದಯವಂತಿಕೆಯಿಂದ ಶಿಕ್ಷಣವು ಪ್ರತ್ಯೇಕಗೊಂಡಿತಾದರೆ ಅದರ ಅರ್ಥವನ್ನು ಕಳೆದುಕೊಳ್ಳುತ್ತದೆ ಎನ್ನುವುದು ಮೂರನೆಯ ಆಯಾಮ.

ಕೆಲವು ಘಟನಾವಳಿಗಳ ಬೆಳಕಿನಲ್ಲಿ ನಾವು ಈ ವಿಷಯವನ್ನು ನೋಡೋಣ. ಮಧ್ಯ ಭಾರತದ ಶಾಲೆಯೊಂದಕ್ಕೆ ಪರಿವೀಕ್ಷಣೆಗಾಗಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ (District Institute of Education and Training-DIET) ಪ್ರಾಂಶುಪಾಲರು ಭೇಟಿ ನೀಡಿದರು. ಹಾಜರಿ ಪುಸ್ತಕವನ್ನು ಪರಿಶೀಲಿಸುವಾಗ ಕೆಲವು ಮಕ್ಕಳ ಹೆಸರುಗಳಲ್ಲಿ ದೋಷವಿರುವಂತೆ ಅವರಿಗೆ ಅನ್ನಿಸಿತು. ಪ್ರಾಂಶುಪಾಲರು ಈ ವಿಷಯವನ್ನು ಶಿಕ್ಷಕರೊಂದಿಗೆ ಚರ್ಚಿಸಿದರು. 'ಸರ್ ನಾನೇನು ಮಾಡಲಿ? ಅನಕ್ಷರಸ್ಥ ಪೋಷಕರು ಅವರಿಗೆ ಹೀಗೆ ಹೆಸರಿಟ್ಟಿದ್ದಾರೆ' ಎಂದು ಶಿಕ್ಷಕರು ಹೇಳಿದರು.

ಪ್ರಾಂಶುಪಾಲರು ಪೋಷಕರನ್ನು ಕರೆತರುವಂತೆ ಹೇಳಿ ಮಕ್ಕಳನ್ನು ಮನೆಗೆ ಕಳುಹಿಸಿದರು. ಬಹೇಲಿಯ ಸಮುದಾಯದವರೇ ಹೆಚ್ಚಿರುವ ಹಳ್ಳಿಯ ಪಕ್ಕದಲ್ಲೇ ಶಾಲೆ ಇತ್ತು. ಮುಂಜಾನೆ ಅಥವಾ ಮುಸ್ಸಂಜೆಯ ಹೊತ್ತಲ್ಲಿ ಹಕ್ಕಿ ಹಿಡಿಯುವ ಕೆಲಸ ಮಾಡುತ್ತಾರಾದ್ದರಿಂದ ಕೂಡಲೇ ಅವರು ಶಾಲೆಗೆ ಬಂದರು. ನಂತರ ಪ್ರಾಂಶುಪಾಲರು ಮಕ್ಕಳ ಹೆಸರುಗಳನ್ನು ಹೆಚ್ಚು ಸುಂದರವಾಗಿ ಅಥವಾ 'ನಾಗರೀಕ'ವಾಗಿ ಕಾಣುವಂತೆ ಬದಲಾಯಿಸತೊಡಗಿದರು. ಉದಾಹರಣೆಗೆ, ಚಿಂತಾಬಾಯಿಯ ಹೆಸರನ್ನು ಚೇತನಾಕುಮಾರಿಯೆಂದು, ಕಲ್ಲಿಬಾಯಿಯ ಹೆಸರನ್ನು ಕಲಾವತಿಯೆಂದು ಪರಿವರ್ತಿಸಿದರು. ಪೋಷಕರು ಈ ಬದಲಾವಣೆಯನ್ನು ಇಷ್ಟಪಟ್ಟರೋ ಇಲ್ಲವೋ, ಆದರೆ ಯಾವುದೇ ತಕರಾರು ಎತ್ತಲಿಲ್ಲ. ಬಹುಶಃ ಅವರು ತಮ್ಮ ಮಕ್ಕಳಿಗೆ ಶಿಕ್ಷಣ ಪಡೆಯಲು ಇದೊಂದು ಕರಾರು ಇರಬೇಕೆಂದು ಒಪ್ಪಿಕೊಂಡಿರಬೇಕು.

**ಚಿಂತಾಬಾಯಿ ಮತ್ತು ಕಲ್ಲಿ ಹೆಸರುಗಳ ಬದಲಾವಣೆಯು ಎತ್ತಿದ ಕೆಲವು ಪ್ರಮುಖ ಪ್ರಶ್ನೆಗಳು:**
ಶಾಲೆಯಲ್ಲಿ ಆ ಮಕ್ಕಳ ಮೂಲ ಹೆಸರುಗಳಿಗೆ ಸ್ಥಾನವಿಲ್ಲವಾದರೆ, ಇನ್ನು ಅಲ್ಲಿ ಅವರ ಜೀವನಾನುಭವಗಳಿಗೆ ಅವಕಾಶವಿದ್ದೀತೇ?

- ಶಿಕ್ಷಣವೆಂದರೆ ಚೇತನಾಕುಮಾರಿ, ಕಲಾವತಿಯವರನ್ನು ಪ್ರತಿನಿಧಿಸುವ ಸಮಾಜದ ಆ ವರ್ಗಕ್ಕೆ ಮಾತ್ರ ಸೀಮಿತ ಎಂಬ ಅರ್ಥವೇ?
- ಶಿಕ್ಷಣ ಪಡೆಯಬೇಕೆಂದರೆ ಒಂದು ನಿರ್ದಿಷ್ಟ ಸಮುದಾಯವು ತನ್ನ ಸಾಂಸ್ಕೃತಿಕ ಅಸ್ಮಿತೆಯನ್ನು ಬಲಿ ಕೊಡಬೇಕೇ?

ಇತರೆ ಉದಾಹರಣೆಗಳನ್ನ ಉಲ್ಲೇಖಿಸಬಹುದು.

ಹೆಚ್ಚು ಶುಭ್ರವಾದ ಬಟ್ಟೆಗಳನ್ನು ತೊಟ್ಟು ಬರುವ ಮಕ್ಕಳನ್ನು ಹೊಗಳುವುದು ಮತ್ತು ಕೊಳೆಯಾದ ಬಟ್ಟೆ ತೊಡುವ ಮಕ್ಕಳನ್ನು ಶಿಕ್ಷಿಸುವುದು ಶಾಲೆಗಳಲ್ಲಿ ಸಾಮಾನ್ಯ. ನಾವಿದನ್ನು ಸೂಕ್ಷ್ಮತೆಯಿಂದ ಗಮನಿಸಿದರೆ, ಇಂತಹ ಸನ್ನಿವೇಶಗಳು ಭಾವನಾತ್ಮಕವಾಗಿ ಮಕ್ಕಳಲ್ಲಿ ಎಂತಹ ಹಾನಿಯನ್ನುಂಟು ಮಾಡುತ್ತವೆ ಎಂಬುದು ಗಮನಕ್ಕೆ ಬಂದೀತು. ಭಾಷೆಯೂ ಒಂದು ಪ್ರಮುಖ ವಿಷಯವೇ ಆಗಿದೆ. ಅದರ ಪ್ರಮಾಣಿತ ರೂಪ, ಸಮರ್ಪಕ ಉಚ್ಚಾರಣೆ ಇತ್ಯಾದಿಗಳು ಕುಟುಂಬದ ಮೊದಲ ತಲೆಮಾರಿನ ಶಾಲಾ ಕಲಿಕಾರ್ಥಿಗಳಿಗೆ ಅಸ್ತಿತ್ವದ ಬಿಕ್ಕಟ್ಟನ್ನು ತಂದೊಡ್ಡುತ್ತವೆ. ಇದನ್ನು ಅನುಭವಿಸಿದ ಯಾರಿಗಾದರೂ ಇದು ಅಮಾನವೀಯ ಮತ್ತು ವ್ಯಕ್ತಿಯ ಆತ್ಮಗೌರವವನ್ನು ಅಲ್ಲಾಡಿಸಬಲ್ಲುದು ಎಂಬುದು ಗೊತ್ತಾಗುತ್ತದೆ. ಇಂತಹ ವಿಚಾರಗಳ ಜೊತೆ ಒದ್ದಾಡುತ್ತಿರುವ ಮಕ್ಕಳನ್ನು ಶಿಕ್ಷಕರು ಆಗಾಗ 'ಕಲಿಕೆ-ಅಸಾಧ್ಯವಾದ-ಮಕ್ಕಳ' (Not-able-to-learn) ಗುಂಪಿಗೆ ಸೇರಿಸುತ್ತಾರೆ.

ಈ ಎಲ್ಲಾ ನಿದರ್ಶನಗಳು ಶಿಕ್ಷಣದ ಸುತ್ತಲಿನ ಅರ್ಥೈಸುವಿಕೆ ಮತ್ತು ಸಂವೇದನೆಗಳ ಬಗ್ಗೆ ಪ್ರಶ್ನೆ ಹುಟ್ಟಿಸುತ್ತವೆ. ಬಲು ದೊಡ್ಡ ಪ್ರಶ್ನೆಗಳೆಂದರೆ:

- ಮಕ್ಕಳು ಒಂದು ಚೌಕಟ್ಟಿಗೆ ಹೊಂದಿಕೆಯಾಗಬೇಕೇ, ಅಥವಾ ಅವರ ಸಾಂಸ್ಕೃತಿಕ ಹಿನ್ನೆಲೆಗೆ ಅನುಗುಣವಾಗಿ ಬದಲಾಯಿಸಿ-ಕೊಳ್ಳುವಂತೆ ಶೈಕ್ಷಣಿಕ ವ್ಯವಸ್ಥೆಯು ನಮ್ಯವಾಗಿರಬೇಕೇ?

- ಮಕ್ಕಳಲ್ಲಿ ಹಾಲಿ ಇರುವ ಜ್ಞಾನ ಮತ್ತು ಶಾಲೆಯೊಳಗೆ ಜ್ಞಾನವನ್ನು ಸಂರಚಿಸಿಕೊಳ್ಳುವ ಪ್ರಕ್ರಿಯೆಯ ಮಧ್ಯೆ ಪರಸ್ಪರ ಸಂವಾದವನ್ನು ಸ್ಥಾಪಿಸುವುದು ಅತ್ಯಂತ ಪ್ರಮುಖವಾದದ್ದು ಎಂಬುದನ್ನು ನಾವು ಹೇಗೆ ಕಂಡುಕೊಳ್ಳಬಹುದು?

- ಹೇಗೆ ಅಂತಹ ಒಂದು ಅರ್ಥೈಸುವಿಕೆ ಶೈಕ್ಷಣಿಕ ಪ್ರಕ್ರಿಯೆಯ ಭಾಗವಾದೀತು?

ಮುಂದುವರಿದು ಶಿಕ್ಷಕರ ತಯಾರಿ ಮತ್ತು ಸ್ವಾಯತ್ತತೆಯ ಕುರಿತು ಪರಿಶೀಲಿಸೋಣ. ಈ ಸಂದರ್ಭದಲ್ಲಿ ನನ್ನದೇ ಬೋಧನಾ ದಿನಗಳ, ಚಿಂತನೆಗೆ ಹಚ್ಚುವಂಥ ಒಂದು ಘಟನೆಯು ನೆನಪಾಗುತ್ತಿದೆ. ಒಂದು ದಿನ ಗುಂಡಿಲಾಲ್ ಎಂಬ ಹೆಸರಿನ ಮಗುವಿನ ಬಗ್ಗೆ ನನ್ನ ತರಗತಿಯ ಇತರ ಮಕ್ಕಳು ಒಂದೇ ಸಮನೆ ದೂರುತ್ತಿದ್ದರು. ನಾನು ಮಕ್ಕಳಿಗೆ ಒಂದಷ್ಟು ಕೆಲಸವನ್ನು ಮಾಡಲು ಕೊಟ್ಟು ನನ್ನದೇ ಕೆಲವು ಕೆಲಸಗಳಲ್ಲಿ ತಲ್ಲೀನನಾಗಿದ್ದೆ. ಹಾಗಾಗಿ ನನ್ನ ಸಂಪೂರ್ಣ ಗಮನವು ತರಗತಿಯ ಮೇಲೆ ಇರಲಿಲ್ಲ. ಕೊನೆಗೊಮ್ಮೆ ದೂರುಗಳನ್ನು ನಿರ್ಲಕ್ಷಿಸುವುದು ಕಷ್ಟವಾಗಿ ನಾನು ಗುಂಡಿಲಾಲನನ್ನು ಕರೆದು, 'ನಿನ್ನ ತುಂಟತನ ಅತಿಯಾಯಿತು! ಕಿವಿಗಳನ್ನು ಹಿಡಿದುಕೋ' ಎಂದು ಕಟುವಾಗಿ ಹೇಳಿದೆ.

ಗುಂಡಿಲಾಲ್ ಪ್ರತಿಕ್ರಿಯಿಸದಿದ್ದಾಗ ಮತ್ತೊಮ್ಮೆ ಜೋರಾದ ಧ್ವನಿಯಲ್ಲಿ ನಾನು ಹೇಳಿದೆ. ಈ ಬಾರಿ ಆತ ಮುಂದೆ ಬಂದು ನನ್ನ ಕಿವಿಗಳನ್ನು ಹಿಡಿದುಕೊಂಡ. ಅವನ ಈ ವರ್ತನೆ ಕಂಡು ನನಗೆ ಮೊದಲು ಆಶ್ಚರ್ಯವಾಯಿತು, ಕೋಪಗೊಂಡೆ. ಆದರೆ ನನ್ನ ಸೂಚನೆಯು ಕೇವಲ ಕಿವಿ ಹಿಡಿದುಕೋ ಎಂದು ಮಾತ್ರವಾಗಿತ್ತು ಎಂಬುದು ನಂತರ ಅರಿವಾಯಿತು. ಹಾಗಾಗಿ ಇದರಲ್ಲಿ ಗುಂಡಿಲಾಲನ ತಪ್ಪೇನೂ ಇರಲಿಲ್ಲ. ಆತ ಕಿವಿಗಳನ್ನು ಹಿಡಿದು–ಕೊಳ್ಳುವುದನ್ನು ಶಿಕ್ಷೆ ಎಂಬುದಾಗಿ ಭಾವಿಸಲಿಲ್ಲ ಅಥವಾ ಆತನಿಗೆ ಇಂತಹ ವರ್ತನೆಯ ಯಾವುದೇ ಪೂರ್ವಾನುಭವವೂ ಇರಲಿಲ್ಲ.

ಇಂತಹ ಹಲವು ಸಂಗತಿಗಳನ್ನು ಎಲ್ಲಾ ಮಕ್ಕಳು ತಿಳಿದಿದ್ದಾರೆ ಎಂದು ನಾವು ಊಹಿಸಿಕೊಳ್ಳುತ್ತೇವೆ. ಆದರೆ ನಾವು ಹೊಸ ತಲೆಮಾರಿನ ಶಾಲಾ ಕಲಿಕಾರ್ಥಿಗಳಿಗೆ ಶಾಲೆಯ ವಾತಾವರಣ ಮತ್ತು ಆಚರಣೆಗಳು ಹೊಸತು ಎಂಬುದನ್ನು, ಇವುಗಳು ಅವರಿಗೆ ವಿಲಕ್ಷಣವಾಗಿ ಮಾತ್ರವಲ್ಲ ಅವರ ಅಂತಃಸ್ಫುರಣೆಗೆ ಹಾನಿ ಮಾಡುತ್ತವೆ ಎಂಬುದನ್ನು ಮರೆತುಬಿಡುತ್ತೇವೆ.

**ನನ್ನ ಪಯಣ:**
ಮಧ್ಯಪ್ರದೇಶದ ರೈಸೆನ್ ಜಿಲ್ಲೆಯ ಅರಣ್ಯ ಮಧ್ಯದ ಬುಡಕಟ್ಟು ಹಳ್ಳಿಯೊಂದರಲ್ಲಿ ಕೆಲಸ ಮಾಡುವಾಗ ಸಿಕ್ಕ ಅನುಭವ, ನನಗೆ ಹಲವು ವಿಷಯಗಳನ್ನು ಕಲಿಸಿತು. ಆದರೆ ಇಲ್ಲಿ ನಾನು ಉಲ್ಲೇಖಿಸಲು ಇಷ್ಟಪಡುವ ವಿಷಯ ಈ ಲೇಖನದ ಕೇಂದ್ರ ವಿಚಾರವಾದ 'ಎಲ್ಲರಿಗೂ ಶಿಕ್ಷಣ'ಕ್ಕೆ ನೇರವಾಗಿ ಸಂಬಂಧಿಸಿದ್ದಾಗಿದೆ.

ಗೊಂಡ ಆದಿವಾಸಿ ಸಮುದಾಯದ ಮಕ್ಕಳಿಗೆ ಕಲಿಸುವುದಕ್ಕೆ ನಾನು ಪ್ರಾರಂಭಿಸಿದಾಗ, ಶತಮಾನಗಳಿಂದ ಆಡುಗಳನ್ನು ಮೇಯಿಸುತ್ತಾ, ಹೊಲಗಳಲ್ಲಿ ಹಕ್ಕಿಗಳನ್ನು ಬೆದರಿಸುತ್ತಾ, ತೆಂಡು ಎಲೆ ಅಥವಾ ಮಹುವಾ ಹಣ್ಣುಗಳನ್ನು ಸಂಗ್ರಹಿಸುತ್ತಾ, ಗೆಡ್ಡೆಗೆಣಸುಗಳನ್ನು ಅಗೆಯುತ್ತಾ, ಮರಗಳನ್ನು ಏರುತ್ತಾ, ನದಿಗಳಲ್ಲಿ ಈಜಾಡುತ್ತಾ ತಮ್ಮ ದಿವಸಗಳನ್ನು ಕಳೆಯುತ್ತಿದ್ದ ಅವರನ್ನು, ನಾಲ್ಕರಿಂದ ಐದು ಗಂಟೆಗಳ ಶಾಲಾ ಅವಧಿಯಲ್ಲಿ ಒಂದೇ ಜಾಗದಲ್ಲಿ ಕೂರಿಸುವುದೇ ಒಂದು ಸವಾಲಿನ ಕೆಲಸ ಎಂಬುದು ನನಗೆ ಬಲುಬೇಗನೆ ಅರಿವಾಯಿತು. ಆ ಮಕ್ಕಳು ಪ್ರತಿದಿನ ಹಲವು ಕಿಲೋಮೀಟರ್‌ಗಳಷ್ಟು ದೂರ ನಡೆಯುವ ಅಭ್ಯಾಸ ಹೊಂದಿದವರು ಮತ್ತು ದೈಹಿಕ ಶ್ರಮದ ರೂಢಿ ಇರುವವರು.

ಅಷ್ಟೊಂದು ದೀರ್ಘ ಸಮಯ ಒಂದೇ ಸ್ಥಳದಲ್ಲಿ ಕೂತಿರುವುದಕ್ಕೆ ಅವರಿಗೆ ಹೇಗೆ ಸಾಧ್ಯವಾಗುತ್ತದೆ? ಇನ್ನು ಅವರಿಗೆ ಓದುವ ಮತ್ತು ಬರೆಯುವ ಸಾಮರ್ಥ್ಯದ ಕಲಿಕೆಯನ್ನು ನಿರ್ವಹಿಸುವ ಬಗೆ ಹೇಗೆ? ಅವರಿಗೆ ಪ್ರತಿ ಮಂಗಳವಾರಗಳಲ್ಲಿ ವಾರದ ಸಂತೆ ಇರುವಾಗ ಭಾನುವಾರದ ಶಾಲಾ ಬಿಡುವಿಗೆ ಇರುವ ಮಹತ್ವವಾದರೂ ಏನು? ನಾಟಿ ಅಥವಾ ಬೆಳೆಗಳ ಕಟಾವು ಮಾಡುವ ಸಮಯದಲ್ಲಿ ಸಣ್ಣ ರೈತಾಪಿ ಕುಟುಂಬಗಳ ಮಕ್ಕಳ ಪಾತ್ರ ಹೇಗೆ ಬದಲಾಗುತ್ತದೆ? ಅಂತಹ ಒಂದು ಸಂದರ್ಭವನ್ನು ಶಾಲಾ ಆಡಳಿತವು ಹೇಗೆ ನಿರ್ವಹಿಸುತ್ತದೆ? ಶಾಲೆಗಳಿಗೆ ಸಂಬಂಧಿಸಿದಂತೆ ವಿವಿಧ ಹಂತಗಳಲ್ಲಿ ಕಾರ್ಯನಿರ್ವಹಿಸುವವರ ಎದುರು ಇಂಥ ಪ್ರಶ್ನೆಗಳು ತಲೆದೋರಲೇಬೇಕು. ಈ ಪ್ರಶ್ನೆಗಳು ಶಾಲೆ ಒಂದು ಸ್ಥಿರವಾದ ಜಾಗ, 45 ನಿಮಿಷಗಳ ಅವಧಿಗೆ ದಿನವನ್ನು ವಿಭಜಿಸಿ ರಚಿತವಾದ ವೇಳಾಪಟ್ಟಿ ಇರುವ ವ್ಯವಸ್ಥೆ ಎಂಬ ಪ್ರಚಲಿತ ಗ್ರಹೀತಗಳಿಂದ ದೂರ ಸರಿದು ಶಾಲೆಯನ್ನು ಬೇರೆಯದೇ ದೃಷ್ಟಿಯಿಂದ ನೋಡಲು ಒತ್ತಾಯಿಸುತ್ತದೆ. ಮಕ್ಕಳಿಗೆ, ಅವರ ಹವ್ಯಾಸಗಳು ಮತ್ತು ಆಸಕ್ತಿಗಳ ಮೇಲಿಂದ ವಿಭಿನ್ನವಾದ ಒಂದು ದೈಹಿಕ ಮತ್ತು ಸಾಂಸ್ಕೃತಿಕ ತಯಾರಿ ಮಾಡುವುದೆಂದರೆ, ಶಿಕ್ಷಕರಿಗೆ ಸ್ವಾಯತ್ತತೆಯನ್ನು ಒಳಗೊಂಡು ಸಂಪೂರ್ಣ ಶಿಕ್ಷಣ ವ್ಯವಸ್ಥೆಯನ್ನೇ ಪುನಾರಚಿಸುವ ಅವಶ್ಯಕತೆ ಎಂದಾಗುತ್ತದೆ.

ನಾನು ಶಿಕ್ಷಕನಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸಮಯ ಸಂದರ್ಭಗಳು ನನಗೆ ಅನುಕೂಲಕರವಾಗಿದ್ದವು. ಆ ಶಾಲೆಯು ಸರಕಾರಿ ಶಾಲೆಯಾಗಿರಲಿಲ್ಲ ಮತ್ತು ಅದಕ್ಕೆ ಸರಕಾರಿ ನೋಂದಣಿಯು ಅವಶ್ಯಕತೆಯಿರಲಿಲ್ಲ. ಜೊತೆಗೆ ಆ ಹಳ್ಳಿಯ ಜನರ ಅನುಭವದಲ್ಲಿ ಅಥವಾ ಆಶಯದಲ್ಲಿ ಶಿಕ್ಷಣವನ್ನು ಕುರಿತಂತೆ ಒಂದು ಪೂರ್ವನಿರ್ಧರಿತ ಅಭಿಪ್ರಾಯವೂ ಇರಲಿಲ್ಲ. ಈ ಎರಡೂ ಸಂಗತಿಗಳು ಮಕ್ಕಳ ಆಸಕ್ತಿ ಮತ್ತು ಪರಿಸ್ಥಿತಿಯನ್ನು ಗಮನದಲ್ಲಿಟ್ಟು ನನ್ನ ಹೊಸ ಆಲೋಚನೆಗಳ ಜೊತೆಗೆ ಪ್ರಯೋಗ ಮಾಡುವುದಕ್ಕೆ ಬೇಕಾದ ನಮ್ಯತೆಯನ್ನು ಒದಗಿಸಿದವು. ಈ ರೀತಿ ಶಿಕ್ಷಕನಾಗಿ ನನಗೆ ಅಚಾನಕ್ ಆಗಿ ಒದಗಿಬಂದ ಸ್ವಾಯತ್ತತೆಯನ್ನು ನಾನು ಸಂಪೂರ್ಣವಾಗಿ ಬಳಸಿಕೊಂಡೆ. ನಿರೀಕ್ಷೆಗೂ ಮೀರಿದ ಫಲಿತಾಂಶವು ಬಂದಿತ್ತು. ಬಹುತೇಕ ಮಕ್ಕಳು ತುಂಬು ಆಸಕ್ತಿಯಿಂದ ಸಾಕ್ಷರತೆಯ ಪ್ರಪಂಚಕ್ಕೆ ದಾಟಿಕೊಂಡರು. ಅವರಲ್ಲಿ ಅರ್ಧ–ಭಾಗಕ್ಕಿಂತ ಹೆಚ್ಚಿನ ಮಕ್ಕಳು ತಮ್ಮ ಶಿಕ್ಷಣವನ್ನು ಶಾಲೆಯನ್ನೂ ಮೀರಿ ಮುಂದುವರಿಸಿದರು. ಆ ಹಳ್ಳಿಯ ಬೇರೆ ಮತ್ತು ಇತರ ಹತ್ತಿರದ ಹಳ್ಳಿಗಳ ಮಕ್ಕಳಿಗೆ ಹೋಲಿಸಿದರೆ ಅವರು ಶಿಕ್ಷಣದಲ್ಲಿ ಗಮನಾರ್ಹ ಸಾಧನೆ ಮಾಡಿದರು. ಈ ಮಕ್ಕಳಿಗೆ ತಮ್ಮ ಆತ್ಮವಿಶ್ವಾಸವನ್ನು ಅಥವಾ ಸಾಂಸ್ಕೃತಿಕ ಅಸ್ಮಿತೆಯನ್ನು ಕಳೆದುಕೊಳ್ಳುವ ಯಾವ ಸಂದರ್ಭವೂ ಎದುರಾಗಲಿಲ್ಲ.

**ನಿರೂಪಣೆಯನ್ನು ಬದಲಾಯಿಸುವುದು – ಮುಂದಿನ ದಾರಿ:**
ಮೂಲ ಚಿಂತನೆಯ ಸುತ್ತ ಸಕಾರಾತ್ಮಕ ನಿರೂಪಣೆಗಳನ್ನು ಕಟ್ಟಿ, ನಕಾರಾತ್ಮಕ ಗ್ರಹಿಕೆಗಳನ್ನು ಎದುರಿಸಿ ನಿಲ್ಲದಿದ್ದರೆ ಸಾಮಾಜಿಕ ಪರಿವರ್ತನೆಯನ್ನು ಸಾಧಿಸಲು ಸಾಧ್ಯವಿಲ್ಲ. ಪ್ರಾಥಮಿಕ ಶಿಕ್ಷಣ ಹಂತದಲ್ಲಿ (ಮತ್ತು ಪ್ರಾಥಮಿಕ ಮಟ್ಟದ ಕೆಲವು ಹಂತದವರೆಗೆ) ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯು ಧ್ವನಿ ಇಲ್ಲದ ಅಥವಾ ಆಯ್ಕೆಗಳಿಲ್ಲದ ಸಮುದಾಯಗಳ ಮಕ್ಕಳ ಅಗತ್ಯವನ್ನು ಪೂರೈಸುವ ಜಾಗಗಳಾಗುತ್ತವೆ. ಶ್ರೀಮಂತ ಮತ್ತು ಮಧ್ಯಮ ವರ್ಗದವರು ಸರಕಾರಿ ವ್ಯವಸ್ಥೆಯಿಂದ ಖಾಸಗಿ ಶಾಲೆಗಳಿಗೆ ಬದಲಾಯಿಸಿ–ಕೊಳ್ಳುವುದು ಅವರು ಶಾಲೆ ಮತ್ತು ವ್ಯವಸ್ಥೆ ಎರಡನ್ನೂ ಕೈಬಿಟ್ಟಂತೆಯೇ ಸರಿ. ಇದು ಸರಕಾರಿ ಶಾಲೆಯಲ್ಲಿರುವ ಮಕ್ಕಳ ಪೋಷಕರು, ದೊಡ್ಡ ಶಿಕ್ಷಕ ಸಮುದಾಯ, ಅಲ್ಲದೆ ಸರಕಾರದ ಮೇಲೆಯೂ ಎಂತಹ ಪರಿಣಾಮ ಬೀರುತ್ತದೆಂಬ ಸಂಪೂರ್ಣ ತಿಳುವಳಿಕೆಯೇ ಇಲ್ಲದೆ ಸರಕಾರಿ ಶಿಕ್ಷಣ ವ್ಯವಸ್ಥೆಯನ್ನು ವ್ಯತಿರಿಕ್ತವಾಗಿ ಟೀಕಿಸುವುದಕ್ಕೆ ದಾರಿ ಮಾಡಿಕೊಟ್ಟಿದೆ. ಸರಕಾರಿ

ಶಾಲೆಯಿಂದ ಖಾಸಗಿ ಶಾಲಾ ವ್ಯವಸ್ಥೆಗೆ ನಡೆದ ಆ ಬಗೆಯ ಸ್ಥಿತ್ಯಂತರವು, ನಿರಾಶಾವಾದವನ್ನು ಬೆಳೆಸಿತು ಮತ್ತು ಸಮಾಜದಲ್ಲಿ ಅಂತರವನ್ನು ಹೆಚ್ಚಿಸಿತು.

ಮಗುವೊಂದು ಶಾಲೆಯ ಹೊಸ್ತಿಲು ದಾಟಿ ಬಂದಾಗ, ಅದು ಕೇವಲ ಬ್ಯಾಗು, ಸ್ಲೇಟು, ಬಳಪ ಮತ್ತು ಪುಸ್ತಕಗಳನ್ನು ಮಾತ್ರವಲ್ಲದೆ ಅದರ ಸಂಪೂರ್ಣ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನೂ ಕರೆತಂದಿರುತ್ತದೆ: ಮಗುವಿನ ತುಂಬಿದ ಅಥವಾ ಖಾಲಿ ಹೊಟ್ಟೆ, ಅದರ ಕುತೂಹಲ, ಭಯ, ಹಿಂಜರಿಕೆ, ಮಾತೃಭಾಷೆ ಮತ್ತು ಇತರ ಅಂಶಗಳು. ಆ ಮಗು ಹಿಂದೆಂದೂ ಶಿಕ್ಷಣದ ವಿನ್ಯಾಸದ ಜೊತೆಗೆ ಸಂಬಂಧವೇ ಇರದಿದ್ದ ಕುಟುಂಬದಿಂದ ಬಂದಿದ್ದ ಪಕ್ಷದಲ್ಲಿ, ಶಾಲೆ ಮತ್ತು ಶಿಕ್ಷಕರು ಮತ್ತಷ್ಟು ನಮ್ಯವಾಗಿರುವುದು ಅವಶ್ಯವಾಗುತ್ತದೆ. ಒಂದು ವೇಳೆ ಶಿಕ್ಷಕರು ಅಥವಾ ಶಾಲೆಯ ಬೇಡಿಕೆಗಳು ಕಠಿಣವಾಗಿದ್ದು ಮತ್ತು ಅವರು ಮಗುವಿನ ಅಗತ್ಯಗಳಿಗೆ ತಕ್ಕಂತೆ ಹೊಂದಿಕೊಳ್ಳಲು ಮನಸ್ಸು ಮಾಡದಿದ್ದರೆ, ಕೇವಲ ವಿಫಲತೆಯ ಫಲಿತಾಂಶವಷ್ಟೇ ಕಾಣಿಸೀತು. ಮತ್ತು ಈ ಫಲಿತಾಂಶವನ್ನು ಮಗುವಿನ ವೈಫಲ್ಯವೆಂದು ಸಮಾಜವು ನೋಡುತ್ತದೆ. ಈಗಾಗಲೇ ಪ್ರತಿಕೂಲತೆ ಇರುವ ಗುಂಡಿಲಾಲ್, ಚಿಂತಾಬಾಯಿ ಮತ್ತು ಕಲ್ಲಿಯಂತಹ ಮಕ್ಕಳು ಶಾಲೆಯಲ್ಲಿ ಯಶಸ್ಸು ಗಳಿಸಲು ಅವರದೇ ಸಂಸ್ಕೃತಿ, ಅನುಭವ ಮತ್ತು ಪ್ರತಿಭೆಗಳನ್ನು ಗೌರವಯುತವಾಗಿ ಒಳಗೊಳ್ಳುವ ಅವಕಾಶಗಳನ್ನು ಸೃಷ್ಟಿಸುವ ಅಗತ್ಯವಿದೆ. ಶಾಲೆಯಲ್ಲಿ ಏನೇ ನಡೆದರೂ ಅವು ಆ ಮಕ್ಕಳ ಅಗತ್ಯ ಮತ್ತು ಹಿನ್ನೆಲೆಯ ಪರೀಕ್ಷೆಯಲ್ಲಿ ತೇರ್ಗಡೆಗೊಂಡಿರಬೇಕು.

ಎಲ್ಲರಿಗೂ ಶಿಕ್ಷಣವೆಂಬ ಈ ಕಾರ್ಯಭಾರದಲ್ಲಿ ಮಂತ್ರಿಗಳಿಂದ ಹಿಡಿದು ಅಧಿಕಾರಿಗಳವರೆಗೆ, ಶಿಕ್ಷಣ ತಜ್ಞರು, ಶಿಕ್ಷಕರವರೆಗೆ ಭಾಗಿಗಳಾಗುವ ಜನರ ದೊಡ್ಡ ಪಟ್ಟಿಯೇ ಇದೆ. ಸ್ವಯಂಸೇವಾ ಸಂಸ್ಥೆಗಳ ಜನರೂ ಈಗ ಈ ಪಟ್ಟಿಗೆ ಸೇರ್ಪಡೆಗೊಂಡಿದ್ದಾರೆ. ಆದರೆ ಅತಿ ಪ್ರಮುಖ ಪಾತ್ರ ಶಿಕ್ಷಕರದ್ದು. ಚಿಂತನೆ, ಸಂಪನ್ಮೂಲ, ಸ್ವಾಯತ್ತತೆ ಮತ್ತು ಶಿಕ್ಷಕರಲ್ಲಿ ಗೌರವವನ್ನು ಖಾತರಿಪಡಿಸುವ ಪ್ರಾಥಮಿಕ ಜವಾಬ್ದಾರಿಯು ಸರಕಾರಿ ಶಿಕ್ಷಣ ಸಂರಚನೆಯದ್ದಾಗಿದೆ. ಇದು ನೀತಿ ನಿರೂಪಕರು, ಆಡಳಿತಾಧಿಕಾರಿಗಳು ಮತ್ತು ತರಬೇತಿ ಸಂಸ್ಥೆಗಳನ್ನು ಒಳಗೊಂಡಿದೆ. ಶಿಕ್ಷಕರ ಮತ್ತು ಶಿಕ್ಷಣದ ಪ್ರಸ್ತುತ ಪರಿಸ್ಥಿತಿಯ ಬಗ್ಗೆ ಪ್ರಶ್ನೆ ಎತ್ತುವ ಮೊದಲು ನಾವು ಕೇಳಬೇಕಾದ ಪ್ರಶ್ನೆ ಒಂದಿದೆ: 'ಎಲ್ಲರಿಗೂ ಶಿಕ್ಷಣ'ದ ಕಾರ್ಯಸಾಧನೆಗೆ ಬೇಕಾದ ತಿಳುವಳಿಕೆ, ಸಂಪನ್ಮೂಲಗಳು ಮತ್ತು ಶಿಕ್ಷಕರಿಗೆ ಸಿಗಬೇಕಾದ ಗೌರವ ಸಮರ್ಪಕವಾಗಿದೆಯೇ? ಮತ್ತು ಸಾಕಷ್ಟಿದೆಯೇ? ನನ್ನ ಪ್ರಕಾರ, ಎಲ್ಲರಿಗೂ ಶಿಕ್ಷಣವೆಂಬ ಸನ್ನಿವೇಶದಲ್ಲಿ ಕೆಲಸ ಮಾಡಲು ಶಿಕ್ಷಕರಿಗೆ ಅವಶ್ಯವಿರುವ ಒಂದು ರೀತಿಯ ತಯಾರಿಯನ್ನು ಸರಕಾರ ಮತ್ತು ಸಮಾಜ ಎರಡೂ ಒದಗಿಸುತ್ತಿಲ್ಲ. ಇದಕ್ಕೆ ಇಚ್ಛಾಶಕ್ತಿಯ ಕೊರತೆಯೋ ಅಥವಾ ಸಂಪನ್ಮೂಲದ ಅಭಾವ ಕಾರಣವೋ ಎಂಬುದು ಸ್ಪಷ್ಟವಿಲ್ಲ. ಸಾಧಿಸಬೇಕಾದ ಕಾರ್ಯವು ಹೊಸತು ಮತ್ತು ಸವಾಲಿನದ್ದಾಗಿದ್ದು, ಇದನ್ನು ಸಾಧಿಸಲು ಬೇಕಾದ ತಯಾರಿಯು ಅಪೂರ್ಣವಾದದ್ದಾದರೆ, ಯಾರಾದರೂ ಹೇಗೆ ತಾನೇ ದೊಡ್ಡ ಪ್ರಮಾಣದ ಧನಾತ್ಮಕ ಫಲಿತಾಂಶವನ್ನು ನಿರೀಕ್ಷಿಸಲು ಸಾಧ್ಯ? 'ಎಲ್ಲರಿಗೂ ಶಿಕ್ಷಣ'ವನ್ನು ಒಳಗೊಳ್ಳುವಿಕೆಯ ಸಮಾಜದೆಡೆಗಿನ ಮೂಲಭೂತ ಹೆಜ್ಜೆಯೆಂದು ನಾವು ಪರಿಗಣಿಸಿದರೆ; ಆಗ ಅದರಿಂದ ಹೊಮ್ಮುವ ಕಾಳಜಿಗಳನ್ನು ಹೇಗೆ ನಾವು ನಮ್ಮ ಗುಣಾತ್ಮಕ ಶಿಕ್ಷಣದ ಕಾಳಜಿಗಳಿಗೆ – ಭಾಷೆ, ಗಣಿತ ಮತ್ತು ಇತರ ವಿಷಯಗಳ ಸಾಂಪ್ರದಾಯಿಕ ಕಲಿಕೆ ಮತ್ತು ಮೌಲ್ಯಮಾಪನಕ್ಕೆ ಮಿತಿಗೊಳಿಸಿಕೊಳ್ಳುವುದು ಸಾಧ್ಯ? ಶಿಕ್ಷಣದಿಂದ ಸಮಾಜಕ್ಕಿರುವ ನಿರೀಕ್ಷೆಗಳನ್ನು ನಾವು ಮರುವ್ಯಾಖ್ಯಾನ ಮಾಡಬೇಕು ಮತ್ತು ಪಠ್ಯಕ್ರಮ ಹಾಗೂ ಶಿಕ್ಷಕರ ಸಿದ್ಧತೆಯನ್ನು ಕೂಡಾ ಹೊಸ ದೃಷ್ಟಿಕೋನದಿಂದ ನೋಡಬೇಕು.

ಒಂದು ಕಡೆ, 'ಎಲ್ಲರಿಗೂ ಶಿಕ್ಷಣ' ಒಂದು ಉತ್ತಮ ಸಮಾಜದ ಹೃದಯ ಎಂಬುದನ್ನು ಒಂದು ಸಂಘಟಿತ ಅರ್ಥೈಸುವಿಕೆಯನ್ನಾಗಿ ಎಲ್ಲರ ಪ್ರಜ್ಞೆಯೊಳಗೆ ಮೂಡಿಸುವ ಜರೂರಿದೆ. ಅದು ಶಿಕ್ಷಣ ಎಂಬ ಸಾಮಾಜಿಕ ಯೋಜನೆಯಲ್ಲಿ ತೊಡಗಿರುವವರನ್ನು ಪ್ರೇರೇಪಿಸುವ ಅಂಶವಾಗುವ ಅಗತ್ಯವಿದೆ. ಇನ್ನೊಂದು ಕಡೆ, ಅಂತಹ ಪ್ರಜ್ಞೆ, ಈ ಯೋಜನೆಯ ಬೆಳಕು ಹಿಡಿದು ಮುನ್ನಡೆಯುವ ಶಿಕ್ಷಕರನ್ನು ಸ್ವಾಗತಿಸುವ, ಬೆಂಬಲಿಸುವ ಮತ್ತು ಗೌರವಿಸುವ ಅಗತ್ಯವೂ ಇದೆ.



**ಅನಂತ್ ಗಂಗೋಲ** ಅವರು ಹಲವು ವರ್ಷಗಳ ಕಾಲ ಮಧ್ಯಪ್ರದೇಶದ ನೀಲ್‌ಗರ್ ಗ್ರಾಮದಲ್ಲಿದ್ದುಕೊಂಡು, ಬುಡಕಟ್ಟು ಮಕ್ಕಳ ಪರ್ಯಾಯ ಶಿಕ್ಷಣ ವಿಷಯದಲ್ಲಿ ಕ್ರಿಯಾಶೀಲರಾಗಿದ್ದರು. ಆ ಬಳಿಕ ಅವರಿಗೆ ಬುಡಕಟ್ಟು ಜನರ ಬದುಕು ಮತ್ತು ಪರಿಸರದ ಬಗ್ಗೆ ಅಧ್ಯಯನ ನಡೆಸುವ ಅವಕಾಶ ಲಭಿಸಿತು. ಗಂಗೋಲ ಅವರು ಮುಂದೆ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮದ (District Coordinator for the District Primary Education Program-DPEP) ಜಿಲ್ಲಾ ಸಂಯೋಜಕರಾಗಿ ನಿಯುಕ್ತರಾದರು. ಕಳೆದ 15 ವರ್ಷಗಳಿಂದ ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ತೊಡಗಿಕೊಂಡಿದ್ದಾರೆ. ಜಿಲ್ಲೆ, ರಾಜ್ಯ ಮಟ್ಟದಲ್ಲಷ್ಟೇ ಅಲ್ಲದೆ ತಳಮಟ್ಟದಲ್ಲೂ ಕೆಲಸ ಮಾಡಿದ ಅನುಭವ ಅವರಿಗಿದೆ. ಅವರನ್ನು ಈ ಮಿಂಚಂಚೆಯ ಮೂಲಕ ಸಂಪರ್ಕಿಸಬಹುದು: anantgangola.ag@gmail.com

ಅನುವಾದ: **ದೇವಿಕ ಧರ್ಮಿಷ್ಟೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಎಲ್ಲರಿಗೂ ಶಿಕ್ಷಣ | ಹಾದಿಯುದ್ದಕ್ಕೂ ಸವಾಲುಗಳು

ಹೃದಯಕಾಂತ್ ದಿವಾನ್

ಎಲ್ಲರಿಗೂ ಶಿಕ್ಷಣದ ಕಲ್ಪನೆ, ಎಲ್ಲರೂ ಓದಲು ಮತ್ತು ಬರೆಯಲು ಕಲಿಯುವುದನ್ನು ಖಾತ್ರಿಪಡಿಸಿಕೊಳ್ಳುವುದು, ಎಲ್ಲಾ ಆಕರಗಳನ್ನೂ ಕಲ್ಪಿಸುವುದು ಮತ್ತು ಶಿಕ್ಷಣದ ಆಯ್ಕೆಗಳು ಎಂಬುವು ತೀರಾ ಇತ್ತೀಚಿನ ವಿದ್ಯಮಾನ. ಇದು ಎಲ್ಲಾ ಮನುಷ್ಯರನ್ನು ಗೌರವಿಸುವ, ಸಮಾನತೆಯ ಪ್ರಜ್ಞೆಯಿಂದ ಪರಿಗಣಿಸುವ ಸಮಾಜವನ್ನು ನಿರ್ಮಿಸುವ ಚಳುವಳಿಯ ಒಂದು ಭಾಗವಾಗಿದೆ. ಈ ಚಳುವಳಿಯು ಆರಂಭವಾಗಿ ಒಂದು ಶತಮಾನವೂ ಕಳೆದಿಲ್ಲ. ಅಲ್ಲದೆ ಇದು ಇನ್ನೂ ಕೂಡ ವಿಶ್ವದ ಹೆಚ್ಚಿನ ಭಾಗವನ್ನು ಒಳಗೊಂಡಿಲ್ಲ. ನೀತಿಗಳು, ಅಂತರರಾಷ್ಟ್ರೀಯ ಒಪ್ಪಂದಗಳು ಮತ್ತು ಘೋಷಣೆಗಳ ಹೊರತಾಗಿಯೂ, ಎಲ್ಲರಿಗೂ ಶಿಕ್ಷಣದ ಪರಿಕಲ್ಪನೆಯನ್ನು ಕಡ್ಡಾಯಗೊಳಿಸಲಾಗಿರುವ ಪ್ರದೇಶಗಳಲ್ಲೂ ವ್ಯಾಪಕವಾಗಿ ಅಂಗೀಕರಿಸಲ್ಪಟ್ಟ ಸಿದ್ಧಾಂತವಾಗಿಲ್ಲ.

**ಸಾಮಾಜಿಕ ಶ್ರೇಣಿಗಳ ಪಾಲನೆ**

ಸಮಾಜದ ಎಲ್ಲ ಸದಸ್ಯರಿಗೆ ಮಹತ್ವಾಕಾಂಕ್ಷೆಯುಳ್ಳ ಅವಕಾಶಗಳನ್ನು ಒದಗಿಸುವ ಈ ಸೂಕ್ಷ್ಮ ಚಿಂತನೆಯು, ಐತಿಹಾಸಿಕವಾಗಿ ಪಸರಣಗೊಂಡ ಬಹುಪಾಲು ಜನರ ಕುರಿತಾದ ಅನ್ಯಾಯದ ನಡವಳಿಕೆ ಮತ್ತು ಅವಕಾಶಗಳ ಕೊರತೆಯ ಕಾರಣದಿಂದ ಬೃಹತ್ತಾಗಿ ಹೊರಹೊಮ್ಮಿದೆ. ಒಂದಲ್ಲ ಒಂದು ಸ್ವರೂಪದಲ್ಲಿ ಮಕ್ಕಳಿಗೆ ಶಿಕ್ಷಣ ಒದಗಿಸುವ ವಿಚಾರವು ಹಿಂದಿನ ಹಲವು ಸಮಾಜಗಳ ಭಾಗವಾಗಿದ್ದಿರಬಹುದು. ಆದರೆ ಬಹುತೇಕವಾಗಿ ಎಲ್ಲ ಮಕ್ಕಳಿಗೆ ಒದಗಿಸಿದ ಶಿಕ್ಷಣವು ಒಂದೇ ತೆರನಾಗಿರಲಿಲ್ಲ ಮತ್ತು ಕಡ್ಡಾಯವಾಗಿರಲಿಲ್ಲ. ಹಲವೆಡೆಗಳಲ್ಲಿ ಬೇರೆಬೇರೆ ಹಿನ್ನೆಲೆಯಿಂದ ಬಂದಂತಹ ಮಕ್ಕಳಿಗೆ ಬೇರೆಬೇರೆ ರೀತಿಯ ಶಾಲೆಗಳಿದ್ದವು. ಹಾಗೆಯೇ ಅವರ ಪಠ್ಯಕ್ರಮದ ನಿರೀಕ್ಷೆಗಳು ಮತ್ತು ವಿಧಾನಗಳು ಬೇರೆ ಬೇರೆಯಾಗಿದ್ದವು. ಈ ಶಾಲೆಗಳ ನೀತಿ ಮತ್ತು ಶಾಲೆಗಳಿಗೆ ಮಾರ್ಗದರ್ಶನ ನೀಡುವ ವಿಶಾಲ ತತ್ತ್ವವು ಬಹುತೇಕ ಅಂದಿನ ಸಾಮಾಜಿಕ ಸಂಬಂಧಗಳು ಮತ್ತು ಸಾಮಾಜಿಕ ಕ್ರಮವನ್ನು ಪೋಷಿಸುವ ನಿಟ್ಟಿನಲ್ಲಿದ್ದವು. 18ನೇ ಶತಮಾನದಲ್ಲಿ ಒಂದನೇ ಜ್ಸಾರ್ ನಿಕೋಲಸ್‌ನ ಹೇಳಿಕೆಯು ಇದನ್ನೇ ಅತ್ಯುತ್ತಮವಾಗಿ ಸಂಗ್ರಹ ರೂಪದಲ್ಲಿ ಹೇಳುತ್ತದೆ.

'ಪ್ರತಿ ಶಾಲೆಯಲ್ಲಿ ಬೋಧನೆಯ ವಿಷಯಗಳು ಮತ್ತು ಬೋಧನಾ ವಿಧಾನಗಳು ವಿದ್ಯಾರ್ಥಿಗಳ ಭವಿಷ್ಯದ ಗುರಿಗೆ ತಕ್ಕಂತೆ ಇರಲೇ-ಬೇಕಾದದ್ದು ಅತ್ಯಗತ್ಯ. ಅದು ಯಾರೂ ತಲುಪಲಾಗದಂಥ ಆತನ ಮೇರು ಗುರಿಯಾಗಿರುತ್ತದೆ'.

ಅನ್ಯಾಯದ ಸಾಮಾಜಿಕ ವ್ಯವಸ್ಥೆಯನ್ನು ಕಾಪಾಡುವ ಹೇಳಿಕೆಯಲ್ಲಿ ಅಂತರ್ಗತವಾದ ಸಿದ್ಧಾಂತವು ಸಾಮಾಜಿಕ ಶ್ರೇಣೀಕರಣ ಮತ್ತು ಸ್ಥಿತಿಗತಿಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸುವ ಸಾಮಾಜಿಕ ಚಲನಶೀಲತೆಯನ್ನು ಅನುಮತಿಸುವ ಮತ್ತು ಬಯಸುವ ವ್ಯವಸ್ಥೆಗಿಂತ ಈ ಶಿಕ್ಷಣದ ಚಿಂತನೆಯು ಭಿನ್ನವಾಗಿದೆ. ಇದು ಇತ್ತೀಚಿನ ಕೆಲವು ಸೈದ್ಧಾಂತಿಕ ನಿಲುವುಗಳಿಗೆ ಸಂಪೂರ್ಣವಾಗಿ ವಿರುದ್ಧವಾಗಿದೆ. ಉದಾಹರಣೆಗೆ, ತೀರಾ ಇತ್ತೀಚೆಗೆ ರೂಪಿಸಲಾಗಿರುವ, ಅಮರ್ತ್ಯ ಸೇನ್ ಅವರು ಮುಖ್ಯವಾಗಿ ಪ್ರತಿಪಾದಿಸಿದ ಮಾನವ ಸಾಮರ್ಥ್ಯದ ಸಿದ್ಧಾಂತವು (Human capability theory), ಮಕ್ಕಳು ತಮಗೆ ಬೇಕಾದ ಪಾತ್ರದಲ್ಲಿ ಸಮಾಜದ ಭಾಗವಾಗಿರಲು ಆರಿಸುವಂತಿರುವ ಮತ್ತು ಇರುವ ಎಲ್ಲ ಸಾಧ್ಯತೆಗಳನ್ನು ಅರಿತು ಅವುಗಳಲ್ಲಿ ಯಾವುದರಲ್ಲಾದರೂ ಶಕ್ತರೆಂಬ ಭಾವನೆಯನ್ನು ಹೊಂದುವ ರೀತಿಯಲ್ಲಿ ಶಿಕ್ಷಣವು ಮಕ್ಕಳ ಸಾಮರ್ಥ್ಯಗಳನ್ನು ಮತ್ತು ಆಕಾಂಕ್ಷೆಗಳನ್ನು ನಿರ್ಮಿಸುವ ಮಾರ್ಗವಾಗಿದೆ ಎಂದು ಹೇಳುತ್ತದೆ. ಶಿಕ್ಷಣದ ಈ ನಿರೀಕ್ಷೆಯು ಶಿಕ್ಷಣದ ಹಕ್ಕು ಮತ್ತು ಅಂತರರಾಷ್ಟ್ರೀಯ ಒಪ್ಪಂದಗಳು ಒದಗಿಸುವುದಕ್ಕಿಂತ ಬಹಳ ಹೆಚ್ಚಿನದಾಗಿದೆ. ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕು ಸಾಕಷ್ಟು ಹೋರಾಟದ ಪ್ರತಿಫಲವಾಗಿದ್ದು, ಇನ್ನೂ ಕೂಡ ಅದನ್ನು ಕಾರ್ಯಗತಗೊಳಿಸುವ ಬದ್ಧತೆಯಲ್ಲಿ ಬಹಳಷ್ಟು ಅಂತರವಿದೆ. ಉದಾಹರಣೆಗೆ, ಮಾನವ ಸಾಮರ್ಥ್ಯದ ಚೌಕಟ್ಟು (Human capability framework) ಒದಗಿಸುವಂತೆ ಶಿಕ್ಷಣದ ಗುರಿ ಮತ್ತು ಉದ್ದೇಶಗಳನ್ನು ಅದು ಸ್ಪಷ್ಟವಾಗಿ ಸೂಚಿಸುವುದಿಲ್ಲ. ಆದ್ದರಿಂದ, ಹೀಗೆ ಎಲ್ಲಾ ಸಮಾಜಗಳು, ಕೆಲವು ರೀತಿಯಲ್ಲಿ ತಾತ್ತ್ವಿಕ ಸಿದ್ಧಾಂತಗಳು, ಗುರಿಗಳು ಮಕ್ಕಳು ಶಿಕ್ಷಣ ಪಡೆಯಬೇಕೆಂದು ಬಯಸಿದರೆ, ಆಶಯ ಮತ್ತು ಕಣ್ಣಿಗೆ ಕಾಣುವ ಕಾರ್ಯವಿಧಾನಗಳು ಬಹಳ ಭಿನ್ನವಾಗಿರಬಹುದು. ಹೀಗಾಗಿ ಎಲ್ಲಾ ಮಕ್ಕಳು ಏಕೆ ಶಿಕ್ಷಿತರಾಗಬೇಕೆಂದು ಎಲ್ಲಾ ಸಮಾಜಗಳು ಬಯಸುತ್ತವೆ ಮತ್ತು ಯಾವ ಶಿಕ್ಷಣ ಅವರಿಗೆ ಸೂಕ್ತ ಎಂಬುದರ ಬಗ್ಗೆ ನಾವು ಯೋಚಿಸಬೇಕಾಗಿದೆ.

ಎಲ್ಲಾ ಮನುಜರ ಮಕ್ಕಳು ಸಮಾಜದಿಂದ ಕಲಿಯುತ್ತಾರೆ ಮತ್ತು ಅವರಿಗೆ ಕಲಿಯುವ ಸಾಮರ್ಥ್ಯವಿದೆ ಎನ್ನುವುದು ಸುಸ್ಪಷ್ಟವಾಗಿದ್ದು, ಇಲ್ಲಿ ಮಾನವ ಅಭಿವೃದ್ಧಿ ಮತ್ತು ಸಾಮಾಜೀಕರಣದ ಭಾಗವೂ ಆಗಿದೆ. ಮಾನವ ತಿಳುವಳಿಕೆಯು ಹೆಚ್ಚಿದಂತೆ ಕುಟುಂಬವು ಒದಗಿಸುವ ಶಿಕ್ಷಣದ ಅವಕಾಶಕ್ಕಿಂತ ಶಿಕ್ಷಣದ ಅಗತ್ಯವು ಹೆಚ್ಚಿತು. ಇದರಿಂದ ಶಿಕ್ಷಕರ ಅಗತ್ಯವು ತಲೆದೋರಿ, ಮಕ್ಕಳಿಗೆ ಕಲಿಸಲು ಸಿದ್ಧರಾಗುವುದಕ್ಕೆ ಶಿಕ್ಷಕರಿಗಾಗಿ ಕೆಲವು ಸಂಘಟಿತ ವೇದಿಕೆಗಳು ಮತ್ತು ರಚನೆಗಳು ಸೃಷ್ಟಿಯಾದವು. ಇದರ ಪರಿಣಾಮವಾಗಿ ಬೇರೆಬೇರೆ ಸಮಾಜಗಳು ಮತ್ತು ಸಮುದಾಯಗಳಲ್ಲಿ ಬೇರೆಬೇರೆ ರೀತಿಯ ಶಾಲೆಗಳು ಅಸ್ತಿತ್ವಕ್ಕೆ ಬಂದವು. ಈ ಶಿಕ್ಷಕರು ಮತ್ತು ಸಂಘಟಿತ ವೇದಿಕೆಗಳು ಇಂದಿನ ಶಾಲೆಗಳ ಸ್ವರೂಪಕ್ಕಿಂತ ಬಹಳ ಭಿನ್ನವಾಗಿದ್ದವು. ಇವುಗಳು ರಾಜ್ಯದ ಧನಸಹಾಯ ಪಡೆದಿರಲಿಲ್ಲ ಅಥವಾ ಅವುಗಳಿಂದ ನಿರ್ವಹಿಸಲ್ಪಟ್ಟಿರಲಿಲ್ಲ. ಹಾಗೆಯೇ ಈ ಶಿಕ್ಷಣವು ಎಲ್ಲರಿಗೂ ಲಭ್ಯವಿರಲಿಲ್ಲ ಮತ್ತು ಎಲ್ಲ ಜನರ ಪರವಾಗಿ ಕೂಡ ಇರಲಿಲ್ಲ. ಇದು ಹೆಚ್ಚಾಗಿ ಶ್ರೀಮಂತರ ಅಥವಾ ಉಳ್ಳವರ ಒಳಿತಿಗಾಗಿ ಮತ್ತು ರಾಜ್ಯದ ನಿರ್ವಹಣೆಗಾಗಿ ನಡೆಯುತ್ತಿತ್ತು.

ಆ ಸಮಯದಲ್ಲಿ ಶಿಕ್ಷಣದ ಪ್ರಕ್ರಿಯೆಗಳು ಮೌಖಿಕ ಸಂವಹನದ ಮೂಲಕ ನಡೆಯುತ್ತಿತ್ತು. ಅದು ಆ ಸಮುದಾಯಗಳು ಅವಲಂಬಿಸಿದ್ದ ನಿಯಮ, ನಿಬಂಧನೆ, ರೂಢಿ ಮತ್ತು ಆಚರಣೆಗಳ ಸಾರವನ್ನು ಒಳಗೊಂಡಿತ್ತು. ಬದುಕು ಮತ್ತು ಅಸ್ತಿತ್ವದ ಕುರಿತ

ದೃಷ್ಟಿಕೋನ, ಒಂದು ಗ್ರಹಿಕೆಯ ಬೆಳವಣಿಗೆಯನ್ನು ಕೂಡಾ ಅಲ್ಲಿ ಬೋಧಿಸಲಾಗುತ್ತಿದ್ದ ಧಾರ್ಮಿಕ ಪಠ್ಯಗಳು ಒಳಗೊಂಡಿದ್ದವು. ಇದು ಬೋಧಿಸಲ್ಪಟ್ಟ ನಡವಳಿಕೆ ಮತ್ತು ಆಚರಣೆಗಳ ರೀತಿಯಲ್ಲಿ ಹುದುಗಿತ್ತು. ಇದರ ಜೊತೆಗೆ, ಪ್ರಕೃತಿಯ ಬಗ್ಗೆ ತಿಳುವಳಿಕೆ, ತರ್ಕದ ನಿಯಮಗಳು, ವಿಜ್ಞಾನ, ವ್ಯಾಪಾರ ಮತ್ತು ಕರಕುಶಲ ಕಲೆ, ಅಲ್ಲದೆ, ಅಂದು ಲಭ್ಯವಿದ್ದ ವೈದ್ಯಕೀಯ ತಿಳುವಳಿಕೆಯನ್ನು ಕೂಡಾ ಬೋಧಿಸಲಾಗುತ್ತಿತ್ತು. ಬಹಳಷ್ಟು ವಿಷಯಾಂಶ ತತ್ವಗಳು ಒಂದೇ ರೀತಿಯಾಗಿದ್ದರೂ ಕೂಡ, ಇವುಗಳನ್ನು ಕಲಿಸುವ ರೂಪಗಳು ಮತ್ತು ರಚನೆಗಳಲ್ಲಿ ಭಿನ್ನತೆಯಿತ್ತು. ಆದರೆ ಅಲ್ಲಿ ಎಲ್ಲಾ ಮಕ್ಕಳು ಈ ಜ್ಞಾನ ಅಥವಾ ಇತರೆ ಯಾವುದೇ ಜ್ಞಾನದಲ್ಲಿ ಔಪಚಾರಿಕವಾಗಿ ಶಿಕ್ಷಿತರಾಗಬೇಕೆಂಬ ಕಡ್ಡಾಯ ನಿಯಮವಿರಲಿಲ್ಲ.

ಸಮಾಜಗಳು ಬೆಳೆದಂತೆ, ಶಾಲೆಗಳ ಸ್ವರೂಪ, ಅವು ಹೇಗೆ ಕಾರ್ಯ-ನಿರ್ವಹಿಸುತ್ತಿದ್ದವು ಮತ್ತು ಅಲ್ಲಿ ಕಲಿಸಲ್ಪಟ್ಟ ವಿಷಯಗಳಲ್ಲಿಯೂ ಹೇಗೆ ಬದಲಾವಣೆಗಳು ಬಂದವು ಎಂದು ನಾವು ಹೇಳಬಹುದು. ಇಂದಿನ ಪರಿಸ್ಥಿತಿಗೆ ನಾವು ತುಲನಾತ್ಮಕವಾಗಿ ಹತ್ತಿರವಾಗುತ್ತಿದ್ದಂತೆ, ಸುಮಾರು 15ನೇ ಶತಮಾನದಲ್ಲಿ ಶಿಕ್ಷಣವು, ಒಂದಲ್ಲ ಒಂದು ರೀತಿಯ ಆಧ್ಯಾತ್ಮಿಕ ಮತ್ತು ಧಾರ್ಮಿಕ ಸ್ಥಳಗಳೊಂದಿಗೆ ಸಂಬಂಧಿಸಿದ ಸಂಸ್ಥೆಗಳ ನೇತೃತ್ವದಲ್ಲಿ ಪ್ರಾರಂಭವಾಯಿತು. (ಉದಾಹರಣೆಗೆ, ಆಶ್ರಮ ಶಾಲೆಗಳು, ಮದರಸಾಗಳು, ಕಾನ್ವೆಂಟ್‌ಗಳು, ಮಠಗಳು). ಇವೆಲ್ಲವೂ ಆಧ್ಯಾತ್ಮಿಕ ಒಲವಿರುವ ರಚನೆಗಳಾಗಿದ್ದು, ಸಂಘಟಿತ ಸಂಸ್ಥೆಗಳ ಭಾಗವಾಗಿರಲಿಲ್ಲ ಮತ್ತು ಅನೇಕ ಸಮಾಜಗಳಲ್ಲಿ ಇವುಗಳನ್ನು ಶಿಕ್ಷಕರು ವೈಯಕ್ತಿಕವಾಗಿ ನಡೆಸುತ್ತಿದ್ದರು. ಏನನ್ನು ಕಲಿಯಬೇಕೆಂದು ನಿರೀಕ್ಷಿಸಲಾಗಿತ್ತು, ಮತ್ತು ಯಾವುದನ್ನು ಕಲಿಸಲಾಗುತ್ತಿತ್ತು ಮತ್ತು ಹೇಗೆ ಮೌಲ್ಯಮಾಪನ ಮಾಡಲಾಗುತ್ತಿತ್ತು ಎಂಬುವುದು ಸಮಾಜದಿಂದ ಸಮಾಜಕ್ಕೆ ಮತ್ತು ಸಂಸ್ಥೆಯಿಂದ ಸಂಸ್ಥೆಗೆ ಭಿನ್ನವಾಗಿತ್ತು.

ನಿಗದಿತ ಸಮಯವನ್ನು ಹೊಂದಿರುವ ಕೆಲಸದ ಸ್ಥಳಗಳಲ್ಲಿ ಕಾರ್ಯನಿರ್ವಹಿಸಲು ಪೋಷಕರಿಗೆ ಅವಕಾಶವನ್ನು ಒದಗಿಸುವ ಅಗತ್ಯತೆಯಿಂದಾಗಿ ಮತ್ತು ಅಲ್ಲಿನ ಕೆಲಸಗಾರರಿಗೆ ನಿರ್ದಿಷ್ಟ ಸಮಯ ಮತ್ತು ಕೆಲಸದ ಸ್ವರೂಪದಲ್ಲಿ ಶಿಸ್ತನ್ನು ಪಾಲಿಸುವುದು ಮುಖ್ಯವಾದಾಗ, ಎಲ್ಲಾ ಮಕ್ಕಳನ್ನು ಶಿಕ್ಷಣದ ಪ್ರಕ್ರಿಯೆಯಲ್ಲಿ ಸೇರಿಸುವ ಪ್ರಶ್ನೆಯು ಸಮಾಜದಲ್ಲಿ ಉದ್ಭವಿಸಿತು. ಇದರ ಜೊತೆಗೆ ಕೆಲವು ಕೌಶಲ್ಯಗಳು ಕೂಡ ಅಗತ್ಯವಾಗಿದ್ದವು. ಉದಾಹರಣೆಗೆ, ಮಗುವು ಸೂಚನೆಗಳನ್ನು ಅನುಸರಿಸಬೇಕಾಗಿರುವುದು ಕೂಡ ಒಂದು ಅಗತ್ಯವಾಗಿತ್ತು. ಆದ್ದರಿಂದ, ಯೋಧರ ತರಬೇತಿ ಮತ್ತು ಸಾಮಾಜಿಕ ಮಹಿಳೆಯಾಗಲು ಮೇಲ್ವರ್ಗದ ಹುಡುಗಿಯರ ತರಬೇತಿಯಂತೆಯೇ, ಈಗ ಇತರೆ ಹಿನ್ನೆಲೆಯಿಂದ ಬರುವ ಮಕ್ಕಳನ್ನು ಶಾಲೆಗೆ ಸೇರಿಸಲು ಕಾರಣವಾಗಿತ್ತು. ಎಲ್ಲಾ ಮಕ್ಕಳು ಕಲಿಯಬಹುದೇ ಎಂಬುದು ಬಿಸಿಬಿಸಿ ಚರ್ಚೆಯ ವಿಷಯವಾದರೂ ವ್ಯಾಪಕತೆಯನ್ನು ಒಳಗೊಳ್ಳುವತ್ತ ಶಿಕ್ಷಣವು ವಿಸ್ತರಿಸಿತು. ಒಂದಲ್ಲ ಒಂದು ರೀತಿಯಲ್ಲಿ ಎಲ್ಲಾ ಮಕ್ಕಳಿಗೆ ಕಲಿಸಬಹುದೆಂದು ನಂಬಿದ ಕೆಲವರು ಮತ್ತು ಇದು ಸಾಧ್ಯವಿಲ್ಲ ಎಂದು ಭಾವಿಸಿದ್ಧ ಅನೇಕರ ನಡುವಿನ ಸಂಘರ್ಷ ಮುಂದುವರೆಯಿತು. ಗುಲಾಮನಾದ ಹುಡುಗನಿಗೆ ಕಲಿಸುವ ಸಾಕ್ರಟಿಸ್‌ನ ಕಥೆಯಿಂದ ಇದು ಸ್ಪಷ್ಟವಾಗಿದೆ. ಇದೇ ರೀತಿ ಇಂಗ್ಲಿಷ್ ಪ್ರಾಧ್ಯಾಪಕನೊಬ್ಬ ಬೇರೆ ಹಿನ್ನೆಲೆಯಿಂದ ಬಂದ ಒಬ್ಬ ಹುಡುಗಿಯನ್ನು ಮೇಲ್ವರ್ಗದ ಮಹಿಳೆಯಾಗಲು ಮತ್ತು ಅದರಂತೆಯೇ ನಡೆದುಕೊಳ್ಳಲು ಕಲಿಸುವ ಚಲನಚಿತ್ರವು (My Fair Lady) ಸಮನ್ವಯತೆಯ ವಿಚಾರದ ಬಗ್ಗೆ ಸಾಮಾಜಿಕ ಪ್ರಜ್ಞೆಯಿಂದ ನಡೆಯುತ್ತಿರುವ ಹೋರಾಟದ ಪ್ರತಿಬಿಂಬವಾಗುತ್ತದೆ.

ಆದಾಗ್ಯೂ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ವಂಚಿತರಾದ ಮಕ್ಕಳು ತೋರಿಸಿದ ಕಲಿಕಾ ಸಾಮರ್ಥ್ಯ, ವಿಜ್ಞಾನ ಮತ್ತು ಗಣಿತವನ್ನು ಕಲಿಯುವಲ್ಲಿ ಹುಡುಗಿಯರು ತೋರಿಸಿದ ಸಾಮರ್ಥ್ಯ ಹಾಗೂ ಇತರ ಇಂತಹುದೇ ಉದಾಹರಣೆಗಳು, ವ್ಯವಸ್ಥೆಯು ಕ್ರಮೇಣ ಅವರನ್ನು ಕನಿಷ್ಠ ದಾಖಲೆಯಲ್ಲಾದರೂ ಸಮಾನರೆಂದು ಅಂಗೀಕರಿಸಲು ಒತ್ತಾಯಿಸಿವೆ. ಆದರೂ, ಆಚರಣೆ ಹಾಗೂ ಆಲೋಚನೆಯಲ್ಲಿ, ವಂಚಿತ ಮಕ್ಕಳು ಮತ್ತು ಹುಡುಗಿಯರು ಕೆಳಮಟ್ಟದವರಾಗಿದ್ದು, ಅಮೂರ್ತ ಮತ್ತು ಸಂಕೀರ್ಣ ವಿಚಾರಗಳನ್ನು ಕಲಿಯಲು ಅಸಮರ್ಥರು ಎಂಬುದಾಗಿ ಪುರಾವೆಗಳನ್ನು ಹುಡುಕಿ, ಸಂಶೋಧಿಸಿ ಐತಿಹ್ಯಗಳಿಂದ ಆಯ್ದು ವಾದಿಸುವ ಪ್ರಯತ್ನಗಳು ಮುಂದುವರಿಯುತ್ತವೆ. ಹಿಂದಿನ ಕರ್ಮ ಅಥವಾ ಈಗಿರುವ ಸಾಧ್ಯತೆ ಮತ್ತು ಸಾಮರ್ಥ್ಯವನ್ನು ಉಲ್ಲೇಖಿಸಿ ಕೂಡ ಅಸಮಾನ ನಡವಳಿಕೆಯನ್ನು ನಿರ್ಣಾಯಕವಾಗಿ ಸಮರ್ಥಿಸುವ ಬಹಳಷ್ಟು ಪ್ರಯತ್ನಗಳು ಇಂದಿಗೂ ನಡೆಯುತ್ತಿವೆ.

ಕೊನೆಯಲ್ಲಿ, ಮಾನವರ ಸಮಾನತೆಯನ್ನು ನಂಬಿದವರ ವಕಾಲತ್ತು ಮತ್ತು ಅಂತರ್ಗತ ತುಲನೀಯ ಅಸಮರ್ಥತೆಯ ವಿರುದ್ಧ ಅಗಾಧ ಪುರಾವೆಗಳು ಸಮಾಜದ ನೀತಿ ನಿರೂಪಣೆಯಲ್ಲಿ ಬದಲಾವಣೆಯನ್ನು ತಂದಿತು. ಎಲ್ಲಾ ಮಕ್ಕಳು ಶಿಕ್ಷಣವನ್ನು ಪಡೆಯುವ ಅಗತ್ಯವಿಲ್ಲ ಎಂಬ ಪ್ರಮೇಯವನ್ನು ಆಧರಿಸಿದ ಚೌಕಟ್ಟು ಮತ್ತು ಅದರಲ್ಲೂ ಬಹುತೇಕ ಮಕ್ಕಳು ಕಲಿಕೆಯ ಸಾಮರ್ಥ್ಯವನ್ನು ಹೊಂದಿಲ್ಲ ಎಂಬ ವಿಚಾರಕ್ಕೆ ಭಾರೀ ಪೆಟ್ಟು ಬಿದ್ದಿತು.

ಮೇಲೆ ಸೂಚಿಸಿದಂತೆ, ಹೊರಗುಳಿದ ಮಕ್ಕಳಲ್ಲಿ ಹೆಣ್ಣುಮಕ್ಕಳು ಒಂದು ಪ್ರಮುಖ ಭಾಗವಾಗಿದ್ದರು. ಕೇವಲ ಶಿಕ್ಷಣ ಮಾತ್ರವಲ್ಲ, ಹಿರಿಯ ಅಥವಾ ಉನ್ನತ ಸ್ಥಾನಗಳಾಗಲೀ ಮತ್ತು ಸಂಶೋಧನಾ ನಾಯಕರಾಗಲೀ ಬಹುತೇಕ ಎಲ್ಲ ಕಡೆಗಳಲ್ಲೂ ಅವರನ್ನು ಹೊರಗುಳಿಯುವಂತೆ ಮಾಡಲಾಗಿತ್ತು. ಅವರಲ್ಲಿ ವಿದ್ಯಾವಂತರಾದ ಕೆಲವರು, ಹೆಣ್ಣುಮಕ್ಕಳ ಶಿಕ್ಷಣದ ಸೀಮಿತ ಚೌಕಟ್ಟಿನಲ್ಲಿ ಶಿಕ್ಷಣ ಪಡೆದರೇ ಹೊರತು ಎಲ್ಲಾ ಮಕ್ಕಳಿಗೆ ಅನ್ವಯಿಸುವ ಮತ್ತು ಸಾರ್ವತ್ರಿಕ ಕಾರ್ಯಕ್ರಮದ ಮೂಲಕ ಶಿಕ್ಷಣ ಪಡೆಯಲಿಲ್ಲ. ಎಲ್ಲಾ ಹೆಣ್ಣು-ಮಕ್ಕಳನ್ನು ಸಾರ್ವತ್ರಿಕ ಶಿಕ್ಷಣ ಕಾರ್ಯಕ್ರಮಗಳಲ್ಲಿ ಸೇರ್ಪಡೆಗೊಳಿಸಲು ಮತ್ತು ಅವರನ್ನು ಗಣಿತ, ವಿಜ್ಞಾನ, ಎಂಜಿನಿಯರಿಂಗ್ ಇತ್ಯಾದಿ ವಿಷಯಗಳನ್ನು ಕಲಿಯಲು ನಿರೀಕ್ಷಿಸುವುದು ಈಗಲೂ ವ್ಯಾಪಕವಾಗಿ ಅಂಗೀಕಾರವಾಗಿಲ್ಲ. ಅವರಿಗೆ ಶಿಕ್ಷಣ ನೀಡುವ ಮತ್ತು ಅವರು ಶಿಕ್ಷಿತರಾಗುವುದನ್ನು ಸಾಧ್ಯವಾಗುವಂತೆ ಮಾಡುವ ಜವಾಬ್ದಾರಿಯನ್ನು ಹೊಂದಿರುವವರೂ ಕೂಡ ಇದನ್ನು ಇನ್ನೂ ಒಪ್ಪಿಲ್ಲ.

ಹೀಗಾಗಿ, ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಎಲ್ಲಾ ಮಕ್ಕಳನ್ನು ಸೇರ್ಪಡೆಗೊಳಿಸುವ ಈ ಪ್ರಯತ್ನದಲ್ಲಿ ರಾಜ್ಯದ ಜವಾಬ್ದಾರಿ ಮತ್ತು ಜನಸಾಮಾನ್ಯರ ಪಾತ್ರವನ್ನು ಗುರುತಿಸಬೇಕು. ಶಿಕ್ಷಣವೂ ವೆಚ್ಚದಾಯಕವಾದದ್ದು: ಅಂದರೆ ಶಾಲಾ ವೆಚ್ಚಗಳು, ಮಗುವನ್ನು ಶಾಲೆಗೆ ಕಳುಹಿಸಲು ಕುಟುಂಬಕ್ಕೆ ತಗಲುವ ವೆಚ್ಚ, ಶಾಲೆಯ ನಂತರ ಮಗುವಿನ ಕಲಿಕೆಗೆ ಬೆಂಬಲ ನೀಡಲು ವೆಚ್ಚ ಮತ್ತು ಸಾಮರ್ಥ್ಯ ಇತ್ಯಾದಿ. ಅನೇಕ ಕುಟುಂಬಗಳಿಗೆ ಕಡಿಮೆ ಆದಾಯವಿರುವುದರಿಂದ ಅದು ಸಾಧ್ಯವಿಲ್ಲ. ಶಾಲೆಯ ನಂತರ ಕಲಿಯುವ ಮಕ್ಕಳನ್ನು ಕಳುಹಿಸುವ ಮತ್ತು ಬೆಂಬಲಿಸುವ ವೆಚ್ಚವನ್ನು ಪೂರೈಸಲು ಹಣ ಹೊಂದಿಸುವುದು ಅವರಿಗೆ ಬಹಳ ಕಷ್ಟ.

ನಾನು ಪ್ರಾರಂಭದಲ್ಲಿ ಹೇಳಿದಂತೆ, ಪ್ರತಿಯೊಬ್ಬರನ್ನೂ ಶಿಕ್ಷಿತರನ್ನಾಗಿಸುವ ವಿಧಾನದ ಬಗ್ಗೆ ಪ್ರಬಲ ತಿಳುವಳಿಕೆಯೆಂದರೆ ಅವರು ಸಮಾಜದ ಉಪಯುಕ್ತ ಸದಸ್ಯರಾಗಿರಬೇಕು ಮತ್ತು ಸ್ಥಿರ ಸಮಾಜವನ್ನು ರಚಿಸಲು ಸಹಾಯ ಮಾಡುವಂಥವರಾಗಬೇಕು. ಅಂದರೆ ಇಲ್ಲಿ ಪ್ರತಿಯೊಂದು ಮಗುವೂ ತನಗೆ ನಿರ್ಧರಿತವಾದ ಪಾತ್ರದ ಪ್ರಕಾರ ಶಿಕ್ಷಣ ಪಡೆಯಬೇಕೆಂಬ ಇಂಗಿತವಿದೆ.

**ಹೊಸ ಮೇಲ್ವರ್ಗದ ಸೃಷ್ಟಿ**

ಸಮಾಜದ ಪ್ರಜಾಪ್ರಭುತ್ವೀಕರಣ, ಕೈಗಾರಿಕೀಕರಣ ಮತ್ತು ಅವಕಾಶಗಳ ಮಂಥನವು ಸಮಾಜದಲ್ಲಿ ಶಿಕ್ಷಣವು ಅನಿವಾರ್ಯವಾಗುವಂತೆ ಮಾಡಿತು. ಹೀಗಾಗಿ ದೊಡ್ಡ ಪ್ರಮಾಣದ ಜನರು ಇದರಲ್ಲಿ ಭಾಗಿಯಾದರು. ಮೊದಲಿಗಿಂತಲೂ ಹೆಚ್ಚು ಮಕ್ಕಳು ಶಾಲೆಯಲ್ಲಿ ಇರುವಂತಾಯಿತು (ಈಗ ಅನೇಕರು). ಸಮಾಜದಲ್ಲಿ ಹೆಚ್ಚಾಗುತ್ತಿದ್ದ ಸಂಕೀರ್ಣತೆಗಳು, ಉತ್ಪಾದನೆ ಮತ್ತು ನಿರ್ವಹಣೆಗಾಗಿ ಅಗತ್ಯವಿರುವ ಕೌಶಲ್ಯಗಳು (ಮತ್ತು ಈಗ ಬೇಡಿಕೆಗಳು) ಹೆಚ್ಚಿನ ಸಂಖ್ಯೆಯ ವ್ಯಕ್ತಿಗಳನ್ನು ಮತ್ತು ವೈವಿಧ್ಯಮಯ ಕೌಶಲ್ಯಗಳನ್ನು ಹೊಂದಿರುವವರ ಬೇಡಿಕೆಯನ್ನು ಹೆಚ್ಚಿಸಿತು. ಕರಕುಶಲಕರ್ಮಿಗಳ ಪೈಕಿ ಹಲವರು, ಆರ್ಥಿಕತೆಗೆ ನಿರ್ಣಾಯಕವಾದ ನಿರ್ದಿಷ್ಟ ಶಿಕ್ಷಣ ಮತ್ತು ಕೌಶಲ್ಯಗಳು ಅನಿವಾರ್ಯವಾಗಿರುವ ಹಲವರ ಅಗತ್ಯವೂ ಬೇಕಾಯಿತು. ಉತ್ಪಾದನಾ ಸಾಧನಗಳು ಮತ್ತು ಮಾರುಕಟ್ಟೆಯ ಸ್ವರೂಪದಲ್ಲಿ ಬದಲಾವಣೆ ಬಂದ ನಂತರ ಸ್ವಲ್ಪ ಚಲನಶೀಲತೆ ಕಂಡು ಬಂದಿತು. ಇದು ಹೊಸ ಮೇಲ್ವರ್ಗದವರ ಸೃಷ್ಟಿಗೆ ಕಾರಣವಾಯಿತು ಮತ್ತು ಅವರು ಬೆರೆಯುವುದಕ್ಕೆ ಎಡೆಮಾಡಿಕೊಟ್ಟಿತು. ಈ ಮೇಲ್ವರ್ಗದವರು ಕೂಡಾ ನಾಯಕತ್ವದಲ್ಲಿ ಪಾಲುದಾರಿಕೆ ಹಾಗೂ ಆರ್ಥಿಕ ಲಾಭಗಳನ್ನು ಹಂಚಿಕೊಳ್ಳಬೇಕೆಂದು ಬಯಸಿದ್ದರು.

ಬೆಳೆಯುತ್ತಿರುವ ಆರ್ಥಿಕತೆ ಹಾಗೂ ತಂತ್ರಜ್ಞಾನ ಮತ್ತು ಈ ಹೋರಾಟಗಳು ಸಮಾಜದಲ್ಲಿ ಅವಕಾಶ, ಆಯ್ಕೆ ಮತ್ತು ಪ್ರತ್ಯೇಕತೆಯ ಕ್ರಮಕ್ಕೆ 'ಪ್ರತಿಭೆ'ಯನ್ನು (Meritocracy) ಪ್ರಮುಖ ಮಾನದಂಡವಾಗಿ ತಂದಿತು. ಇದು ಸಹಬಾಳ್ವೆಯ ಪ್ರಜಾಪ್ರಭುತ್ವ ಮತ್ತು ಕಲ್ಯಾಣದ ಕಲ್ಪನೆಗಳೊಂದಿಗೆ ತೊಡಗಿಸಿಕೊಳ್ಳಬೇಕಾಯಿತು. ಇದರ ಪರಿಣಾಮವಾಗಿ ಇನ್ನೂ ಕೂಡ ವಿವಿಧ ರೀತಿಯ ಶಿಕ್ಷಣದಲ್ಲಿ ಪ್ರತ್ಯೇಕತೆ ಮತ್ತು ದೊಡ್ಡ ಪ್ರಮಾಣದ ಜನಸಂಖ್ಯೆಗೆ ಶಿಕ್ಷಣ ಹಾಗೂ ವೈವಿಧ್ಯಮಯ ಮಕ್ಕಳ ಗುಂಪಿಗೆ ಶಿಕ್ಷಣ ಎಂಬ ಹಂದರಗಳ ನಡುವೆ ಹುದುಗಿದ ಉದ್ವಿಗ್ನತೆಯು ಮುಂದುವರೆದಿದೆ. ೨೦ನೇ ಶತಮಾನದ ಪೂರ್ವಾರ್ಧದ ಅನುಭವಗಳ ನಂತರ ಪ್ರಜಾಪ್ರಭುತ್ವದ ಪರಿಕಲ್ಪನೆ ಮತ್ತು ರಾಜ್ಯದ ಕಲ್ಯಾಣ ಪಾತ್ರದ ಪರಿಕಲ್ಪನೆ ಬೆಳೆಯಿತು. ತನ್ಮೂಲಕ ಪ್ರತಿಯೊಬ್ಬ ಮಗುವಿಗೆ ಔಪಚಾರಿಕವಾಗಿ ಶಿಕ್ಷಣ ನೀಡುವ ಅಗತ್ಯ ಮತ್ತು ಶಿಕ್ಷಣದ ಉದ್ದೇಶ ಮತ್ತು ಸ್ವರೂಪದ ಬಗ್ಗೆ ಕಾಳಜಿಯೂ ಬೆಳೆಯಿತು. ಸಾಮಾಜಿಕ ಶ್ರೇಣಿಗಳಲ್ಲಿ ಯಥಾಸ್ಥಿತಿ ನಿರ್ವಹಣೆ ಹಾಗೂ ಸಾಮಾನ್ಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಎಲ್ಲರನ್ನೂ ಒಳಗೊಳ್ಳುವುದರ ನಡುವೆ ಸಂಘರ್ಷವು ಭಾರತೀಯ ಸಂವಿಧಾನದಲ್ಲಿ ಪ್ರತಿಬಿಂಬಿತವಾಯಿತು. ಸಂವಿಧಾನದ ಪ್ರಸ್ತಾವನೆಯು ಒಂದು ಬದ್ಧತೆಯನ್ನು ವಿಶದಪಡಿಸಿತು. ಇದು ಆಡಳಿತಗಾರರಿಗೆ ಸಾಧಿಸಲು, ಸ್ವೀಕರಿಸಲು ಮತ್ತು ನಂಬಲು ಕಷ್ಟವಾಗಿತ್ತು.

೧೯೮೬ರ ಶಿಕ್ಷಣ ನೀತಿಯು ಉದ್ವಿಗ್ನತೆಯನ್ನು ಮುನ್ನೆಲೆಗೆ ತಂದಿತು ಮತ್ತು ಶಿಕ್ಷಣವನ್ನು ಮಾನವ ಸಂಪನ್ಮೂಲ ಅಭಿವೃದ್ಧಿಯಾಗಿ (Human resource development) ವ್ಯಾಖ್ಯಾನಿಸುವ ಮೂಲಕ ನೈಜ ಉದ್ದೇಶವನ್ನು, ಚಾಲ್ತಿಯಲ್ಲಿರುವ ನೀತಿ ಮತ್ತು ಸಾರ್ವಜನಿಕ ನಂಬಿಕೆಯನ್ನು ಕೇಂದ್ರೀಕರಿಸಿತು. ಇದನ್ನು ನಿರೂಪಿಸಲು ಪದಗಳ ಆಯ್ಕೆ ಸುಸ್ಪಷ್ಟವಾಗಿತ್ತು: ದೇಶದ ಅಭಿವೃದ್ಧಿಗೆ (ಇದನ್ನು ಆರ್ಥಿಕತೆ ಮತ್ತು ಮಾರುಕಟ್ಟೆಯೆಂದು ಓದತಕ್ಕದ್ದು) ಪೂರಕವಾಗಿ ಕೊಡುಗೆ ನೀಡುವ ಮನುಷ್ಯರು ಕೂಡಾ, 'ಸಂಪನ್ಮೂಲ' (Resource)ವೇ ಆಗಿದ್ದಾರೆ. ಪ್ರತಿಯೊಬ್ಬನೂ ಒಬ್ಬ ಪ್ರತ್ಯೇಕ ವ್ಯಕ್ತಿಯಾಗಿದ್ದು, ಆರ್ಥಿಕತೆ ಮತ್ತು ಮಾರುಕಟ್ಟೆಯ ಗುರಿಯು ವಿತರಣೆಯ ಸಮಾನತೆಗಾಗಿ ಯಾವುದೇ ಕಾಳಜಿಯಿಲ್ಲದೆ ಬಳಕೆಯನ್ನು ಗರಿಷ್ಠ–ಗೊಳಿಸುವುದಾಗಿದೆ. ಗರಿಷ್ಠ ವೈಯಕ್ತಿಕ ಸಂತೋಷ, ಸ್ವಾಧೀನ ಮತ್ತು ವಸ್ತುಗಳ ಅನುಭೋಗಕ್ಕಾಗಿ ಸಾಧ್ಯತೆಗಳನ್ನು ರೂಪಿಸಲು ಖಾಸಗಿ ಅಗತ್ಯಗಳ ಮೇಲೆ ಕೇಂದ್ರೀಕರಿಸುವುದು ಇದರ ನೀತಿಯಾಗಿದೆ. ವ್ಯಕ್ತಿಗಳಿಗೆ ಯಾವುದೇ ಸಾಮಾಜಿಕ ಜವಾಬ್ದಾರಿಯಿಲ್ಲದೆ, ಶಿಕ್ಷಣದ ಹೂಡಿಕೆಯಲ್ಲಿ ಕೊರತೆಯಿರುವುದರಿಂದಲೇ ಮೂಲ ಅವಶ್ಯಕತೆಗಳನ್ನೂ ಹೊಂದಿಲ್ಲದ ಕಾರಣ ಆ ಸ್ಥಿತಿಯಲ್ಲಿದ್ದಾರೆ ಎನ್ನುವುದು ಇಲ್ಲಿನ ಒಪ್ಪಿತ ತತ್ವವಾಗಿದೆ.. (ಅಂದರೆ ತಮ್ಮ ಸ್ವಂತ ಪ್ರಯತ್ನದ ದೃಷ್ಟಿಯಿಂದ ಮತ್ತು ತಮ್ಮ ಪೋಷಕರ/ ಹೆತ್ತವರ ಬದ್ಧತೆ, ಶ್ರಮ ಮತ್ತು ತಮ್ಮ ಶಿಕ್ಷಣದ ಕೊಡುಗೆಗೆ ಸಂಬಂಧಿಸಿದಂತೆ). ಹೀಗಾಗಿ, ಇಂಥ ಆರ್ಥಿಕತೆಯು, ಶೈಕ್ಷಣಿಕ ಉದ್ದೇಶಗಳು ಮತ್ತು ಚಟುವಟಿಕೆಗಳು ಮಾರುಕಟ್ಟೆಯ ವಿಶ್ಲೇಷಣೆಗಳಿಂದ ಹೆಚ್ಚಾಗಿ ನಿರ್ಧರಿತವಾಗಿದ್ದು, ಮಾರುಕಟ್ಟೆ ಬೆಳೆಯಲು ಇಂಥ ತಾಂತ್ರಿಕ ಪರಿಗಣನೆಗಳು ನೆರವಾಗುವವೇ ಹೊರತು ಯಾವುದೇ ಇತರ ನೈತಿಕ ಅಥವಾ ನೀತಿ ಸೂತ್ರಗಳಲ್ಲ ಎಂಬುದನ್ನು ಮಾನವ ಬಂಡವಾಳ ಸಿದ್ಧಾಂತದಿಂದ (Human Capital Theory) ಪ್ರೇರಿತವಾದ ಈ ವಿಚಾರವು ಸೂಚಿಸುತ್ತದೆ.

ತಾತ್ವಿಕ ಗಟ್ಟಿತನಕ್ಕೆ ನಂಬಿಕೆಯ ಕೊರತೆಯಿರುವುದೇ ಔಪಚಾರಿಕವಾದ ಉತ್ತಮ ಗುಣಮಟ್ಟದ ಶಿಕ್ಷಣ ಕಾರ್ಯಕ್ರಮಗಳಲ್ಲಿ ಇಂದು ಎಲ್ಲಾ ಮಕ್ಕಳನ್ನು ಒಳಗೊಳ್ಳುವುದಕ್ಕಿರುವ ಮೂಲಭೂತ ಸವಾಲಾಗಿದೆ. ಸಂವಿಧಾನದ ಪ್ರಸ್ತಾವನೆಯಲ್ಲಿರುವ ಭರವಸೆಯನ್ನು ಅರ್ಥಮಾಡಿಕೊಡಲಿಲ್ಲ ಅಥವಾ ಅಂಗೀಕರಿಸಿಲ್ಲ. ಅವಕಾಶ, ಸೌಲಭ್ಯ, ಆಯ್ಕೆ ಮತ್ತು ಬೆಳವಣಿಗೆಗೆ ಆಯ್ಕೆಗಳು ಮಕ್ಕಳಿಗೆ ಸಿಗುವುದನ್ನು ಖಚಿತಪಡಿಸಿಕೊಳ್ಳದೆ ಹೋಲಿಸಬಹುದಾದ ಅಲ್ಪ ಮಟ್ಟದಲ್ಲಾದರೂ ಎಲ್ಲಾ ಮಕ್ಕಳಿಗೂ ಸಿಗುವಂತೆ ಮಾಡದೆ ಅವಕಾಶದ ಸಮಾನತೆಯನ್ನು ಅಪೇಕ್ಷಿಸುವ ಸಮನ್ವಯವನ್ನು ಸಾಧಿಸಲಾಗದೆಂಬುದು ಸುಸ್ಪಷ್ಟವಾಗಿದೆ.

ಈ ಪ್ರಕ್ರಿಯೆಗೆ ಎಲ್ಲಾ ಮಕ್ಕಳು ಕಲಿಯಬಹುದು ಮತ್ತು ಅವರಿಗೆ ಸಮಾನ ಆದ್ಯತೆ ಮತ್ತು ಕಾಳಜಿಯ ಅಗತ್ಯವಿರುತ್ತದೆ ಎಂಬ ನಂಬಿಕೆಯ ಅಗತ್ಯವಿದೆ. ಪ್ರತಿಯೊಂದು ಮಗುವಿಗೂ ಅರಿವು, ಸಾಧ್ಯತೆ ಮತ್ತು ತನ್ನದೇ ಹಾದಿಯನ್ನು ಆಚ್ಚು ಮಾಡಿಕೊಳ್ಳುವ ಸಾಮರ್ಥ್ಯವನ್ನು ನೀಡುವ ಮತ್ತು ತಾನು ಏನಾಗಬೇಕೆಂದು ಬಯಸುವ ಅವಕಾಶವನ್ನು ಒದಗಿಸಬೇಕೆಂಬುದು ಶಿಕ್ಷಣದಿಂದ ಮಾನವ ಸಾಮರ್ಥ್ಯದ ಸಿದ್ಧಾಂತದ ನಿರೀಕ್ಷೆಯಾಗಿದೆ. ಇದಕ್ಕೆ ವಿರುದ್ಧವಾಗಿ, ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿರುವ ಚಾಲ್ತಿಯಲ್ಲಿರುವ ತತ್ವಗಳು, ಒಂದು ಮಗುವನ್ನು ಮಾನವ ಬಂಡವಾಳವನ್ನು ಸೃಷ್ಟಿಸುವ ಸಂಪತ್ತಿನ ಒಂದು ಭಾಗವಾಗಿ ಬೆಳೆಸುತ್ತದೆ ಮತ್ತು ಮಾರುಕಟ್ಟೆಯಲ್ಲಿ ವಿನಿಮಯವನ್ನು ಬೆಳೆಸುವ ಆದಾಯ ಉತ್ಪಾದಕ ಎಂದು ಭಾವಿಸುತ್ತವೆ. ಈ ಸೂತ್ರವು ಶಿಕ್ಷಣದ ಮೇಲಿನ ಎಲ್ಲಾ ವೆಚ್ಚವನ್ನು ಆರ್ಥಿಕ ಹೂಡಿಕೆಯೆಂದು ಪರಿಗಣಿಸುತ್ತದೆ ಮತ್ತು ಆರ್ಥಿಕ ಉತ್ಪನ್ನದ ಬೆಳವಣಿಗೆಯ ನಿಟ್ಟಿನಲ್ಲಿ ಹೂಡಿಕೆಯಿಂದ ಲಾಭವನ್ನು ಬಯಸುತ್ತದೆ.

ಉದ್ಯೋಗಗಳ ಸಂಖ್ಯೆಯ ವಿಸ್ತರಣೆಯ ಸಾಧ್ಯತೆ ಮತ್ತು ಮೇಲ್ಮುಖ ಚಲನಶೀಲತೆ ಕಡಿಮೆಯಾಗಿರುವ ಈ ಸಂದರ್ಭದಲ್ಲಿ ಹೆಚ್ಚಿನ ಜನರಿಗೆ ಶಿಕ್ಷಣ ದೊರಕುವ ಸಾಧ್ಯತೆಗೆ ಅಪಾಯ ಉಂಟಾಗಿದೆ. ಶಿಕ್ಷಣವು ಹೆಚ್ಚುಹೆಚ್ಚು ಸಂಕುಚಿತವಾಗುತ್ತಿದೆ. ಬಹಳಷ್ಟು ಮಕ್ಕಳನ್ನು ಶಿಕ್ಷಣದ ಪರಿಧಿಯಿಂದ ಹೊರಗಿಡಲಾಗುತ್ತಿದೆ. ಇದೇ ಅದರ ಕಾರ್ಯಾಚರಣೆಯ ಉದ್ದೇಶವಾಗಿದ್ದು, ಇದಕ್ಕೆ ತಕ್ಕಂತೆ ಅದರ ಉದ್ದೇಶ ಮತ್ತು ಲಭ್ಯತೆಯನ್ನು ಹೊಂದಿಸಲಾಗಿದೆ. ಆದ್ದರಿಂದ ಇಂದು ಉತ್ತಮ ಗುಣಮಟ್ಟದ ಶಿಕ್ಷಣವು ಹೆಚ್ಚು ಪ್ರತ್ಯೇಕವಾಗಿ ಸೀಮಿತವಾಗಿದೆ ಮತ್ತು ಹೆಚ್ಚುಹೆಚ್ಚು ವಿಶೇಷ ನೈಪುಣ್ಯತೆಯನ್ನು ಒಳಗೊಂಡು ಮೇಲ್ವರ್ಗಕ್ಕೆ ಮಾತ್ರ ಕೈಗೆಟಕುವ ದುಬಾರಿ ಅವಕಾಶವಾಗಿ ತೆರೆದಿಡುತ್ತಿದೆ. ಪರಿಕಲ್ಪನಾ ದಸ್ತಾವೇಜುಗಳು ಮತ್ತು ಘೋಷಿತ ಉದ್ದೇಶಗಳು ಸಂವಿಧಾನದ ಪ್ರಸ್ತಾವನೆಯ ಆಶಯ ಹಾಗೂ ಸಾಮರ್ಥ್ಯ ಸಿದ್ಧಾಂತದ ಸೂಕ್ಷ್ಮ ಎಳೆಗಳಿಗೆ ಹತ್ತಿರವಿದ್ದಂತಿದ್ದರೂ ವಾಸ್ತವದಲ್ಲಿ ಶಿಕ್ಷಣವು ಸಂಕುಚಿತತೆಯನ್ನು ಹೊಂದಿ, ಹಕ್ಕುಗಳ ಚೌಕಟ್ಟು ಕೂಡ ಮಾನವ ಬಂಡವಾಳ ಸಿದ್ಧಾಂತದ ಜೊತೆಗೆ ಬಹುತೇಕವಾಗಿ ತಳುಕು ಹಾಕಿಕೊಂಡಿರುತ್ತದೆ.

**ಉಲ್ಲೇಖಗಳು**


Amartya Sen's Capability Approach and Social Justice in Education Edited by Melanie Walker and Elaine Unterhalter Palgrave Macmillan 2007 Chapter 1, 2 and 3

Baptiste I (2001) Educating Lone Wolves: Pedagogical Implications of Human Capital Theory First Published May 1, 2001 Research Article https://doi.org/10.1177/074171360105100302

Behar Anurag, Learning Curve Issue 25, Page 2.

Chapter 2, Education – Meaning-origins, History and philosophy of education.

Dewan H K. Learning Curve Issue 25, Page 17

History of Education – Wikipedia, Accessed 1/19/20 5:26 PM. Indian Sub-continent, China, Greece and Rome, Formal education in the Middle ages (500 – 1500 AD). https://en.wikipedia.org/wiki/

Nussbaum M C, (2011) Creating Capabilities: The Human Development Approach, Martha C Nussbaum, The Benklap Press of Harvard University Press, Cambridge, Massachusetts and London England, 2011

Stanford Encyclopedia of Philosophy

The Capability Approach. First published Thu Apr 14, 2011; substantive revision Mon Oct 3, 2016 https://plato.stanford.edu/entries/capability-approach/

The origins of the world's first school – steemit.com

Tomassello M. (2014) A natural history of Human Thinking, Harvard University press, 2014

Tomassello M. (1999) The Cultural Origins of Human Cognition, Harvard University Press, 1999





**ಹೃದಯಕಾಂತ್ ದಿವಾನ್** ಅವರು ಪ್ರಸ್ತುತ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಅನುವಾದ ಉಪಕ್ರಮಗಳಲ್ಲಿ ಕಾರ್ಯ–ನಿರ್ವಹಿಸುತ್ತಿದ್ದಾರೆ. ಅವರು 'ಏಕಲವ್ಯ'ದ ಸ್ಥಾಪಕ ತಂಡದ ಸದಸ್ಯರು ಮತ್ತು ಉದಯಪುರದ ವಿದ್ಯಾಭವನ ಸೊಸೈಟಿಯ ಶೈಕ್ಷಣಿಕ ಸಲಹೆಗಾರರಾಗಿದ್ದಾರೆ. ಅವರು 40 ವರ್ಷಗಳಿಂತಲೂ ಹೆಚ್ಚು ಕಾಲದಿಂದ ಶಿಕ್ಷಣ ಕ್ಷೇತ್ರದ ಬೇರೆಬೇರೆ ಉಪಕ್ರಮಗಳಲ್ಲಿ ಸಕ್ರಿಯರಾಗಿದ್ದಾರೆ. ನಿರ್ದಿಷ್ಟವಾಗಿ ಅವರು ಶೈಕ್ಷಣಿಕ ಸಂಶೋಧನೆ ಮತ್ತು ರಾಜ್ಯ ಶೈಕ್ಷಣಿಕ ಸಂರಚನೆಗಳ ಬದಲಾವಣೆಯ ಪ್ರಯತ್ನಗಳಲ್ಲಿ ಭಾಗಿಯಾಗಿದ್ದಾರೆ. ಅವರನ್ನು hardy@azimpremjifoundaton.orgನಲ್ಲಿ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಲತಾ ಕೆ ಸಿ**

# ಮಕ್ಕಳ ಸಾಮರ್ಥ್ಯದ ಮೇಲೆ ಶಿಕ್ಷಕರ ನಂಬಿಕೆಯ ಮಹತ್ವ

ವಿಮಲಾ ರಾಮಚಂದ್ರನ್

"ಈ ತರಗತಿಗಳಲ್ಲಿ ನಮಗೆ ಕಾಣಿಸುವ ಪ್ರಧಾನ ನಂಬಿಕೆಗಳು ಹಾಗೂ ಬೋಧನಾ ವಿಧಾನದ ಅಭ್ಯಾಸಗಳನ್ನು ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಮೊದಲಿಗೆ ಕಾಣುವುದು 'ಪ್ರತಿಯೊಂದು ಮಗುವೂ ಕಲಿಯಬಲ್ಲದು, ಆ ಜವಾಬ್ದಾರಿ ನಮ್ಮದು' ಎಂಬ ಶಿಕ್ಷಕರ ವಿಶ್ವಾಸ.. ಶಿಕ್ಷಕರು ಪ್ರತಿಯೊಂದು ಮಗುವಿಗೂ ಕಲಿಕಾ ಅನುಭವವನ್ನು ಆಸಕ್ತಿಕರವಾಗಿ ಮಾಡಲು ಪ್ರಯತ್ನಿಸುತ್ತಾರೆ ಹಾಗೂ ತರಗತಿಗೆ ಬಂದಾಗ ಮಗುವಿನಲ್ಲಿರುವ ಜ್ಞಾನವನ್ನು ಗೌರವಿಸುತ್ತ ಅದನ್ನು ಬಳಸಿ ಇನ್ನಷ್ಟು ಹೊಸ ಜ್ಞಾನವನ್ನು ಕಟ್ಟಿಕೊಡುತ್ತಾರೆ. ಈ ಶಿಕ್ಷಕರು ಪರಿಕಲ್ಪನೆಗಳನ್ನು ತಮ್ಮ ಸುತ್ತಲಿನ ಬದುಕಿಗೆ ಸಮೀಕರಿಸಲು ಮಕ್ಕಳಿಗೆ ಸಹಾಯ ಮಾಡುತ್ತಾರೆ...." (ಎಸ್. ಗಿರಿಧರ್, 2019. ಪು.122)

ಎಸ್. ಗಿರಿಧರ್ ಅವರ ಇತ್ತೀಚಿನ ಪುಸ್ತಕ ಸಾಧಾರಣ ಜನ ಅಸಾಧಾರಣ ಶಿಕ್ಷಕರು (Ordinary People- Extraordinary Teachers (S Giridhar 2019) ಓದುತ್ತಿದ್ದಾಗ ಅನಿಸಿದ್ದು ಈ ಎಲ್ಲ ಅಸಾಮಾನ್ಯ ಶಿಕ್ಷಕರ ಜೀವನದಲ್ಲಿನ ಒಂದು ಸಮಾನವಾದ ಅಂಶವೆಂದರೆ ಪ್ರತಿಯೊಂದು ಮಗುವಲ್ಲೂ ಹುಟ್ಟಿನಿಂದಲೇ ಕಲಿಯಲು ಬೇಕಾದ ಸಾಮರ್ಥ್ಯವಿದೆ ಎಂಬ ನಂಬಿಕೆಯನ್ನು ಅವರೆಲ್ಲಾ  ಹೊಂದಿರುವುದು. ಈ ಒಂದು ನಂಬಿಕೆಯು ಅವರು ಕೆಲಸ ಮಾಡುವ ರೀತಿಯಲ್ಲಿ, ಬೋಧನಾ ವಿಧಾನದ ಬಳಕೆಯಲ್ಲಿ ಮತ್ತು ಮುಖ್ಯವಾಗಿ ಮಕ್ಕಳೊಂದಿಗಿನ ಅವರ ಸಂಬಂಧದ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿತು.

ಶಿಕ್ಷಕರ ನಂಬಿಕೆ ಅತಿ ಮುಖ್ಯ ಎನ್ನುವುದು ಕಳೆದ ಮೂವತ್ತು ವರ್ಷಗಳ ನನ್ನ ಸಂಶೋಧನೆಯಿಂದ ನನಗೆ ಮನವರಿಕೆಯಾಗಿದೆ. ಏಕೆಂದರೆ ಈ ನಂಬಿಕೆಯು ಮಕ್ಕಳ ಬಗ್ಗೆ ಅವರ ವರ್ತನೆ, ತರಗತಿಯಲ್ಲಿ ಅವರು ಅನುಸರಿಸುವ ಬೋಧನಾ ವಿಧಾನದ ಹಾಗೂ ಬಹಳ ಮುಖ್ಯವಾಗಿ ಪ್ರತಿಯೊಂದು ಮಗುವಿನ ಅಗತ್ಯಕ್ಕೆ ಸ್ಪಂದಿಸುವ ಸಾಮರ್ಥ್ಯವನ್ನು ಖಚಿತಪಡಿಸಿಕೊಳ್ಳಲು ಪಾಲಿಸಬೇಕಾದ ಸಮಯ ನಿರ್ವಹಣೆಯ ಮೇಲೆ ಪ್ರಭಾವ ಬೀರುತ್ತದೆ. ಇದೇ ಧೋರಣೆಯಲ್ಲಿ ಮುಂದುವರಿದರೆ ಶಿಕ್ಷಕರ ಪೂರ್ವಾಗ್ರಹಗಳು, ಪಕ್ಷಪಾತಗಳು ಹಾಗೂ ವರ್ತನೆಗಳು ಕಲಿಕೆಗೆ ನಿರ್ಣಾಯಕ ತಡೆಗಳಾಗಬಹುದು. ಯಾವುದೇ ಒಂದು ಜಾತಿಯ/ವರ್ಗದ ಮಕ್ಕಳಲ್ಲಿ ಕಲಿಕೆಯೆಡೆಗೆ ಜನ್ಮಜಾತ ಸಾಮರ್ಥ್ಯವಿಲ್ಲ ಎಂದು ಶಿಕ್ಷಕರು ನಂಬಿದರೆ ಆ ಮಗುವನ್ನು ಬಹುತೇಕ ನಿರ್ಲಕ್ಷಿಸುವ ಸಾಧ್ಯತೆಯಿದ್ದು, ಕಲಿಯಬಹುದು ಎಂದು ನಂಬಿರುವ ಮಕ್ಕಳ ಮೇಲಷ್ಟೇ ಅವರ ಗಮನ ಕೇಂದ್ರೀಕೃತವಾಗಿರುತ್ತದೆ. ಹೆಣ್ಣುಮಕ್ಕಳು ಗಣಿತವನ್ನು ಕಲಿಯಲಾರರು ಎಂದು ಒಬ್ಬ ಶಿಕ್ಷಕ ನಂಬಿ ಅದನ್ನು ಪ್ರಕಟಪಡಿಸಿದರೆ ಹೆಣ್ಣುಮಕ್ಕಳು ತಮ್ಮ ಪ್ರಶ್ನೆಗಳನ್ನು ಕೇಳಲು ಅಥವಾ ಸಂದೇಹಗಳನ್ನು ನಿವಾರಿಸಿಕೊಳ್ಳಲು ಹೆದರಬಹುದು. ಆರಂಭದಲ್ಲಿಯೇ ಶಿಕ್ಷಕರ ನಂಬಿಕೆ ಹಾಗೂ ಅವರು ಹೊಂದಿರುವ ಜ್ಞಾನದ ನಡುವಿನ ವ್ಯತ್ಯಾಸವನ್ನು ತಿಳಿಯುವುದು ಬಹಳ ಮುಖ್ಯ.

ಇಲ್ಲಿ ಎರಡು ರೀತಿಯ ಜ್ಞಾನಗಳಿವೆ – 'ಒಂದು ಸಮುದಾಯದಿಂದ ಅಂಗೀಕರಿಸಲ್ಪಟ್ಟ ವಸ್ತುನಿಷ್ಠ ಜ್ಞಾನ (ಉದಾ. ಅಧಿಕೃತ ವಿಷಯ ಜ್ಞಾನ) ಹಾಗೂ ವ್ಯಕ್ತಿನಿಷ್ಠ ಜ್ಞಾನ. ನಂಬಿಕೆಯು ಒಬ್ಬ ವ್ಯಕ್ತಿಯ ವ್ಯಕ್ತಿನಿಷ್ಠ ಜ್ಞಾನವನ್ನು ಪ್ರತಿನಿಧಿಸುತ್ತಿದ್ದು ವಸ್ತುನಿಷ್ಠ ಜ್ಞಾನದಿಂದ ಬೇರೆಯಾಗಿ ಗುರುತಿಸಲ್ಪಡುತ್ತದೆ...' (ಟರ್ನರ್, ಕ್ರಿಸ್ಟೆನ್‌ಸನ್ ಹಾಗೂ ಮೆಯರ್, 2014, ಪು. 361). ಭಾರತ ಸರ್ಕಾರದ ಎಂಹೆಚ್‌ಆರ್‌ಡಿಗಾಗಿ 2011–12ರಲ್ಲಿ ಸಮನ್ವಯತೆ ಮತ್ತು ಹೊಡಗಿಡುವಿಕೆಯ ಬಗ್ಗೆ ನನ್ನ ಮಾರ್ಗದರ್ಶನದಲ್ಲಿ ನಡೆದ ಒಂದು ಅಧ್ಯಯನದಲ್ಲಿ ನಾವು ಕಂಡುಕೊಂಡಿದ್ದೇನೆಂದರೆ ಕಡು ಬಡತನದ ಕುಟುಂಬದ ಮಕ್ಕಳು – ಅದರಲ್ಲಿಯೂ ವಿಶೇಷವಾಗಿ ಬುಡಕಟ್ಟು ಹಾಗೂ ದಲಿತ ಮಕ್ಕಳಲ್ಲಿ ಭಾಷೆ, ಗಣಿತ ಹಾಗೂ ವಿಜ್ಞಾನ ಕಲಿಯುವಿಕೆಗೆ ಬೇಕಾದ ಸಹಜ ಸಾಮರ್ಥ್ಯವಿಲ್ಲ ಎಂದು ಶಿಕ್ಷಕರು ಹಾಗೂ ಶಾಲಾ ಮುಖ್ಯಸ್ಥರು ನಂಬಿದ್ದರು. ಇದರ ಪರಿಣಾಮವಾಗಿ ಕಲಿಯಲಾರದವರು ಎಂದು ಶಿಕ್ಷಕರು ನಂಬಿದ್ದ ಆ ಮಕ್ಕಳನ್ನು ತಲುಪುವ ಯಾವುದೇ ಪ್ರಯತ್ನವನ್ನೂ ಅವರು ಮಾಡಲಿಲ್ಲ (ರಾಮಚಂದ್ರನ್ ಹಾಗೂ ನೌರೆಮ್, 2012). ಅದೇ ಅಧ್ಯಯನದಲ್ಲಿ, ಎಲ್ಲ ಮಕ್ಕಳೂ ಕಲಿಯಬಲ್ಲರು ಹಾಗೂ ಅವರ ಮನೆಯ ಪರಿಸರ ಮಕ್ಕಳ ಕಲಿಕೆಗೆ ಎಲ್ಲ ಸಮಯದಲ್ಲೂ ತಡೆಯಾಗಬೇಕಿಲ್ಲ ಎಂದು ನಿಜವಾಗಿ ನಂಬಿದ ಕೆಲವು ಶಿಕ್ಷಕರೂ ಕೂಡ ಸಿಕ್ಕರು.. ಇಂತಹ ಶಿಕ್ಷಕರ ವ್ಯಕ್ತಿನಿಷ್ಠ  ಜ್ಞಾನವು ಬಡ ಹಾಗೂ ಸಮಾಜದ ಅಂಚಿನಲ್ಲಿರುವ ಮಕ್ಕಳೊಂದಿಗೆ ಪರಿಣಾಮಕಾರಿಯಾಗಿ ಕೆಲಸ ಮಾಡಿರುವುದು ಹಾಗೂ ಮೂಲ ಪರಿಕಲ್ಪನೆಗಳನ್ನು ಗ್ರಹಿಸಲು ಅವರನ್ನು ಸಮರ್ಥರನ್ನಾಗಿಸುವುದರ ಅನುಭವವನ್ನು ಆಧರಿಸಿರುವುದು ನಾವು ಇದನ್ನು ಮತ್ತಷ್ಟು ಅಧ್ಯಯನ ನಡೆಸಿದಾಗ ತಿಳಿದು ಬಂದಿತು. ಮಕ್ಕಳು ತರಗತಿಗೆ ಹೊತ್ತುತಂದ ಜ್ಞಾನವನ್ನು ಇನ್ನಷ್ಟು ವೃದ್ಧಿಸುವ ಪ್ರಯತ್ನವನ್ನು ಈ ಶಿಕ್ಷಕರು ಮಾಡಿರುವುದೂ ಅಷ್ಟೇ ಮಹತ್ವದ ಸಂಗತಿಯಾಗಿದೆ.

ಉದಾಹರಣೆಗೆ, ಒಬ್ಬ ಶಿಕ್ಷಕಿಯು ಕಪ್ಪುಹಲಗೆಯ ಮೇಲೆ ಕಾಲಂಗಳನ್ನು ಬರೆದು, ಒಂದೇ ಪದವನ್ನು ಬೇರೆಬೇರೆ ಭಾಷೆಗಳಲ್ಲಿ – ಆ ಪ್ರದೇಶದ ಮುಖ್ಯ ಭಾಷೆಯಲ್ಲಿ, ಆ ಪ್ರದೇಶದಲ್ಲಿ ಪ್ರಬಲವಾಗಿ ಬಳಸುವ ಬುಡಕಟ್ಟು ಭಾಷೆಯಲ್ಲಿ, ತರಗತಿಯಲ್ಲಿರುವ ಅಲ್ಪಸಂಖ್ಯಾತ ಬುಡಕಟ್ಟು ಜನಾಂಗದವರು ಉಪಯೋಗಿಸುವ ಭಾಷೆಯಲ್ಲಿ ಹಾಗೂ ಆಂಗ್ಲ ಭಾಷೆಯಲ್ಲೂ ಸಹ – ಬಳಸುವಂತೆ ಬರೆದರು. ಒಂದೇ ವಸ್ತು ವಿಷಯವು ಹೇಗೆ ತರಗತಿಯಲ್ಲಿ ಪ್ರತಿನಿಧಿತವಾದ ಬೇರೆಬೇರೆ ಭಾಷೆಗಳಲ್ಲಿ ವಿಭಿನ್ನವಾಗಿ ಉಲ್ಲೇಖಿತ–ವಾದುದನ್ನು ಪರಿಗಣಿಸಿ ಅದರ ಬಗ್ಗೆ ಚರ್ಚಿಸಿ–ದೊಡನೆಯೇ ಪ್ರತಿಯೊಂದು ಮಗುವನ್ನೂ ಕಲಿಕಾ ಪ್ರಕ್ರಿಯೆಯಲ್ಲಿ ಶಿಕ್ಷಕಿ ಸೇರಿಸಿಕೊಂಡರು. ಇನ್ನೊಂದು ಶಾಲೆಯಲ್ಲಿ ಒಬ್ಬ ಶಿಕ್ಷಕಿ ಸ್ಥಾನಬೆಲೆಯನ್ನು ಕಲಿಸಲು ಎಲೆಗಳು ಹಾಗೂ ಕಡ್ಡಿಗಳಿರುವ ಕಟ್ಟುಗಳನ್ನು ಉಪಯೋಗಿಸುವುದನ್ನು ನೋಡಿದೆ. ಆ ಹಳ್ಳಿಯ ಅತ್ಯಂತ ಬಡ ಸಮುದಾಯಗಳ

ಮಕ್ಕಳು ತಮ್ಮ ಪೋಷಕರು ಎಲೆಗಳ ಕಟ್ಟುಗಳನ್ನು ತಯಾರಿಸುವುದನ್ನು ಹಾಗೂ ಎಣಿಸುವುದನ್ನು ನೋಡುತ್ತಿದ್ದರು. ಮಕ್ಕಳು 50 ಎಲೆಗಳು ಅಥವಾ 100 ಎಲೆಗಳಿರುವ ಕಟ್ಟುಗಳನ್ನು ತಯಾರಿಸುವುದಕ್ಕೆ ಒಮ್ಮೊಮ್ಮೆ ತಮ್ಮ ಪೋಷಕರಿಗೆ ನೆರವಾಗುತ್ತಿದ್ದರು. ಗಣಿತದ ಪರಿಕಲ್ಪನೆಗಳನ್ನು ನಿಜ ಜೀವನದ ಚಟುವಟಿಕೆಗಳೊಂದಿಗೆ ಸಮೀಕರಿಸಿದ್ದು ಅದ್ಭುತವಾದ ಪರಿಣಾಮವನ್ನು ಬೀರಿತು. ಮಕ್ಕಳಿಗೆ ಕಲಿಕೆ ವಿನೋದವೆನಿಸಿದ್ದರಿಂದ ಆ ಚಟುವಟಿಕೆಯಲ್ಲಿ ಸಕ್ರಿಯರಾಗಿ ತೊಡಗಿಸಿಕೊಂಡರು.

ಕೆಲವು ಆಸಕ್ತಿಕರವಾದ ವೈರುಧ್ಯಗಳನ್ನೂ ಸಹಾ ನಾವು ನೋಡಿದೆವು. 'ಆರು ಮಾದರಿ ರಾಜ್ಯಗಳ ಶಿಕ್ಷಕರೊಡನೆಯ ಚರ್ಚೆಗಳು ಸಹ ಒಂದು ಸಮಾನ ಗ್ರಹಿಕೆಯನ್ನು ಎತ್ತಿ ತೋರಿಸಿತು: ಅತ್ಯಂತ ಅವಕಾಶ ವಂಚಿತ ಸಮಾಜದ ಗುಂಪಿನ ಮಕ್ಕಳು ಶಾಲೆಯಲ್ಲಿ ಉತ್ತಮವಾದ ಸಾಧನೆಯನ್ನು ಮಾಡುವುದಿಲ್ಲ ಎಂಬ ಅಭಿಪ್ರಾಯವಿತ್ತು. ಆಸಕ್ತಿಕರವಾದ ಅಂಶವೆಂದರೆ ಅದೇ ಶಾಲೆಗಳಿಂದ ಬಂದ ಮಾಹಿತಿಯ ಪ್ರಕಾರ ಇದೊಂದು ತಪ್ಪು ಅಭಿಪ್ರಾಯವಾಗಿದ್ದು ಅವಕಾಶ ವಂಚಿತ ಸಮಾಜದ ಗುಂಪಿನ ಮಕ್ಕಳು ನಿಜವಾಗಿಯೂ ಶೈಕ್ಷಣಿಕವಾಗಿ ಉತ್ತಮ ಸಾಧನೆಯನ್ನು ಮಾಡುತ್ತಿದ್ದಾರೆ ಎನ್ನುವುದನ್ನು ಬಹಿರಂಗಪಡಿಸಿತು. ಶಿಕ್ಷಕರ ಗ್ರಹಿಕೆಗಳು ಮತ್ತು ವಾಸ್ತವದ ನಡುವೆ ಸಂಬಂಧವೇ ಇರಲಿಲ್ಲ. ಶಿಕ್ಷಕರು ಸ್ವತಃ ತಾವೇ 'ಚುರುಕಾದ' ಮಕ್ಕಳು ಹಾಗೂ ಪಾಠದಲ್ಲಿ ಆಸಕ್ತಿ ಹೊಂದಿರುವ ಮಕ್ಕಳನ್ನು (ಅವರಲ್ಲಿ ಹಲವರು ದಲಿತರು/ಆದಿವಾಸಿಗಳು) ಗುರುತಿಸಿದರು. ಜೊತೆಜೊತೆಗೆ ಅವರಲ್ಲಿ ರೂಢಿಗತ ಮಾದರಿ, ಪೂರ್ವಾಗ್ರಹಗಳನ್ನು ಕೂಡಾ ಹೊಂದಿದ್ದರು. (ರಾಮಚಂದ್ರನ್ ಹಾಗೂ ನೌರೆಮ್, 2015, ಪುಟಗಳು 25–26) ನಾವು ಈ ವೈರುಧ್ಯದೆಡೆಗೆ ಶಿಕ್ಷಕರ ಗಮನ ಸೆಳೆದಾಗ, ಅವರು ಕಲಿಯಲು ಅಸಮರ್ಥರು ಎನ್ನುವಂತಹ ಸಮುದಾಯ ಅಥವಾ ಕುಟುಂಬದಿಂದ ಅವನು/ಳು ಬಂದಿದ್ದರೂ ಸಹ ವೈಯಕ್ತಿಕವಾಗಿ ಒಂದು ಮಗುವಿನ ಅಸಾಧಾರಣ ಸಾಮರ್ಥ್ಯಗಳಿಗೆ 'ಯಶಸ್ಸ'ನ್ನು ಕಾರಣವಾಗಿಸುತ್ತ, ಎಲ್ಲದರಲ್ಲಿಯೂ ಅಪವಾದಗಳಿರುತ್ತವೆ ಎಂಬಂತಹ ಮಾತುಗಳನ್ನಾಡಿದರು.

ಜಾಗತಿಕ ಪುರಾವೆಗಳು ಸೂಚಿಸುವಂತೆ 'ಬೋಧನೆ ಹಾಗೂ ಕಲಿಕೆಯ ಬಗ್ಗೆ ಇರುವ ಕೆಲವು ಬಲವಾದ ನಂಬಿಕೆಗಳು ಶಿಕ್ಷಕರಿಗೆ ರಚನಾತ್ಮಕ ಅಥವಾ ಕಲಿಕಾ – ಕೇಂದ್ರಿತ ಮತ್ತು ಬೋಧನಾ ವಿಧಾನವನ್ನು ಅಳವಡಿಸಿಕೊಳ್ಳಲು ತಡೆಯಾಗಿವೆ'. ಮೊದಲಿಗೆ, ಕಲಿಕಾರ್ಥಿಗಳು ಹಾಗೂ ವಿಷಯ ಈ ಎರಡನ್ನೂ ಸಂವಾದಾತ್ಮಕ ಹಾಗೂ ಹೊಂದಿಸಿ–ಕೊಳ್ಳುವಂತಹುದು ಎಂದುಕೊಳ್ಳದೆ ಸ್ಥಿರವಾದುದು ಎಂದು ಬಹಳಷ್ಟು ಶಿಕ್ಷಕರು ಪರಿಗಣಿಸುತ್ತಾರೆ. ಈ ಶಿಕ್ಷಕರು ಬೆಳವಣಿಗೆ ಹಾಗೂ ಬುದ್ಧಿಮತ್ತೆಯನ್ನು ಒಳಗೊಂಡ ವೈಯಕ್ತಿಕ ಭಿನ್ನತೆಗಳು ಪಠ್ಯಕ್ರಮವನ್ನು ಬೋಧಿಸುವ ತಮ್ಮ ಸಾಮರ್ಥ್ಯವನ್ನು ಮಿತಿಗೊಳಿಸುತ್ತಿದ್ದು. ಹಾಗಾಗಿ ಇದನ್ನು ವಿದ್ಯಾರ್ಥಿಗಳಿಗೆ 'ಸರಿಹೊಂದುವ' ಶೈಲಿಯಲ್ಲಿ ಅಥವಾ ಗತಿಯಲ್ಲಿ ಅಳವಡಿಸಿಕೊಳ್ಳಬೇಕು ಎಂಬ ಅಂಶದ ಬಗ್ಗೆ ಅವರು ನಂಬಿಕೆಯುಳ್ಳವರಾಗಿದ್ದಾರೆ. ಇದಕ್ಕೆ ಅನುಗುಣವಾದ ಇನ್ನೊಂದು ನಂಬಿಕೆಯೆಂದರೆ, ಏನನ್ನಾದರೂ ಕಲಿಸಿದರೆ (ಅಂದರೆ, ವಿವರಣೆ ಅಥವಾ ಪ್ರದರ್ಶನದ ಮೂಲಕ), ಅದನ್ನು ಕಲಿಯಲೇಬೇಕು (Nuthall-2004) ಎಂದು ಶಿಕ್ಷಕರು ಭಾವಿಸಬಹುದು. ವಿದ್ಯಾರ್ಥಿಗಳು ಕಲಿಯದಿದ್ದರೆ ಆ ಸಮಸ್ಯೆಗೆ ವಿದ್ಯಾರ್ಥಿಗಳ (ಅಚಲವಾದ) ಉತ್ತೇಜನ, ಸಾಮರ್ಥ್ಯ ಅಥವಾ ನಿರಂತರತೆಯ ಕೊರತೆಯೇ ಕಾರಣ ಎಂದು ಆರೋಪಿಸಲಾಗುತ್ತದೆಯೇ ಹೊರತು ಸೂಚನೆಗಳ ಕೊರತೆಯಿಂದಾಗಿ ಎನ್ನುವುದಿಲ್ಲ (ಫ್ಲೋಡೆನ್ 1996). 'ಇಂತಹ ನಂಬಿಕೆಗಳು ಸಂವಾದಾತ್ಮಕ ವಿಧಾನಗಳಿಗೆ ದಾರಿ ತೋರಿಸುವಂತಹ ನಂಬಿಕೆಗಳಿಗೆ ಸಂಪೂರ್ಣವಾಗಿ ವಿರುದ್ಧವಾಗಿವೆ...' (ಟರ್ನರ್, ಕ್ರಿಸ್ಟೆನ್‌ಸನ್ ಹಾಗೂ ಮಾಯರ್, 2014, ಪು 362; ನಟ್ಹಾಲ್ 2004 ಹಾಗೂ ಫ್ಲೋಡೆನ್ 1996–ಕ್ರಿಸ್ಟೆನ್‌ಸನ್ ಹಾಗೂ ಮಯರ್ ಉಲ್ಲೇಖಿಸಿದ್ದಾರೆ.).

ಈ ಸಮಸ್ಯೆಯು ಶಿಕ್ಷಕರು ಪ್ರತಿಯೊಂದು ಮಗುವಿನ ಕಲಿಕೆಯನ್ನು ಖಚಿತಪಡಿಸುವುದಕ್ಕಿಂತ ತರಗತಿಯ ನಿರ್ವಹಣೆಯ ಮೇಲೆ ಹೆಚ್ಚು ಗಮನವನ್ನು ನೀಡಬೇಕಾಗುತ್ತದೆ ಎಂಬ ಅವರ ನಂಬಿಕೆಗಳ ಸುತ್ತ ಕೇಂದ್ರೀಕೃತವಾಗಿದೆ. ಸರ್ಕಾರವು ಆಯಾ ರಾಜ್ಯ ಸರ್ಕಾರ/ಶಿಕ್ಷಣ ಮಂಡಳಿಗಳು ನಿಗದಿಪಡಿಸುವ ವೇಳಾಪಟ್ಟಿಯೊಳಗೆ ಪಠ್ಯಕ್ರಮವನ್ನು ಪೂರೈಸಲು ನಿರ್ದೇಶನವಿತ್ತಾಗ ಈ ನಂಬಿಕೆ ಇನ್ನಷ್ಟು ಗಟ್ಟಿಗೊಳ್ಳುತ್ತದೆ. ಪ್ರತಿ ತಿಂಗಳು ಪಠ್ಯಕ್ರಮದ ನಿರ್ದಿಷ್ಟ ಭಾಗಗಳನ್ನು ಪೂರೈಸಲು ವೇಳಾಪಟ್ಟಿಗಳ ಮೂಲಕ ಅವರನ್ನು ನಿರ್ಬಂಧಿಸಲಾಗಿದೆ ಎಂದು ಶಿಕ್ಷಕರೊಡನೆ ನಡೆಸಿದ ಚರ್ಚೆಯ ವೇಳೆ ತಿಳಿದುಬಂದಿತು. ಮನೆಪಾಠಗಳನ್ನು ಏಕೆ ತೆಗೆದುಕೊಳ್ಳುತ್ತೀರಿ ಎಂದು ವಿದ್ಯಾರ್ಥಿಗಳಿಗೆ ಕಾರಣ ಕೇಳಿದಾಗ ಇದು ಸ್ಪಷ್ಟವಾಗುತ್ತದೆ. ಪ್ರತಿಯೊಂದು ಪಾಠದ ಕಲಿಕೆ ಆಗಿದೆಯೇ ಅಥವಾ ನೆನಪಿಟ್ಟು–ಕೊಳ್ಳಲಾಗಿದೆಯೇ ಎಂದು ಮನೆಪಾಠದ ಶಿಕ್ಷಕರು ಖಾತರಿ–ಪಡಿಸಿಕೊಳ್ಳುವತ್ತ ಗಮನಹರಿಸುತ್ತಾರೆ ಎಂದು ವಿದ್ಯಾರ್ಥಿಗಳು ಹೇಳುತ್ತಾರೆ. ಪರೀಕ್ಷೆಗಳನ್ನು ಎದುರಿಸುವುದಕ್ಕೆ ವಿದ್ಯಾರ್ಥಿಯನ್ನು ಸಮರ್ಥನನ್ನಾಗಿಸಲು ಬೇಕಾದ ಪಾಠಗಳು ಹಾಗೂ ಅದಕ್ಕೆ ಸಂಬಂಧಪಟ್ಟ ಪ್ರಶ್ನೆಗಳು ಮತ್ತು ಉತ್ತರಗಳನ್ನು ವ್ಯವಸ್ಥಿತವಾಗಿ ಕಂಠಪಾಠ ಮಾಡಿಸಲಾಗುತ್ತದೆ. ನಿಷ್ಕ್ರಿಯವಾದ ಗಮನಿಸುವಿಕೆ ಅಥವಾ ಭಾಗವಹಿಸುವಿಕೆಯನ್ನು ಮನೆಪಾಠದ ಶಿಕ್ಷಕರು ಪ್ರೋತ್ಸಾಹಿಸುವುದಿಲ್ಲ. ಆದರೆ ತರಗತಿಯಲ್ಲಿ 'ಒಂದು ಮಟ್ಟ'ಕ್ಕೆ ಏರದಿರುವ ಮಕ್ಕಳು ಎಂದು ಪರಿಗಣಿಸಿ ಆ ಮಕ್ಕಳನ್ನು ಶಿಕ್ಷಕರು ನಿರ್ಲಕ್ಷಿಸುತ್ತಾರೆ. ಇದರಿಂದ ಕೊನೆಯ ಬೆಂಚಿನಲ್ಲಿ ಕುಳಿತು–ಕೊಳ್ಳುವುದು ಅಥವಾ ನಿಷ್ಕ್ರಿಯವಾದ ಗಮನಿಸುವಿಕೆಗೆ ಮಕ್ಕಳನ್ನು ಪ್ರೋತ್ಸಾಹಿಸಿ, ತರಗತಿಯಲ್ಲಿ ಏನಾಗುತ್ತಿದೆ ಎನ್ನುವುದನ್ನೂ ಶಿಕ್ಷಕರು ನಿರ್ಲಕ್ಷಿಸುತ್ತಾರೆ.

ತರಗತಿಗಳು ಹಾಗೂ ಮನೆಪಾಠ ಎರಡರಲ್ಲಿಯೂ ಕಂಠಪಾಠ ಸಾಮಾನ್ಯವಾಗಿರುವಾಗ ಶಾಲೆಗಳಲ್ಲಿ ಹಾಗೂ ಮನೆಪಾಠದ ಕೇಂದ್ರಗಳಲ್ಲಿ ನಡೆಯುವ ಬೋಧನಾ–ಕಲಿಕಾ ಪ್ರಕ್ರಿಯೆಗಳನ್ನು ಅರ್ಥೈಸಲು ಮಕ್ಕಳ ಸಾಮರ್ಥ್ಯದ ಮೇಲೆ ಶಿಕ್ಷಕರಿಗಿರಬೇಕಾದ ನಂಬಿಕೆಯೇ ಮುಖ್ಯವಾದ ಅಂಶವಾಗುತ್ತದೆ. 2015ರಲ್ಲಿ ಲೇಖಕರು ನಡೆಸಿದ ಅಧ್ಯಯನದಲ್ಲಿ (ರಾಮಚಂದ್ರನ್ ಹಾಗೂ ನೌರೆಮ್, 2015) ಕಂಡುಬಂದಂತೆ ಕೆಲವು ಮಕ್ಕಳಿಂದ ಶಿಕ್ಷಕರ ನಿರೀಕ್ಷೆಗಳು ಅಥವಾ ತರಗತಿಗೆ ಬರುವಾಗ ಶಿಕ್ಷಕರು ಹೊಂದಿರುವ ಜಾತಿ/ಲಿಂಗ ಅಥವಾ ಸಾಮಾಜಿಕ ವರ್ಗದ ರೂಢಿಗತ ಮಾದರಿಗಳು ಬಹಳ ದೊಡ್ಡ ವ್ಯತ್ಯಾಸವನ್ನು ಉಂಟು ಮಾಡುತ್ತವೆ. ಈ ರೂಢಿಗತ ಮಾದರಿಗಳು ಸ್ವತಃ ನೆರವೇರಿಸಿಕೊಳ್ಳಬೇಕಾದ ಭವಿಷ್ಯವಾಣಿಗಳಂತೆ

– ಕಲಿಕೆಗೆ ಅಸಮರ್ಥರು ಎಂದು ಪರಿಗಣಿಸಿ ಅವರನ್ನು ನಿರ್ಲಕ್ಷಿಸುವುದು – ಇಂತಹ ವಿದ್ಯಾರ್ಥಿಗಳನ್ನು ತರಗತಿಯಲ್ಲೇ ನಿಷ್ಕ್ರಿಯ ಹಾಗೂ ಅಂಚಿಗೆ ತಳ್ಳಲ್ಪಟ್ಟ ಪರಿಸ್ಥಿತಿಗೆ ದೂಡಿದಂತಾಗುತ್ತದೆ. ಮಕ್ಕಳನ್ನು ತರಗತಿಯಲ್ಲಿಯೇ ಅಂಚಿಗೆ ತಳ್ಳಲ್ಪಟ್ಟಾಗ ಅವರು ನಿಷ್ಕ್ರಿಯರಾಗುತ್ತಾರೆ. ಮಕ್ಕಳು ಒಂದು ತರಗತಿಯಿಂದ ಮುಂದಿನ ತರಗತಿಗೆ ಹೋದಾಗ, ಈಗಿರುವ ನಪಾಸು ಮಾಡುವಂತಿಲ್ಲ ಎಂಬ ಪದ್ಧತಿಯು (ಮೌಲ್ಯಮಾಪನ ಮಾಡುವಂತಿಲ್ಲ ಎಂದು ಶಿಕ್ಷಕರು ನಿರೂಪಿಸಿಕೊಂಡಂತೆ), ಕಲಿಯುತ್ತಿಲ್ಲ ಎನ್ನುವ ಹೆಚ್ಚುವರಿ ಹೊರೆಯೊಂದಿಗೆ ಕೂಡಿಕೊಳ್ಳುತ್ತದೆ. ಶೈಕ್ಷಣಿಕ ಅಗತ್ಯವನ್ನು ನಿಭಾಯಿಸಲು ತಮಗೆ ಸಾಧ್ಯವಾಗಲಿಲ್ಲವಾದ್ದರಿಂದ ಶಾಲೆಯನ್ನು ತೊರೆಯದೇ ಬೇರೆ ಆಯ್ಕೆ ಇರಲಿಲ್ಲ ಎಂದು ಫೋಕಸ್ ಗ್ರೂಪ್ ಚರ್ಚೆಯಲ್ಲಿ 9ನೇ ತರಗತಿಗೆ ದಾಖಲಾಗಿ ಅನಂತರ ಶಾಲೆಯನ್ನು ತೊರೆದ ಮಕ್ಕಳು ಹೇಳಿದ್ದಾರೆ.

ಅಭ್ಯಾಸ ಕೈಗೊಳ್ಳುವಲ್ಲಿ ಅಸಮರ್ಥತೆ ಹಾಗೂ ವೈಫಲ್ಯವೇ ಮಕ್ಕಳು ಶಾಲೆಯಿಂದ ಹೊರಗುಳಿಯುವುದಕ್ಕೆ ಮುಖ್ಯ ಕಾರಣವಾಯಿತು. 'ಶಿಕ್ಷಕರ ಕೊರತೆಯಿತ್ತು, ಶಾಲೆಯಲ್ಲಿ ಯಾವುದೇ ಪಾಠಗಳು ನಡೆಯುತ್ತಿರಲಿಲ್ಲ. ಹಾಗಾಗಿ ಮಕ್ಕಳು ಶಾಲೆಯನ್ನು ತೊರೆದರು (ಪಢಾಯಿ ಛೂಟ್‌ಗಯೀ)' ಎಂದು ಶಾಲೆಯಿಂದ ಹೊರಗುಳಿದ ಮಕ್ಕಳ ಪೋಷಕರು ಹೇಳಿದರು.

'8ನೇ ತರಗತಿಯ ನಂತರವೂ ನಮ್ಮ ಮಕ್ಕಳು ಮುಂದುವರೆಯಲಿ ಎಂಬುದು ನಮ್ಮ ಆಸೆಯಾಗಿತ್ತು, ಆದರೆ "8ನೇ ತರಗತಿಯವರೆಗೂ ಹೆಚ್ಚೇನೂ ಕಲಿಕೆಯಾಗದೇ ಇದ್ದುದ್ದರಿಂದ ಅವರು ಓದುವುದನ್ನು ಮುಂದುವರೆಸಲು ಬಯಸಲಿಲ್ಲ" – ಓದುವುದು ಅವರಿಗೆ ಕಷ್ಟವೆನಿಸುತ್ತಿತ್ತು' ಎಂಬುದಾಗಿ ಇನ್ನೊಂದು ಗುಂಪಿನಲ್ಲಿ ಪೋಷಕರು ಹೇಳಿದರು. ಸ್ವಾರಸ್ಯಕರ ಸಂಗತಿಯೆಂದರೆ ಓದಿನಲ್ಲಿ ಆಸಕ್ತಿಯಿಲ್ಲ ಎನ್ನುವುದನ್ನು ಮಕ್ಕಳು ಕಲಿಯುತ್ತಿಲ್ಲ ಎಂಬುದಾಗಿ ಸಂಶೋಧನಾ ತಂಡದವರಿಗೆ ಹೇಳಲಾಯಿತು. (ರಾಮಚಂದ್ರನ್ ಹಾಗೂ ನಾಗ್‌ಪಾಲ್, 2019).

ಮೇಲೆ ಹೇಳಿರುವ ಯಾವುದೇ ಒಳನೋಟಗಳು ಮತ್ತು ಮಾಹಿತಿಗಳು ಹೊಸದಲ್ಲ – ಶಿಕ್ಷಕರ ನಂಬಿಕೆ ಎನ್ನುವುದು ಪರಿಹರಿಸಲು ಕಷ್ಟಕರವಾದ ವಿಷಯ ಎಂದು ಶಿಕ್ಷಣ ಸಮುದಾಯಕ್ಕೆ ಬಹುಶಃ ಮೊದಲಿನಿಂದಲೂ ತಿಳಿದಿದೆ. ಆಡಳಿತಗಾರರು, ಶಿಕ್ಷಕ ಶಿಕ್ಷಕರು ಹಾಗೂ ಶೈಕ್ಷಣಿಕ ಸಂಶೋಧಕರಿಗೆ ಈ ಸಮಸ್ಯೆಯನ್ನು ಹೇಗೆ ನಿಭಾಯಿಸುವುದು ಎನ್ನುವುದೇ ತಿಳಿಯುತ್ತಿಲ್ಲ. ಇಷ್ಟೆಲ್ಲ ತಿಳಿದಿದ್ದರೂ, ಸೇವಾನಿರತ ಶಿಕ್ಷಕ ತರಬೇತಿಯು ಗಡಸು ವಿಷಯಗಳು ಎಂದು ಅನ್ವಯಿಸಿ ಹೇಳಲಾಗುವ ನಿರ್ದಿಷ್ಟ ವಸ್ತುನಿಷ್ಠ ಜ್ಞಾನ ಅಥವಾ ಪರಿಕಲ್ಪನಾತ್ಮಕ ಅರಿವಿನ ಮೇಲೆ ಪ್ರಾಥಮಿಕ ಒತ್ತು ನೀಡುತ್ತದೆ. ಈಗಿರುವ ನಂಬಿಕೆಗಳನ್ನು ಹಾಗೂ ಪೂರ್ವಾಗ್ರಹಗಳನ್ನು ನಿಭಾಯಿಸಲು ಒಂದು ವ್ಯವಸ್ಥಿತವಾದ ಪ್ರಯತ್ನ ನಡೆದೇ ಇಲ್ಲ. ಅತ್ಯುತ್ತಮವಾದ ಶಾಲೆಗಳು ಅಥವಾ ಶಿಕ್ಷಕರ ಬಗ್ಗೆ ನಡೆದ ವಸ್ತುಸ್ಥಿತಿ ಅಧ್ಯಯನಗಳು ಆಸಕ್ತಿ ಹೊಂದಿರುವ ಹಾಗೂ ಹೆಚ್ಚು ಸಕ್ರಿಯರಾಗಿರುವ ಶಿಕ್ಷಕರು ಬದಲಾವಣೆಯನ್ನು ತರುತ್ತಾರೆ ಎಂದು ಮತ್ತೆಮತ್ತೆ ಸೂಚಿಸಿದರೂ ಇದು ನಿರ್ಲಕ್ಷಿತ ಕ್ಷೇತ್ರವೇ ಆಗಿದೆ. ಅವರ ವಿಷಯ ಜ್ಞಾನವು ಕಡಿಮೆಯಿದ್ದರೂ, ಇತರ ಶಿಕ್ಷಕರು ಅಥವಾ ಇತರೆ ಬೆಂಬಲ ವ್ಯವಸ್ಥೆಗಳತ್ತ (ಶಿಕ್ಷಕರ ವೇದಿಕೆಗಳು ಅಥವಾ ವಿಷಯ ವೇದಿಕೆಗಳು) ಕೈಚಾಚಿ ಸಹಾಯ ಕೋರುತ್ತಾರೆ.

ಸರ್ಕಾರ (NCERT) ಅಥವಾ ಖಾಸಗಿ/ಸರ್ಕಾರೇತರ ಸಂಸ್ಥೆಗಳು (ASER, EI) ನಡೆಸುವ ನಿಗದಿತ ಅವಧಿಯ ಮೌಲ್ಯಮಾಪನಗಳು ವಾಸ್ತವವಾಗಿ ದೇಶದಾದ್ಯಂತ ಸರ್ಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿ ದೊಡ್ಡ ಕಲಿಕಾ ಬಿಕ್ಕಟ್ಟು ಇದೆಯೆಂದು ನಮಗೆ ತಿಳಿಸಿವೆ. ಆದರೂ, ಹೆಚ್ಚುಹೆಚ್ಚು ಮೌಲ್ಯಮಾಪನ ಮಾಡಲು ಹಾಗೂ (ಇತ್ತೀಚಿನ ದಿನಗಳಲ್ಲಿ) ಯಾದೃಚ್ಛಿಕ ನಿಯಂತ್ರಿತ ಪರೀಕ್ಷೆಯ ಅಧ್ಯಯನಗಳನ್ನು (Randomised control trial-RCT) ಮಾಡಲು ಒತ್ತಡವಿದೆ. ಸದ್ಯ ಭಾರತಕ್ಕೆ ಪೋಲಿಷ್ ಅಥವಾ ಫಿನ್ನಿಶ್ ದೇಶಗಳ ನಿದರ್ಶನದಿಂದ ಪಾಠಗಳನ್ನು ಪಡೆಯುವ ಅಗತ್ಯತೆಯಿದೆ. ಆ ಮೂಲಕ ಶಿಕ್ಷಕರ ನಂಬಿಕೆಗಳು, ಶಿಕ್ಷಕರ ಸ್ಥೈರ್ಯ, ಶಿಕ್ಷಕರ ಸ್ವಾಯತ್ತತೆ, ಶಿಕ್ಷಕರ ಜ್ಞಾನ ಹಾಗೂ ಕೌಶಲಗಳೆಡೆಗೆ ಬೆಳಕು ಚೆಲ್ಲಬೇಕಿದೆ. ರಾಷ್ಟ್ರೀಯ ಶಿಕ್ಷಣ ನೀತಿ 2019ರ ಕರಡು ಈ ಕಲಿಕಾ ಬಿಕ್ಕಟ್ಟನ್ನು ಗುರುತಿಸಿದ್ದರೂ ಈ ಬಿಕ್ಕಟ್ಟನ್ನು ಎದುರಿಸುವ ರೀತಿಗಳ ಬಗ್ಗೆ ಅದರಲ್ಲಿ ಹೆಚ್ಚೇನೂ ಇಲ್ಲ.

ಕಲಿಕೆಯ ವಿಷಯ ಹಾಗೂ ಶಿಕ್ಷಣದ ಗುಣಮಟ್ಟ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಯೊಂದಿಗೆ ಬಹಳ ನಿಕಟವಾಗಿ ಹೆಣೆದುಕೊಂಡಿದೆ. ಮಕ್ಕಳು ಶಾಲೆಗೆ ಹೊತ್ತುತರುವ ಸಾಮಾಜಿಕ ಬಂಡವಾಳ (Social capital) ಅವರ ಯಶಸ್ಸಿನ ಪ್ರಮುಖ ಸೂಚಕವಾಗಿದೆ ಎಂದು ಜಾಗತಿಕವಾಗಿ ಒಪ್ಪಿತವಾದ ವಿಷಯವಾಗಿದೆ. ಅಂದರೆ, ವಿದ್ಯಾವಂತ ಪೋಷಕರನ್ನು ಹೊಂದಿರುವ ಮಕ್ಕಳು, ಪುಸ್ತಕಗಳು ಹಾಗೂ ಇನ್ನಿತರ ಓದುವ ಸಾಮಗ್ರಿಗಳನ್ನು ಪಡೆಯಲು ಅವಕಾಶವಿರುವ, ಸೃಜನಶೀಲ ಕಲೆಗಳು, ಮಾಧ್ಯಮಗಳಿಗೆ ಹೆಚ್ಚು ತೆರೆದುಕೊಂಡಿರುವ ಮತ್ತುಸಂಪದ್ಭರಿತ ಸಂಪನ್ಮೂಲ ಹೊಂದಿರುವ ಪರಿಸರದಲ್ಲಿ ವಾಸಿಸುತ್ತಿರುವ ಮಕ್ಕಳು – ಕಡಿಮೆ ಸಂಪನ್ಮೂಲಗಳುಳ್ಳ ಪರಿಸರದಲ್ಲಿರುವ ಮಕ್ಕಳಿಗೆ ಹೋಲಿಸಿದಾಗ ಶೈಕ್ಷಣಿಕ ಪ್ರಕ್ರಿಯೆಗಳಿಂದ ಹೆಚ್ಚಿನದನ್ನು ಪಡೆಯುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ, ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದ ಸಮುದಾಯದ ಮಕ್ಕಳು ಶಾಲೆಗಳಲ್ಲಿ ತಮ್ಮ ಶಿಕ್ಷಕರಿಂದ ಹಾಗೂ ಸಹಪಾಠಿಗಳಿಂದ ವಿವಿಧ ರೀತಿಯ ತಾರತಮ್ಯಗಳನ್ನು ಎದುರಿಸುತ್ತಾರೆ ಹಾಗೂ ಇದರಿಂದಾಗಿ ಕಡಿಮೆ ಸ್ವಾಭಿಮಾನ ಮತ್ತು ಆತ್ಮವಿಶ್ವಾಸ ಹಾಗೂ ಅತೀ ಕಡಿಮೆ 'ಕಲಿಕೆಯೊಂದಿಗೆ' ಶಾಲೆಯಿಂದ ಹೊರಬರುತ್ತಾರೆ.

ಹೆಣ್ಣುಮಕ್ಕಳು ಶೈಕ್ಷಣಿಕ ವ್ಯವಸ್ಥೆಯಲ್ಲಿ ಮೇಲೇರುತ್ತಿದ್ದಂತೆ ಹೆಚ್ಚಿನ ಅನನುಕೂಲತೆಯನ್ನು ಹೊಂದುತ್ತಾರೆ – ಅವರಿಗೆ ತಮ್ಮ ಇಷ್ಟದ ವಿಷಯಗಳನ್ನು ಆಯ್ಕೆ ಮಾಡಲಾಗುವುದಿಲ್ಲ ಹಾಗೂ ಹೆಚ್ಚಿನ ರಾಜ್ಯಗಳಲ್ಲಿ (ವಿಶೇಷವಾಗಿ ಕೆಲವು ಉತ್ತರ ಹಾಗೂ ಪಶ್ಚಿಮದ ರಾಜ್ಯಗಳಲ್ಲಿ) ಬಾಲಕಿಯರ ಪ್ರೌಢ ಶಾಲೆಗಳು ವಿಜ್ಞಾನ, ಗಣಿತ ಅಥವಾ ವಾಣಿಜ್ಯದಂತಹ ಆಯ್ಕೆಗಳನ್ನು ನೀಡುವುದಿಲ್ಲ. ಹಾಗೆಯೇ, ಬುಡಕಟ್ಟು ಪ್ರದೇಶಗಳಲ್ಲಿ ಹಾಗೂ ಅತ್ಯಂತ ಹಿಂದುಳಿದ ಬುಡಕಟ್ಟು ಸಮುದಾಯಗಳಲ್ಲಿನ ಮಕ್ಕಳು ತಾರತಮ್ಯವನ್ನು ಎದುರಿಸುವುದಲ್ಲದೇ ಪ್ರಾಥಮಿಕ ಹಂತದ ನಂತರದ ಶಿಕ್ಷಣಕ್ಕೆ ಅವಕಾಶಗಳು ಸುಲಭವಾಗಿ ಸಿಗುವುದಿಲ್ಲ.

ಶಿಕ್ಷಕರ ನಂಬಿಕೆಗಳು ಎನ್ನುವ ವಿಷಯದ ಮೇಲೆ ಗಮನವನ್ನು ಕೇಂದ್ರೀಕರಿಸಿದಾಗ ಪ್ರತಿಯೊಂದು ಮಗುವಿಗೂ ಕಲಿಯುವ ಸಾಮರ್ಥ್ಯವಿದೆ ಎಂದು ಪ್ರತಿಯೊಬ್ಬ ಶಿಕ್ಷಕನೂ ಪ್ರಾಮಾಣಿಕವಾಗಿ ನಂಬುವುದು ಏಕೆ ಮುಖ್ಯವಾಗುತ್ತದೆ ಎಂಬ ಚರ್ಚೆಗೆ ನಾಂದಿ ಹಾಡಲು ಸಹಾಯವಾಗುತ್ತದೆ. ಸಾಮಾಜಿಕ ಧ್ರುವೀಕರಣ ಹೆಚ್ಚಾಗುತ್ತಿರುವ ಇಂತಹ ಸನ್ನಿವೇಶದಲ್ಲಿ ಇದನ್ನು ನಿರೀಕ್ಷಿಸುವುದೂ ಸ್ವಲ್ಪ ಹೆಚ್ಚೆನ್ನಿಸುತ್ತದೆ. ಶಿಕ್ಷಣವನ್ನು ಸಮಾನವಾಗಿ ನೀಡಿದಲ್ಲಿ ಎಲ್ಲಾ

ಮಕ್ಕಳಿಗೂ  ಕಲಿಯಲು ಅವಕಾಶ ಸಿಗುವಂತಹ ವಿಧಾನದಲ್ಲಿ ನೀಡಿದರಷ್ಟೇ ನಮ್ಮ ದೇಶ ಮುಂದುವರಿಯುತ್ತದೆ ಎಂದು ಜನರಿಗೆ ಮನವರಿಕೆ ಹಾಗೂ ಮಾಡಿಕೊಡುವುದನ್ನು ಬಿಟ್ಟು ಹೆಚ್ಚೆಚ್ಚು ಪೂರ್ವಾಗ್ರಹಗಳನ್ನು ಬಿತ್ತುವುದರಲ್ಲಿಯೇ ಕಾಲ ಕಳೆಯುತ್ತಿದ್ದಾರೆ. ಬಹುಶಃ ಶಿಕ್ಷಕರು, ನಮ್ಮ ರಾಜಕೀಯ ಮತ್ತು ಸಾಮಾಜಿಕ ನಾಯಕರು ಅವರ ವರ್ತನೆಗಳು, ನಂಬಿಕೆಗಳು ಹಾಗೂ ಅವರ ಜ್ಞಾನ ಇವುಗಳೆಡೆಗೆ ಕಾರ್ಯಪ್ರವೃತ್ತರಾಗುವುದಕ್ಕೆ ಇದು ಸೂಕ್ತ ಸಮಯ ಎನ್ನಬಹುದೇನೋ?

**ಆಕರಗಳು**


Giridhar, S. 2019. Ordinary People, Extraordinary Teachers: The Heroes of Real India. Westland Publications. Chennai.

Ramachandran, Vimala and Nagendra Nagpal. 2019. Status of Secondary Education in Rajasthan – insights from a qualitative study in Chittorgarh District, Draft Report, ERU Consultants Private Ltd. New Delhi.

Ramachandran, Vimala and Taramani Naorem. 2012. Inclusion and exclusion of students in the school and in classrooms in primary and upper primary schools: A qualitative study commissioned by SSA, MHRD, GOI. Technical Support Group, EdCIL, New Delhi.

Turner, Julianne C, Andrea Christensen and Debra K Meyer. 2014. Teacher's Beliefs about Student Learning and Motivation, in L J Saha and A G Dworkin (eds.), International Handbook on Research on Teachers and Teaching (pp361-371). Springer. UK.





**ವಿಮಲಾ ರಾಮಚಂದ್ರನ್** ಅವರು, ಪ್ರಾಥಮಿಕ ಶಿಕ್ಷಣ, ಹೆಣ್ಣುಮಕ್ಕಳ ಶಿಕ್ಷಣ, ಮಹಿಳೆಯರ ಸಬಲೀಕರಣ ಹಾಗೂ ಮಕ್ಕಳ ಆರೋಗ್ಯ, ಪೌಷ್ಟಿಕಾಂಶ ಹಾಗೂ ಶಿಕ್ಷಣದ ನಡುವಿನ ಅಂತರ್‌ಸಂಬಂಧ ಮತ್ತು ಶಿಶುಪಾಲನಾ ಕ್ರಮಗಳ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರು ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವ ಸಂಶೋಧಕರು ಮತ್ತು ವೃತ್ತಿಪರರ ಜಾಲವನ್ನು ರಚಿಸುವ ಸಲುವಾಗಿ 1998ರಲ್ಲಿ ಶೈಕ್ಷಣಿಕ ಸಂಪನ್ಮೂಲ ಘಟಕವನ್ನು ಸ್ಥಾಪಿಸಿದರು. 2011ರಿಂದ 2015ರ ಮಧ್ಯದವರೆಗೂ ಅವರು ರಾಷ್ಟ್ರೀಯ ಶೈಕ್ಷಣಿಕ ಯೋಜನೆ ಮತ್ತು ಆಡಳಿತ ಸಂಸ್ಥೆ (National Institute of Educational Planning and Administration -NUEPA) ಯಲ್ಲಿ  ರಾಷ್ಟ್ರೀಯ ಫೆಲೋ ಮತ್ತು ಶಿಕ್ಷಕರ ನಿರ್ವಹಣೆ ಮತ್ತು ಅಭಿವೃದ್ಧಿ ವಿಭಾಗದ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿದ್ದರು. ಪ್ರಸ್ತುತ ಇವರು ಇಆರ್‌ಯು ಕನ್ಸಲ್ಟಂಟ್ಸ್ ಪ್ರೈವೇಟ್ ಲಿಮಿಟೆಡ್‌ನ ನಿರ್ದೇಶಕರಾಗಿದ್ದಾರೆ. (www.eruindia.org). ಇವರನ್ನು vimalar.ramachandran@gmail.com ಇಲ್ಲಿ ಸಂಪರ್ಕಿಸಬಹುದು.


ಅನುವಾದ: **ವಿನಯ ವಿಠ್ಠಲ್** । ಪರಿಶೀಲನೆ: **ಲತಾ ಕೆ ಸಿ**

# ಕಥೆ ಹೇಳುವುದರ ಮೂಲಕ ಮಕ್ಕಳನ್ನು ತೊಡಗಿಸಿಕೊಳ್ಳುವುದು

ಅಮೃತಾ ಮಾಸಿ

ಸಾಂಪ್ರದಾಯಿಕ ಬೋಧನಾ ವಿಧಾನಗಳಿಗಿಂತ, ಮಕ್ಕಳಿಗೆ ಕಥೆಗಳ ಮೂಲಕ ಪಾಠಗಳನ್ನು ಹೇಳುವುದರಿಂದ ಮಕ್ಕಳು ಆ ವಿಷಯಗಳನ್ನು ಬಹಳ ಕಾಲದವರೆಗೂ ನೆನಪಿಟ್ಟುಕೊಳ್ಳುತ್ತಾರೆ ಎಂಬುದು ಒಬ್ಬ ಶಿಕ್ಷಕಿಯಾಗಿ ನನ್ನ ನಂಬಿಕೆ. ವಿಶೇಷವಾಗಿ ಭಾಷಾ ವಿಷಯಗಳಲ್ಲಿ ಕಥೆ ಹೇಳುವಿಕೆಯು ಮಕ್ಕಳನ್ನು ಹೆಚ್ಚು ಪರಿಣಾಮಕಾರಿಯಾಗಿ ತೊಡಗಿಸಿಕೊಳ್ಳುವಂತೆ ಮಾಡುತ್ತದೆಯಲ್ಲದೆ, ಇದರಿಂದ ಮಕ್ಕಳು ದೀರ್ಘ ಕಾಲದವರೆಗೆ ಪರಿಕಲ್ಪನೆ ಮತ್ತು ಪಾತ್ರಗಳನ್ನು ನೆನಪಿಟ್ಟುಕೊಳ್ಳಲು ಸಾಧ್ಯವಾಗುತ್ತದೆ.

ಇದನ್ನು ಗಮನದಲ್ಲಿಟ್ಟುಕೊಂಡು ನನ್ನದೇ ಆದ ಪಾಠ ಯೋಜನೆಯನ್ನು ರೂಪಿಸುವ ಮುನ್ನ, ಕಥೆ ಹೇಳುವುದರ ಬಗ್ಗೆ ಮಕ್ಕಳ ಅಭಿಪ್ರಾಯಗಳನ್ನು ಯಾಕೆ ಪಡೆಯಬಾರದು ಎಂದು ನಾನು ಯೋಚಿಸಿದೆ. ತರಗತಿ ಚಟುವಟಿಕೆಗಳನ್ನು ರೂಪಿಸುವ ಬಗ್ಗೆ ಶಿಕ್ಷಕರು ಮಕ್ಕಳೊಡನೆ ಚರ್ಚಿಸಿದರೆ, ಮಕ್ಕಳ ಅಗತ್ಯತೆಗಳು ಹಾಗೂ ಆಸಕ್ತಿಗಳಿಗೆ ಅನುಗುಣವಾಗಿ ಯೋಜನೆ ರೂಪಿಸಲು ಮತ್ತು ತರಗತಿಯ ಪ್ರಕ್ರಿಯೆಗಳಲ್ಲಿ ಮಕ್ಕಳ ತೊಡಗಿಸುವಿಕೆಯನ್ನು ಇನ್ನಷ್ಟು ಹೆಚ್ಚಿಸಲು ಶಿಕ್ಷಕರಿಗೆ ಸಹಾಯ ಮಾಡುತ್ತದೆ.

ಹಾಗಾಗಿ, ಕಥೆ ಹೇಳುವುದರ ಕುರಿತು ಮಕ್ಕಳೊಡನೆ ಅವರ ಅಭಿಪ್ರಾಯವೇನೆಂದು ಕೇಳಿದೆ. ಅವರು ನನ್ನೊಡನೆ ಹಂಚಿಕೊಂಡದ್ದು ಇಷ್ಟು: 'ಕಥೆ ಹೇಳುವುದರ ಮೂಲಕ ನಾವು ಹೊಸ ಪದಗಳನ್ನು ಹಾಗೂ ವಾಕ್ಯ ರಚನೆಗಳನ್ನು ತಿಳಿದುಕೊಂಡೆವು. ಪ್ರಶ್ನೆಗಳನ್ನು ರೂಪಿಸುವುದನ್ನು ಕಲಿತೆವು. ಕಥೆಯು ಬಹಳ ಮೋಜಿನಿಂದ ಕೂಡಿರುತ್ತದೆಯಾದ್ದರಿಂದ ಓದುವುದು, ಬರೆಯುವುದು ಹಾಗೂ ಕಾಗುಣಿತ ಸುಲಭವಾಗುತ್ತದೆ. ಹೊಸ ಪದಗಳ ಸರಿಯಾದ ಉಚ್ಚಾರಣೆಯನ್ನು ಕಲಿಯುತ್ತೇವೆ'. ಮಕ್ಕಳ ಅಭಿಪ್ರಾಯಗಳನ್ನು ತಿಳಿದು ನನಗೆ ಬಹಳ ಸಂತಸವಾಯಿತು. ಮಕ್ಕಳು ನಮ್ಮಂತೆಯೇ ಯೋಚಿಸುತ್ತಾರೆ, ಆದರೆ ಕೆಲವೊಮ್ಮೆ ತರಗತಿಯ ಪ್ರಕ್ರಿಯೆಗಳಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಹಿರಿಯರಾದ ನಾವು ಅವರಿಗೆ ಅವಕಾಶ ಕೊಡುವುದಿಲ್ಲ.

ಶಿಕ್ಷಕರು ಮಕ್ಕಳೊಡನೆ ಚರ್ಚಿಸಿ, ಅವರ ಜತೆ ಸೇರಿ ಯೋಜನೆಗಳನ್ನು ರೂಪಿಸಿದಾಗ, ತಮ್ಮ ವಿಚಾರಗಳನ್ನೂ ಅಳವಡಿಸಿಕೊಂಡಿರುವುದರಿಂದ ಚಟುವಟಿಕೆಗಳಲ್ಲಿ ಮಕ್ಕಳ ಆಸಕ್ತಿ ಹಾಗೂ ತೊಡಗಿಸಿಕೊಳ್ಳುವಿಕೆಯನ್ನು ನಾವು ನೋಡಬಹುದು. ಇಲ್ಲೊಂದು ಉದಾಹರಣೆ:

ಶಿಕ್ಷಕ: ನಾವು ಇಂದು ಅಥವಾ ನಾಳೆ ಓದುವ ಕಥೆಯಲ್ಲಿ ನೀವು ಹೇಳಿರುವಂತಹ ಎಲ್ಲಾ ವಿಚಾರಗಳ ಮೇಲೂ ಗಮನಹರಿಸಬೇಕೇ?

ಮಕ್ಕಳು: ಇಲ್ಲ, ನಾವು ಮೂರು ವಿಚಾರಗಳ ಮೇಲೆ ಗಮನಹರಿಸೋಣ.

ಶಿಕ್ಷಕ: ಹಾಗಾದರೆ ಯಾವುದರ ಮೇಲೆ ಗಮನಹರಿಸೋಣ?

ಮಕ್ಕಳು: ಕಥೆಯಲ್ಲಿ ಬರುವ ಹೊಸ ಪದಗಳನ್ನು ಬರೆಯುತ್ತೇವೆ, ಶಬ್ದಕೋಶದಲ್ಲಿ ಅವುಗಳ ಅರ್ಥಗಳನ್ನು ಹುಡುಕುತ್ತೇವೆ ಹಾಗೂ ಆ ಹೊಸ ಪದಗಳಿಂದ ಕೆಲವು ವಾಕ್ಯಗಳನ್ನು ರಚಿಸುತ್ತೇವೆ.

ಶಿಕ್ಷಕ: ಸರಿ. ನಾವು ಮತ್ತಿನ್ನೇನು ಮಾಡೋಣ?

ಮಕ್ಕಳು: ನಾವು ಓದುವ ಹಾಗೂ ಬರೆಯುವ ಅಭ್ಯಾಸ ಮಾಡುತ್ತೇವೆ.

ಶಿಕ್ಷಕ: ಯಾವ ಕಥೆಯೆಂದು ನಿರ್ಧರಿಸೋಣ. ಕಥೆ ಹೇಳುವ ಚಟುವಟಿಕೆಗಾಗಿ ಕಥೆಯನ್ನು ಆಯ್ಕೆ ಮಾಡಲು ನಾನು ಮಕ್ಕಳಿಗೆ ಕೆಲವೊಂದು ಪುಸ್ತಕಗಳನ್ನು ನೀಡಿದೆನು. ಅವರು ಅನ್ಯಾಲಿಸ್ ಇನ್ ವಂಡರ್‌ಲ್ಯಾಂಡ್ (Alice in Wonderland) ಎಂಬ ಕಥೆಯನ್ನು ಆರಿಸಿಕೊಂಡರು. ನಾನು ಕಥೆ ಹೇಳಲು ಆರಂಭಿಸಿದೆನು. ಎಲ್ಲಾ ಮಕ್ಕಳು ಬಹಳ ಲಕ್ಷ್ಯವಿಟ್ಟು ಕೇಳುತ್ತಿದ್ದರು. ನಾನು ಕಥೆ ಪುಸ್ತಕದಿಂದ ತೋರಿಸುತ್ತಿದ್ದ ಚಿತ್ರಗಳನ್ನು ಬಹಳ ಮೆಚ್ಚುತ್ತಿದ್ದರು. ಕಥೆ ಓದುವ ಸಮಯದಲ್ಲಿ ನನ್ನ ಧ್ವನಿಯ ಏರಿಳಿತಗಳನ್ನು ಕೆಲವು ಮಕ್ಕಳು ಗಮನವಿಟ್ಟು ಕೇಳುತ್ತಿದ್ದರು. ಕಥೆಯ ಎರಡು ಪ್ಯಾರಾಗ್ರಾಫ್‌ಗಳನ್ನು ಓದಿದ ನಂತರ ನಾನು ಕೆಲವು ಪ್ರಶ್ನೆಗಳನ್ನು ಕೇಳಿದೆನು: ಕಥೆಯಲ್ಲಿ ಬರುವ ಕೆಲವು ಪದಗಳನ್ನು ಹೇಳಿರಿ. ಇಲ್ಲಿಯವರೆಗೆ ಕಂಡುಬಂದ ಮುಖ್ಯ ಪಾತ್ರಗಳು ಯಾವುವು? ಕಥೆ ಯಾವುದರ ಕುರಿತು ಹೇಳುತ್ತಿದೆ?ತಾವು ಕೇಳಿದ ಕೆಲವು ಪದಗಳನ್ನು ಪಟ್ಟಿಮಾಡಿದ ನಂತರ, ಮಕ್ಕಳು ಎರಡು ಪ್ಯಾರಾಗ್ರಾಫ್‌ಗಳಲ್ಲಿ ಬರುವ ಮುಖ್ಯ ಪಾತ್ರಗಳು ಒಂದು ಚಿಕ್ಕ ಹುಡುಗಿ ಮತ್ತೊಂದು ಬಿಳಿ ಮೊಲ ಎಂದು ಹೇಳಿದರು. ಒಂದು ಮೊಲದ ಹಿಂದೆ ಓಡುತ್ತಿರುವ ಚಿಕ್ಕ ಹುಡುಗಿಯೊಬ್ಬಳ ಕಥೆಯಿದು. ಈ ಮಧ್ಯದಲ್ಲಿ ಕಥೆಯ ಕಾಲ್ಪನಿಕ ಜಗತ್ತಿನಲ್ಲಿ ಬರುವ ವಿವಿಧ ವಸ್ತುಗಳು ಹಾಗೂ ಪಾತ್ರಗಳ ಕುರಿತು ನಾವು ಮಾತನಾಡುತ್ತಿದ್ದೆವು. ಕಥೆಯ ಮುಕ್ತಾಯದ ನಂತರ ಅವರು ಮೊದಲ ಸಲ ಕೇಳಿದ ವಿಭಿನ್ನ ಪದಗಳ ಬಗ್ಗೆ ಮಾತನಾಡಿದೆವು, ನಿಘಂಟಿನಲ್ಲಿ ಅವುಗಳನ್ನು ಹುಡುಕಿ, ಆ ಪದಗಳನ್ನು ಬಳಸಿ ವಾಕ್ಯಗಳನ್ನು ರಚಿಸಿದೆವು. ವಿದ್ಯಾರ್ಥಿಗಳೊಡನೆ ಅದ್ಭುತ ಅನುಭವದೊಂದಿಗೆ ಆ ದಿನದ ತರಗತಿಯು ಮುಕ್ತಾಯವಾಯಿತು.

ಮರುದಿನ, ಒಂದು ಮಗು ಇನ್ನೊಂದು ಮಗುವಿನ ಜೊತೆ ಬೆರೆತು ಕಲಿಯಲು ಸಹಾಯಕವಾಗುವಂತೆ (ಸಹವರ್ತಿಗಳೊಂದಿಗೆ ಕಲಿಯುವುದು) ಇಬ್ಬರು ವಿದ್ಯಾರ್ಥಿಗಳನ್ನು ಒಳಗೊಂಡ ತಂಡಗಳಾಗಿ ವಿಂಗಡಿಸಿದೆವು ಮಕ್ಕಳಿಗೆ ಇದು ಓದುವ ದಿನವಾಗಿದ್ದು, ಕೆಲವು ಮಕ್ಕಳು ಪದಗಳ ಉಚ್ಚಾರಣೆಯ ಬಗ್ಗೆ ಕೇಳಿ ತಿಳಿದುಕೊಂಡರು. ಬಳಿಕ ನಾವು ಅನ್ಯಾಲಿಸ್ ಇನ್ ವಂಡರ್‌ಲ್ಯಾಂಡ್ ಚಲನಚಿತ್ರವನ್ನು ನೋಡುವುದೆಂದು ತೀರ್ಮಾನಿಸಿದೆವು.

ಮರುದಿನ ನಾವು ಅನ್ಯಾಲಿಸ್ ಇನ್ ವಂಡರ್‌ಲ್ಯಾಂಡ್ ಚಲನಚಿತ್ರವನ್ನು ನೋಡುವುದರೊಂದಿಗೆ ತರಗತಿ ಆರಂಭಿಸಿದೆವು. ಗ್ರಂಥಾಲಯದಲ್ಲಿ ಚಲನಚಿತ್ರವನ್ನು ನೋಡಲು ಏರ್ಪಡಿಸಿದ್ದರಿಂದ ಮಕ್ಕಳು ನಿಶ್ಶಬ್ದವಾಗಿ ಕುಳಿತಿದ್ದರು. ಚಲನಚಿತ್ರವನ್ನು ನೋಡಿದ ನಂತರ ಅದರ ಬಗ್ಗೆ ಚರ್ಚಿಸಲು ತೀರ್ಮಾನಿಸಿದೆವು. ಚಲನಚಿತ್ರವನ್ನು ನೋಡಿದ ನಂತರ ಕೆಲವು ಮಕ್ಕಳು ಇಂತಹ ಅದ್ಭುತವಾದ ಹಾಗೂ ಕಾಲ್ಪನಿಕವಾದ ಚಲನಚಿತ್ರವನ್ನು ಮೊದಲೆಂದೂ ನೋಡಿರಲಿಲ್ಲ ಎಂದು ಹೇಳಿದರು. ಅವರೆಲ್ಲರೂ ಚಲನಚಿತ್ರದ ಕುರಿತು ಚರ್ಚಿಸಲು ಬಹಳ ಖುಷಿಯಲ್ಲಿದ್ದರು. ಅವರು ಚಲನಚಿತ್ರವನ್ನು ನೋಡಿ ಆನಂದಿಸಿದರು, ನಂತರ ಚಲನಚಿತ್ರ ಮತ್ತು ಪುಸ್ತಕದ ನಡುವಿನ ವ್ಯತ್ಯಾಸಗಳ ಬಗ್ಗೆ ಚರ್ಚಿಸಿದೆವು. ಮಾರನೆಯ ದಿನ, ಮಕ್ಕಳಿಗೆ ಅನ್ಯಾಲಿಸ್ ಹಾಗೂ ಬಿಳಿ ಮೊಲದ ಬಗ್ಗೆ ಸ್ವಂತ ಕಥೆಯನ್ನು ಬರೆಯಲು ಹೇಳಿದೆನು. ಮಕ್ಕಳು ಬರೆದ ಕೆಲವು ಕಥೆಗಳು ಹಾಗೂ ವಿವಿಧ ಪ್ರಶ್ನೆಗಳನ್ನು ಹಂಚಿಕೊಳ್ಳುತ್ತೇನೆ.

ಕೊನೆಯದಾಗಿ, ಕಥೆಯನ್ನು ಆಧರಿಸಿದ ಆರು ವಾಕ್ಯಗಳನ್ನು ಅದಲುಬದಲಾಗಿಸಿ, ಅವುಗಳನ್ನು ಸರಿಯಾದ ಕ್ರಮದಲ್ಲಿ ಜೋಡಿಸುವಂತೆ ಹೇಳಿದೆ. ಬಹುತೇಕ ಮಕ್ಕಳಿಗೆ ಈ ಚಟುವಟಿಕೆಗಳನ್ನು ಮಾಡಲು ಸಾಧ್ಯವಾಯಿತು. ಅದಲುಬದಲು ಪದಗಳು, ಖಾಲಿ ಬಿಟ್ಟ ಸ್ಥಳ ತುಂಬುವುದು, ಪ್ರಾಸಬದ್ಧ ಪದಗಳು – ಎಲ್ಲವನ್ನೂ ಮಕ್ಕಳೇ ತಯಾರಿಸಿದರು.

ವಿವಿಧ ಚಟುವಟಿಕೆಗಳ ಮೂಲಕ ಒಂದು ಭಾಷೆಯನ್ನು ಕಲಿಯಲು, ಮಕ್ಕಳು ಯೋಜನಾ ಹಂತದಿಂದಲೇ ಸಕ್ರಿಯವಾಗಿ ಭಾಗವಹಿಸಿ ಆಸಕ್ತಿ ಹೊಂದಿದ್ದ ಕಾರಣ ಕಥೆ ಹೇಳುವ ಚಟುವಟಿಕೆಯು ಬಹಳ ಉಪಯುಕ್ತವಾಯಿತು. ಕೆಲವು ಕಾರ್ಯವಿಧಾನಗಳ ಬದಲಾವಣೆಯಿಂದ ಶಿಕ್ಷಕರು ಹಾಗೂ ವಿದ್ಯಾರ್ಥಿಗಳಿಬ್ಬರ ಕಲಿಕೆಗೂ ಸಹಾಯವಾಗುತ್ತದೆ ಎಂದು ಇದರಿಂದ ತಿಳಿಯುವಂತಾಯಿತು.

**ಭಾಷಾ ತರಗತಿಗೆ ಕೆಲವು ಯೋಜನೆಗಳು**

1. ಯೋಜನಾ ಹಂತದಿಂದಲೇ ತರಗತಿಯ ಮಕ್ಕಳನ್ನು ತೊಡಗಿಸಿಕೊಳ್ಳಬೇಕು, ಆದರೆ ಏನನ್ನು ಕಲಿಸಬೇಕು ಎಂಬುದರ ಬಗ್ಗೆ ಸ್ಪಷ್ಟತೆಯಿರಬೇಕು.
2. ಯೋಜನೆಯನ್ನು ಅತೀ ಸಣ್ಣ ಭಾಗಗಳಾಗಿ ವಿಂಗಡಿಸಬೇಕು: ಕಥೆಯನ್ನು ಅರ್ಥ ಮಾಡಿ–ಕೊಳ್ಳುವುದು, ಓದುವುದು, ಅದರ ಬಗ್ಗೆ ಬರೆಯುವುದು, ಉಚ್ಚಾರಣೆ, ಅನುಕ್ರಮ ಇತ್ಯಾದಿ.
3. ಹೆಚ್ಚು ಪಾತ್ರಗಳಿಲ್ಲದ ಸರಳ ಕಥೆ ಪುಸ್ತಕಗಳನ್ನು ಆರಿಸಿಕೊಳ್ಳಬೇಕು.
4. ಸಾಧ್ಯವಾದರೆ ಕಥೆಯನ್ನು ಆಧರಿಸಿದ ಚಲನಚಿತ್ರವನ್ನು ತೋರಿಸುವುದು. ಇದರಿಂದ ಮಕ್ಕಳು ಇನ್ನೂ ಹೆಚ್ಚು ತೊಡಗಿಸಿಕೊಳ್ಳುತ್ತಾರೆ.
5. ಮೌಖಿಕ ಹಾಗೂ ಬರವಣಿಗೆಯ ಕೆಲಸವೂ ಇರಲಿ.



**ಅಮೃತಾ** ಅವರು 2012ರಿಂದ ಛತ್ತೀಸ್‌ಗಢದ ಧಮ್ ತರಿಯಲ್ಲಿರುವ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು 2000ದಲ್ಲಿ ಒಂದು ಖಾಸಗಿ ಶಾಲೆಯಲ್ಲಿ ಶಿಕ್ಷಕ ವೃತ್ತಿಯನ್ನು ಆರಂಭಿಸಿದ್ದು, ಅಲ್ಲಿ ಆಂಗ್ಲಭಾಷೆ ಹಾಗೂ ವಿಜ್ಞಾನವನ್ನು ಬೋಧಿಸುತ್ತಿದ್ದರು. ಆನಂತರ ಅವರು ವಿಜ್ಞಾನ ಶಿಕ್ಷಕಿಯಾಗಿ ಕಾರ್ಯನಿರ್ವಹಿಸಿದರು. ಜೀವಶಾಸ್ತ್ರ ಮತ್ತು ಶಿಕ್ಷಣ ವಿಷಯಗಳಲ್ಲಿ ಪದವಿ, ರಸಾಯನಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಅವರು ಇತ್ತೀಚೆಗಷ್ಟೇ ಡಿಎಲ್‌ಎಡ್ ಮುಗಿಸಿದ್ದಾರೆ ಹಾಗೂ ಮಕ್ಕಳೊಂದಿಗೆ ಕೆಲಸ ಮಾಡುವುದೆಂದರೆ ಅವರಿಗೆ ತುಂಬಾ ಪ್ರೀತಿ. ಅಮೃತಾ ಅವರನ್ನು
amrita.masih@azimpremjifoundation.org ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ವಿನಯ ವಿಠ್ಠಲ್** । ಪರಿಶೀಲನೆ: **ಲತಾ ಕೆ ಸಿ**

# ಪೂರಕ ಕಲಿಕಾ ವಾತಾವರಣ ರೂಪಿಸುವುದು

ಅರುಣಾ ಜ್ಯೋತಿ

‘ಪ್ರತಿಯೊಂದು ಮಗುವೂ ಕಲಿಯಬಲ್ಲದು’ (Every Child Can Learn) ಎಂಬ ಹೇಳಿಕೆಯು, ‘ಕಲಿಕೆ ಎಂದರೆ ಏನು?’ (Learn what?) ಎಚಿದು ನನ್ನನ್ನು ಯೋಚಿಸುವಂತೆ ಮಾಡುತ್ತದೆ. ಯಾಕೆಂದರೆ, ಒಂದು ಹಂತದಲ್ಲಿ ನನಗೂ ಕೂಡ, ಪ್ರತಿಯೊಬ್ಬ ಮಗುವೂ ಕಲಿಯಬಹುದು ಎಂಬುದು ಸ್ಪಷ್ಟವಾಗಿದೆ.

ಶಾಲೆಗಳಲ್ಲಿ ಏನು ನಡೆಯುತ್ತದೆಯೋ ಅದು ಮಾತ್ರ ಕಲಿಕೆ ಎಂಬುದು ಚರ್ಚಾಸ್ಪದ ಪ್ರಶ್ನೆಯಾಗಿದೆ. ಶಾಲೆಯೆಂದರೆ ಸಾಧನೆ ಮಾಡಲು, ಸ್ಪರ್ಧಿಸಲು, ಕಾರ್ಯಕ್ಷಮತೆ ತೋರಲು, ಯಶಸ್ವಿಯಾಗುವುದನ್ನು ಕಲಿಯುವ ತಾಣ. ಮಕ್ಕಳು ಜೀವನದಲ್ಲಿ ಯಶಸ್ವಿಯಾಗಬೇಕು ಎಂಬುದೇ ಪಾಲಕರಾಗಿ ಅಥವಾ ಶಿಕ್ಷಕರಾಗಿ ನಮ್ಮ ಅಪೇಕ್ಷೆಯಾಗಿರುತ್ತದೆ. ಇಲ್ಲಿ ಆ ಮಗುವಿನ ಸಾಮರ್ಥ್ಯ, ಆಸಕ್ತಿ, ಸವಾಲುಗಳು, ಶಕ್ತಿಗಳೆಲ್ಲ ಮುಖ್ಯವಾಗುವುದೇ ಇಲ್ಲ. ಹಾಗಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುವುದು, ಅದರಲ್ಲೂ ಮುಖ್ಯವಾಗಿ ‘ಒಳ್ಳೆಯ ಶಾಲೆ’ಗೆ ಕಳುಹಿಸುವುದು – ಇದರ ವ್ಯಾಖ್ಯಾನ ಪ್ರತಿಯೊಬ್ಬರ ವಿಚಾರದಲ್ಲೂ ಭಿನ್ನವಾಗಿದ್ದು, ಪಾಲನೆಯ ಅತಿಮುಖ್ಯ ಭಾಗವಾಗಿದೆ.

> ‘ಮಕ್ಕಳು ತಮ್ಮ ಸಾಮರ್ಥ್ಯಗಳನ್ನು ಬೆಳೆಸಿಕೊಳ್ಳುವುದು, ಜೀವನದಲ್ಲಿ ಅರ್ಥಪೂರ್ಣವಾದ ದಾರಿಯನ್ನು ವ್ಯಾಖ್ಯಾನಿಸುವುದು ಹಾಗೂ ಆ ದಾರಿಯಲ್ಲಿ ಸಾಗುವಂತೆ ಮಾಡುವುದು ಶಿಕ್ಷಣದ ಮೂಲ ಗುರಿಯಾಗಿದ್ದರೆ; ಬದುಕಿನ ಅಸ್ತಿತ್ವಕ್ಕಾಗಿ ಹೋರಾಟದ ನಾಗಾಲೋಟಕ್ಕೆ ಸಿದ್ಧರಾಗಿರುವ ‘ವಿಜಯಿಗಳ’ನ್ನು ಸೃಷ್ಟಿಸಲು ಶಿಕ್ಷಣ ವ್ಯವಸ್ಥೆಯ ಮೇಲೆ ಜಾಗತೀಕರಣ ಹೆಚ್ಚುವರಿ ಒತ್ತಡವನ್ನು ಹೇರಿದೆ’.

ಮೀನು ಆನಂದ್ ಅವರ ಈ ಹೇಳಿಕೆಯು ನನಗೆ ‘ತಾರೆ ಜಮೀನ್ ಪರ್’ ಚಲನಚಿತ್ರವನ್ನು ನೆನಪಿಸುತ್ತದೆ. ಮಗುವಿನ ಸಮಸ್ಯೆಯನ್ನು ಗುರುತಿಸುವ ಶಿಕ್ಷಕನ ಕಾಳಜಿ ಮತ್ತು ಆತನನ್ನು ಪ್ರೇರೇಪಿಸುವ ದಾರಿಯನ್ನು ಕಂಡುಕೊಳ್ಳುವ ಪರಿಯ ದೃಷ್ಟಿಯಿಂದ ಈ ಚಿತ್ರ ನನಗೆ ಇಷ್ಟವಾಗಿದೆ. ಮಕ್ಕಳಲ್ಲಿರುವ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುವುದು ಅತ್ಯಂತ ಮುಖ್ಯವಾದದ್ದು. ಯಾಕೆಂದರೆ, ಇದು ಅವರ ಆತ್ಮವಿಶ್ವಾಸವನ್ನು ಹೆಚ್ಚಿಸುವುದು ಮಾತ್ರವಲ್ಲದೆ ಅವರಿಗೆ ಹೊಸ ಭರವಸೆಯನ್ನು ತುಂಬುತ್ತದೆ. ಇದರಿಂದ ಅವರು ನಿರಂತರವಾಗಿ ಶಾಲೆಗೆ ಬರಲು ಆಸಕ್ತಿ ತಳೆಯುತ್ತಾರೆ; ಮಕ್ಕಳು ಸದಾ ಕ್ರಿಯಾಶೀಲವಾಗಿರುವಂತೆ ಮಾಡಲು ಇದು ಉತ್ತಮ ವಿಧಾನವಾಗಿದೆ. ಜೊತೆಗೆ, ಜನರು ಒಂದಲ್ಲ ಅನೇಕ ಕ್ಷೇತ್ರಗಳಲ್ಲಿ ಪ್ರತಿಭಾವಂತರಾಗಿರುತ್ತಾರೆ ಎಂಬುದನ್ನು ಇದು ನಮಗೆ ನೆನಪಿಸುತ್ತದೆ. ಆದರೆ ಮಗು ವಿಜಯಿಯಾಗಲೇಬೇಕು ಎಂಬುದನ್ನು ಚಲನಚಿತ್ರದಲ್ಲಿ ಪ್ರತಿಪಾದಿಸಿರುವುದು ವೈಯಕ್ತಿಕವಾಗಿ ನನಗೆ ಕಂಡ ಸಮಸ್ಯೆಯಾಗಿದೆ!

ಮಕ್ಕಳ ಕಲಿಕೆಗೆ ನೆರವಾಗುವಂತಹ ಅನೇಕ ಕಾರ್ಯತಂತ್ರಗಳನ್ನು ಬಳಸುವಲ್ಲಿ ಶಿಕ್ಷಕರಿಗೆ ಅನುಮಾನಗಳಿರಬಾರದು. ಮಕ್ಕಳನ್ನು ಒಳಗೊಳ್ಳುವಂತೆ ಮಾಡುವ ಚಟುವಟಿಕೆ ಆಧಾರಿತ ಕಲಿಕೆಯನ್ನು ಬಳಸುವುದು, ಪ್ರಶ್ನೆಗಳನ್ನು ಕೇಳಲು ಉತ್ತೇಜಿಸುವಂತಹ ಚರ್ಚೆಗೆ ಅವಕಾಶ ನೀಡುವುದು, ಕಲಿಕೆಯು ಆಸಕ್ತಿದಾಯಕವಾಗಿರಲು ಕಲಿಕಾ ಬೋಧನಾ ಸಾಮಗ್ರಿಗಳು (ಟಿಎಲ್‌ಮ್) ಮತ್ತು ವರ್ಕ್‌ಶೀಟ್‌ಗಳನ್ನು ಒದಗಿಸಬೇಕು. ಈ ನಿಟ್ಟಿನಲ್ಲಿ ಮಕ್ಕಳು ಕಲಿಕೆಯಲ್ಲಿ ತೊಡಗಿಕೊಳ್ಳಲು ನೆರವಾಗುವಂಥ, ಶಿಕ್ಷಕರು ಮಾಡಬಹುದಾದ ಕೆಲಸಗಳ ಪಟ್ಟಿಯನ್ನೇ ನಾನು ಹೇಳುತ್ತಾ ಹೋಗಬಹುದು.

ಇವೆಲ್ಲದರ ಜೊತೆಗೆ, ಕಲಿಕೆಯಲ್ಲಿ ಇನ್ನಿಲ್ಲದ ಕಷ್ಟ ಅನುಭವಿಸುವ, ವಿಷಯದ ಮೇಲೆ ಗಮನ ಕೇಂದ್ರೀಕರಿಸಲಾಗದ, ಚಡಪಡಿಸುವ, ನಡವಳಿಕೆಯಲ್ಲಿ ತೊಂದರೆಯನ್ನು ಅನುಭವಿಸುತ್ತಿರುವ, ಹೋಮ್‌ವರ್ಕ್ ಅಥವಾ ಹೇಳಿದ ಮನೆಗೆಲಸವನ್ನು ಅಥವಾ ಕೊಟ್ಟಿರುವ ಕೆಲಸವನ್ನು ಸಕಾಲಕ್ಕೆ ಸರಿಯಾಗಿ ಪೂರ್ಣಗೊಳಿಸದೇ ಇರುವ ಮಕ್ಕಳು ಪ್ರತಿ ತರಗತಿಯಲ್ಲಿಯೂ ಇದ್ದಾರೆ ಎಂಬ ಸತ್ಯವನ್ನು ನಾವು ನಿರಾಕರಿಸಲು ಸಾಧ್ಯವಿಲ್ಲ. ತರಗತಿಯಲ್ಲಿ ಇಂತಹ ಸಮಸ್ಯೆಗಳಿಗೆ ಕಲಿಕಾ ಸಮಸ್ಯೆಗಳು (ಡಿಸ್ಲೆಕ್ಸಿಯಾದಂತಹ ಇತರೆ ಸಮಸ್ಯೆಗಳು), ವಿಶೇಷ ಅಗತ್ಯಗಳು, ಮೊದಲ ತಲೆಮಾರಿನ ಕಲಿಕಾರ್ಥಿಗಳು ಅಥವಾ ಭಾವನಾತ್ಮಕ ಸಮಸ್ಯೆಗಳು ಇತ್ಯಾದಿ ಹಲವು ಕಾರಣಗಳಿರಬಹುದು. ನಾನಿಲ್ಲಿ ವಿಶೇಷ ಅಗತ್ಯಗಳ ವಿಭಾಗವನ್ನು ಕೈಬಿಟ್ಟು ನಡವಳಿಕೆಯ ಸಮಸ್ಯೆ ಇರುವ ಮಕ್ಕಳು ಮತ್ತು ಮೊದಲ ತಲೆಮಾರಿನ ಕಲಿಕಾರ್ಥಿಗಳಿಗೆ ಸಂಬಂಧಿಸಿದ ವಿಷಯಗಳನ್ನು ಕೈಗೆತ್ತಿಕೊಂಡಿದ್ದೇನೆ.

ಆಕ್ರಮಣಶೀಲತೆ, ಹಿಂಸೆ, ರಂಪಾಟ, ಪ್ರತಿರೋಧ, ಧಿಕ್ಕರಿಸುವುದು, ಕಡೆಗಣನೆ ಅಥವಾ ಬಳಲಿರುವ ಬಗ್ಗೆ ದೂರುವುದು, ನಿದ್ದೆ, ಜಡತ್ವ ಮತ್ತು ನಿರಾಸಕ್ತಿ ಹೀಗೆ ಅನೇಕ ಸಂಗತಿಗಳಿರುತ್ತವೆ. ಅನೇಕ ಸಂದರ್ಭಗಳಲ್ಲಿ ಇಂತಹ ನಡವಳಿಕೆಗಳು ಮಗುವಿನ ಆಂತರಿಕ ಪ್ರಕ್ಷುಬ್ಧತೆಯ ದ್ಯೋತಕವಾಗಿರುತ್ತವೆ. ಭಾವನಾತ್ಮಕವಾಗಿ ತೊಂದರೆಗೆ ಒಳಗಾಗಿರುವ ಮಕ್ಕಳು ಶಾಲೆಯ ವಾತಾವರಣದ ಒಂದು ಅಥವಾ ಹಲವು ಮುಖ್ಯ ಅಂಶಗಳ ಜೊತೆ ಹೊಂದಾಣಿಕೆ ಮಾಡಿಕೊಳ್ಳಲು ಕಷ್ಟಪಡುತ್ತಾರೆ. ಇಂತಹ ಮಕ್ಕಳಿಗೆ ಗಮನ ಕೇಂದ್ರೀಕರಿಸಲು ಸಾಧ್ಯವಾಗುವುದಿಲ್ಲ, ಗೆಳೆಯರನ್ನು ಸಂಪಾದಿಸುವಲ್ಲಿ ಕಷ್ಟವಾಗಿರುತ್ತದೆ, ಯಾವುದೇ ಕೆಲಸದಲ್ಲಿ ತೊಡಗಿಕೊಳ್ಳುವುದರಲ್ಲಿ ಅವರು ಹಿಂಜರಿಯಬಹುದು ಅಥವಾ ನಿಲ್ಲಿಸಬಹುದು. ಈ ಕಾರಣಕ್ಕೆ ಕಲಿಕೆಯಲ್ಲಿ ಸಮಸ್ಯೆ ಅನುಭವಿಸುತ್ತಾರೆ. ಎಲ್ಲಾ ಮಕ್ಕಳಲ್ಲಿಯೂ ಆಂತರಿಕವಾದ ಶಕ್ತಿ ಇರುತ್ತದೆ. ತರಗತಿಗಳು ಅಥವಾ ಶಾಲಾ ಕಾರ್ಯಕ್ರಮಗಳು ಮಕ್ಕಳಿಗೆ ಪೂರಕವಾದ ವಾತಾವರಣವನ್ನು ಸೃಷ್ಟಿಸಿದರೆ ಎಲ್ಲ ಮಕ್ಕಳೂ ಕಲಿಯುವ ಸಾಮರ್ಥ್ಯವನ್ನು ಪಡೆಯುತ್ತಾರೆ. ಕಲಿಕೆಯ ತಾಣ ಸದಾ ಉತ್ತೇಜನ ನೀಡುವ, ಬೆಂಬಲಿಸುವ, ಸುರಕ್ಷಿತ ಹಾಗೂ ಕಾಳಜಿಯಿಂದ ಕೂಡಿದ್ದಾಗಿರಬೇಕು.

ಇವೆಲ್ಲವೂ ನಡೆಯಬೇಕಾದರೆ ಶಿಕ್ಷಕರು ಎಲ್ಲ ರೀತಿಯಲ್ಲೂ ಸಿದ್ಧತೆ ಮಾಡಿಕೊಳ್ಳುವ ಅಗತ್ಯವಿದೆ. ಸ್ವಲ್ಪ ಕಾಳಜಿ ಮತ್ತು ಆತ್ಮೀಯವಾದ ಸ್ಪರ್ಶದಿಂದ ಮಗುವಿನ ನಡವಳಿಕೆಯ ಹಿಂದಿನ ಕಾರಣವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಇದು ಆಕೆ/ಆತನ ಮಟ್ಟಿಗೆ ದೊಡ್ಡ ಸಹಾಯವಾಗುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಮಕ್ಕಳು ತಮ್ಮ ಮನಸ್ಸಿನ ಭಾವನೆಯನ್ನು ವ್ಯಕ್ತಪಡಿಸುವಂತೆ ಮಾಡುವುದು ಸುಲಭದ ಕೆಲಸವಂತೂ ಅಲ್ಲವೇ ಅಲ್ಲ. ಯಾಕೆಂದರೆ ಅಂತಹ ಭಾವನೆಗಳನ್ನು ಹೇಗೆ ವ್ಯಕ್ತಪಡಿಸಬೇಕು ಎಂಬುದನ್ನು ಯಾರೂ ಹೇಳಿಕೊಟ್ಟಿಲ್ಲ. ಇಂತಹ ಸಂದರ್ಭಗಳಲ್ಲಿ ಶಿಕ್ಷಕರಾದವರು ಮಕ್ಕಳ ಪಾಲಿಗೆ ಸೂಕ್ತವಾದ ಅಥವಾ ಅಪೇಕ್ಷಿತವಾದ ನಡವಳಿಕೆಯ ಮೂಲಕ ಮಾದರಿಯಾಗಬೇಕಾಗುತ್ತದೆ. ಭಾವನೆಗಳನ್ನು ವ್ಯಕ್ತಪಡಿಸಲು ಸಮಯಾವಕಾಶ ಮತ್ತು ಅಭ್ಯಾಸದ ಅಗತ್ಯವಿರುವುದರಿಂದ ಮಕ್ಕಳನ್ನು ನಿಭಾಯಿಸುವಾಗ ಶಿಕ್ಷಕರು ತಮ್ಮದೇ ಭಾವನೆಗಳನ್ನು ಹೇಗೆ ನಿಯಂತ್ರಣದಲ್ಲಿ ಇಟ್ಟುಕೊಳ್ಳುತ್ತಾರೆ ಎಂಬುದು ಸಹ ಇಲ್ಲಿ ಬಹಳ ಮುಖ್ಯವಾಗುತ್ತದೆ. ಈ ನಿಟ್ಟಿನಲ್ಲಿ ಮಕ್ಕಳ ಜೊತೆಗೆ ಆಗಿಂದಾಗ್ಗೆ ಅನೌಪಚಾರಿಕವಾಗಿ ಮಾತನಾಡುವುದು ಸಹಾಯಕವಾಗಬಹುದು. ತರಗತಿಯಲ್ಲಿ ಪ್ರಶಾಂತ ಹಾಗೂ ಆರಾಮದಾಯಕವಾದ ವಾತಾವರಣವನ್ನು ಕಲ್ಪಿಸಲು ಕೆಲವು ಶಿಕ್ಷಕರು ಲಘುವಾದ ಹಾಗೂ ಮಧುರ ಸಂಗೀತವನ್ನು ಕೇಳಿಸಬಹುದು. ಮಕ್ಕಳಿಗೆ ತಮ್ಮ ಮನಸ್ಸಿನ ಭಾವನೆಗಳನ್ನು ಚಿತ್ರ ಬಿಡಿಸಿ ಬಣ್ಣ ತುಂಬಲು ಕೆಲವರು ಅವಕಾಶ ನೀಡಬಹುದು. ಇನ್ನೂ ಕೆಲವರು ಮಕ್ಕಳು ತಮ್ಮ ನಡವಳಿಕೆಯನ್ನು ಪ್ರತಿಬಿಂಬಿಸಲು ಸಮಯವನ್ನು ನೀಡಬಹುದು. ಇಂತಹ ಕಾರ್ಯತಂತ್ರಗಳನ್ನು ಜಾರಿಗೊಳಿಸುವುದಕ್ಕೂ ಮುನ್ನ ಶಿಕ್ಷಕರು ಯಾವುದು ತಮ್ಮ ಕಾರ್ಯಶೈಲಿಗೆ ಸೂಕ್ತವಾದುದು ಎಂಬುದನ್ನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ ಎಂಬುದು ನನ್ನ ಭಾವನೆ.

ಆದರೂ, ಒಂದು ಮಗುವಿನ ವಿಚಾರದಲ್ಲಿ ಯಾವುದೇ ನಿರ್ಧಾರಕ್ಕೆ ಬರುವುದಕ್ಕೆ ಮುನ್ನ ವಿಶೇಷ ತಜ್ಞರು, ಪಾಲಕರು ಮತ್ತು ಪರಿಣಿತರ ಜೊತೆಗೆ ಚರ್ಚೆ ನಡೆಸುವುದು ಉತ್ತಮ.

ನಮಗೆಲ್ಲ ಗೊತ್ತಿರುವ ವಿಷಯ ಏನೆಂದರೆ ಅನೇಕ ಸಂದರ್ಭಗಳಲ್ಲಿ ಮಕ್ಕಳ ಚಡಪಡಿಕೆಗೆ ಸರಳವಾದ ಕಾರಣವೇನೆಂದರೆ ಅವರು ತರಗತಿಯಲ್ಲಿ ತೀವ್ರ ಬೇಸರಕ್ಕೆ ಒಳಗಾಗಿರುತ್ತಾರೆ. ಒಂದೋ ಅವರಿಗೆ ಕಲಿಸುತ್ತಿರುವುದಕ್ಕಿಂತ ಹೆಚ್ಚಿನ ವಿಷಯವನ್ನು (ಪರಿಚಿತ) ಅವರು ತಿಳಿದುಕೊಂಡಿರುತ್ತಾರೆ ಅಥವಾ ಶಿಕ್ಷಕರು ಏನು ಕಲಿಸುತ್ತಿದ್ದಾರೆ ಎಂಬುದನ್ನು ಅರಿತುಕೊಳ್ಳಲು ಅವರಿಗೆ ಸಾಧ್ಯವಾಗುತ್ತಿಲ್ಲ. ಇದರ ಜೊತೆಗೆ ಅವರು ಇನ್ನೂ ಇತರ ಸಂಗತಿಗಳಿಂದಾಗಿ ಅನ್ಯಮನಸ್ಕರಾಗಿರಬಹುದು; ಸಂಜೆ ನಡೆಯುವ ಬರ್ತ್‌ಡೇ ಪಾರ್ಟಿ, ತಾಯಿಗೆ ಅನಾರೋಗ್ಯ ಅಥವಾ ಮನೆಯಲ್ಲಿ ಕಿರಿಕಿರಿ, ಕೆಟ್ಟ ಘಟನೆಯಿಂದ ದಿನದ ಆರಂಭವಾಗಿರುವುದು, ಹೋಮ್‌ವರ್ಕ್ ಮಾಡದೇ ಇರುವುದು ಇತ್ಯಾದಿ. ಹಾಗಾಗಿ ಅವರು ತರಗತಿಯಲ್ಲಿ ಅನ್ಯಮನಸ್ಕರಾಗಿರುವ ಸಾಧ್ಯತೆ ಇರುತ್ತದೆ. ಅವರು ಶಾಲೆ ಮತ್ತು ಕಲಿಕೆಯಲ್ಲಿ ಹೆಚ್ಚಿನ ಸಮಯದ ಅಗತ್ಯವಿರುವ ಮೊದಲ ತಲೆಮಾರಿನ ಕಲಿಕಾರ್ಥಿಗಳಾಗಿಯೂ ಇರಬಹುದು.

**ಕಾರ್ಯರೂಪಕ್ಕೆ ಬರಬಹುದಾದ ಕೆಲವು ಕಾರ್ಯತಂತ್ರಗಳು**

ಇತರರಿಗಿಂತ ಪ್ರತಿಭಾವಂತರಾಗಿರುವ ಮಕ್ಕಳು

ಯಾರನ್ನಾದರೂ ಪ್ರತಿಭಾವಂತ ಎಂದು ಪರಿಗಣಿಸಲು ನಮಗಿರುವ ಆಧಾರವಾದರೂ ಏನು? ಪ್ರತಿಯೊಬ್ಬರಿಂದ ನಿರೀಕ್ಷಿಸಿದಂತೆ ಮಗುವು ತರಗತಿ ಮಟ್ಟದ ಎಲ್ಲ ಕೆಲಸವನ್ನು ಪೂರ್ತಿಗೊಳಿಸಿದೆ ಎಂಬುದನ್ನು ಖಚಿತಪಡಿಸಿಕೊಂಡ ನಂತರವೇ ಆ ಮಗುವಿಗೆ ಶಿಕ್ಷಕರು ಯಾವುದೇ ರೀತಿಯ ಹೆಚ್ಚುವರಿ ಕೆಲಸವನ್ನು ಕೊಡಬಹುದಾಗಿದೆ. ಒಂದೇ


4

Chapter 4

Reproduction in Animals

Synopsis

1. The process of giving birth to their own kind of animals is called reproduction.
2. Animals reproduce mainly in two ways : giving birth to young ones like themselves and laying eggs.
3. The animals which reproduce by giving birth to young ones of their own kind are called mammals. Human beings, cows, lions, etc., are some examples of mammals.
4. Mammals have hair which keep them warm.
5. Mammals take care of their young ones by giving milk, cleaning them and protecting them from enemies.
6. Mammals are warm blooded. They have a constant body temperature.
7. Most mammals live on land. Monkeys and squirrels which live on trees, whales and dolphins which live in water are also mammals.
8. Birds lay eggs and keep them warm under their feathers. After some days, eggs hatch and young ones come out.
9. Eggs are either oval shaped or round shaped with a thick outer protective shell which protects the growing parts inside. Inside the egg, there is a white thick liquid called egg white and a yellow liquid at the centre called egg yolk. Egg white is also called albumen.
10. Fishes lay eggs in water and reptiles like crocodiles, snakes and turtles lays on land.
11. Frogs lay eggs in water which hatch into tadpoles. Tadpoles grow into frogs. They look like fishes.
12. Some insects like grasshopper and cockroach pass through three stages in their life cycle. Eggs laid by cockroach develop into small baby insects called nympha. These do not exactly like cockroaches. They shed their skin several times to become cockroach. This process is called moulting.
13. Other insects like housefly and butterfly pass through four stages. The young ones hatched from the eggs are called larvae and look like worms.
14. After growing for sometime larva covers itself in a cocoon. This stage is called pupa. Finally pupa bursts and the fully grown insect comes out. Unlike mammals, the babies of the insects are not looked after by their parents.

4. Reproduction in Animals 119 Class IV–Science



9. In the egg stage, energy is obtained from

[A] the leaves of the plants

[B] egg yolk present in the egg

[C] killing other insects

[D] photosynthesis

10. In the larva stage, energy is obtained from

[A] egg yolk (B) leaves

[C] photosynthesis

[D] soil

11. Which of the following reproduce by laying eggs?

[A] Tiger (B) Cat

[C] Rat [D] Frog

12. Harika checked the temperature of her sister and made the following observation table

| Day | Sun | Mon | Tue | Wed | Thu | Fri | Sat |
|---|---|---|---|---|---|---|---|
| Temperature of her sister | [illegible] | [illegible] | [illegible] | [illegible] | [illegible] | [illegible] | [illegible] |

From the above information we can conclude that Harika's sister is a/an

[A] mammal

[B] reptile

[C] insect

(D) egg

13. Mammals have

[A] constant body temperature

[B] changing body temperature

[C] high temperature in night and low temperature in day

[D] no temperature

*The following diagram represents the life cycle of a frog. Answer the questions 14–17 based on this diagram.*

Egg → Tadpole → Frog

14. The animals which live both on the land and in the water are called amphibians. Frog is such an animal. Now, where does frog lay eggs?

(A) Land

(B) Water

(C) Both land and water

(D) Land in summer and water in winter

15. Tadpoles look like

[A] frogs [B] eggs

[C] fishes [D] cocoons

16. Tadpoles can move

[A] only in water

[B] only on land

[C] In water as well as on land

(D) none of the above

17. Which of the following is possessed by a tadpole but not an adult frog?

(A) Eye (B) Tail

(C) Kidney (D) Lungs

18. Dolphin is

4. Reproduction in Animals 121 Class IV–Science

ಸಮಸ್ಯೆ (ಪರಿಕಲ್ಪನೆ)ಯನ್ನು ನಾನಾ ಆಯಾಮಗಳಿಂದ ನೋಡಲು ಅವಕಾಶ ಮಾಡಿಕೊಡುವುದರ ಮೂಲಕ ಮಗುವು ಇದನ್ನೊಂದು ಸವಾಲಾಗಿ ಸ್ವೀಕರಿಸುವಂತೆ ಮಾಡಬೇಕು. ಉದಾಹರಣೆಗೆ ಗಣಿತದ ಪಾಠದಲ್ಲಿ ಗುಣಾಕಾರದ ವಿಷಯ ಬಂದಾಗ ಶಿಕ್ಷಕರು ಸಾಮಾನ್ಯವಾಗಿ ಒಂದನೇ ಅಂಕಿಯಿಂದ ಎರಡು ಅಂಕಿಗಳಿಗೆ, ಮೂರು ಮತ್ತು ನಾಲ್ಕನೇ ಅಂಕಿ ಎಂದು ಹೀಗೆ ಮುಂದೆ ಸಾಗುತ್ತಾರೆ. ಅದಕ್ಕೆ ಬದಲಾಗಿ ಮಗುವು 4x25 (ಗುಣಾಕಾರದ ಕೋಷ್ಟಕದ ಜ್ಞಾನದೊಂದಿಗೆ ಉತ್ತರವನ್ನು ಕಂಡುಕೊಳ್ಳುವುದು) ಮೂಲಕ, ಸ್ವತಃ ಸವಾಲುಗಳನ್ನು ಸೃಷ್ಟಿಸುವುದರ ಮೂಲಕ, ಕೋಷ್ಟಕಗಳಲ್ಲಿ ಅವರು ಯಾವ ಮಾದರಿಗಳನ್ನು ಅಳವಡಿಸಿದ್ದಾರೆ ಎಂದು ಕಂಡುಕೊಳ್ಳುವ ಮೂಲಕ, ಕಥೆಯ ಮೊತ್ತ ಅಥವಾ ವಾಕ್ಯ ಸಮಸ್ಯೆಗಳ ಮೂಲಕ, ತನ್ನದೇ ಆದ ಕಥೆಯ ಮೊತ್ತಗಳನ್ನು ಸೃಷ್ಟಿಸುವುದರ ಮೂಲಕ ಪ್ರಶ್ನೆಗಳಿಗೆ ಪ್ರತಿಕ್ರಿಯಿಸುವುದು ಇತ್ಯಾದಿ. 25x4 ಮತ್ತು 4x25 ಎರಡಕ್ಕೂ ಒಂದೇ ಉತ್ತರ ಆದರೂ ಅದನ್ನು ಹಿಂದು-ಮುಂದು ಮಾಡಿ ಬರೆಯುವುದರಲ್ಲಿ ಇರುವ ವ್ಯತ್ಯಾಸವೇನು ಎಂದು ಪ್ರಶ್ನಿಸುವ ಮೂಲಕ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಬಹುದು. ಒಂದು ಲೆಕ್ಕವನ್ನು ನಾನಾ ರೀತಿಯಲ್ಲಿ ಹೇಗೆ ಪರಿಹರಿಸಬಹುದು ಎಂಬುದನ್ನು ಶಿಕ್ಷಕರು ಮಕ್ಕಳಿಗೆ ಹೇಳಿಕೊಡಬಹುದು. ಉದಾಹರಣೆಗೆ, ಒಂದು ಮಗು 40ಕ್ಕೆ 40ನ್ನು ಕೂಡಿಸಿ ಆ ಬಳಿಕ 40+42ಕ್ಕೆ ಉತ್ತರ ಕಂಡುಕೊಳ್ಳಲು 2ನ್ನು ಸೇರಿಸುತ್ತಿದ್ದುದು ನೆನಪಿದೆ. ವ್ಯವಕಲನದಲ್ಲಿ ಮಕ್ಕಳಿಗೆ ಮುಂಚಲನೆಯ ಎಣಿಕೆಯನ್ನು ಕಲಿಸಲಾಗುತ್ತದೆ, ಆದರೆ ಕೆಲವು ಮಕ್ಕಳಿಗೆ ಹಿಂಚಲನೆಯ ಲೆಕ್ಕದಲ್ಲಿ ಹೆಚ್ಚು ಆಸಕ್ತಿ ಇರಬಹುದು– ಅಂತಹ ವಿಭಿನ್ನ ವಿಧಾನಗಳಿಗೆ ಅವಕಾಶ ನೀಡಬೇಕು. ಇಂತಹ ಪ್ರಯೋಗಗಳು ಮಗುವಿಗೆ ತನ್ನ ಯೋಚನೆಯ ಪರಿಧಿಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲು, ಯಾಂತ್ರಿಕವಾಗಿ ಅದನ್ನು ಮಾಡುವ ಹೊರೆಗಿಂತ ತನ್ನದೇ ಪರಿಕಲ್ಪನೆಯ ಮೇಲೆ ಕೆಲಸ ಮಾಡಲು, ಅಭ್ಯಾಸದ ಹೆಸರಿನಲ್ಲಿ ಇಂತಹುದೇ ಇನ್ನಷ್ಟು ಪ್ರಯೋಗಗಳಿಗೆ ಅವಕಾಶ ಮಾಡಿಕೊಟ್ಟಂತಾಗುತ್ತವೆ. ಇದರಿಂದ ಮಗುವನ್ನು ಒಂದು ಕೆಲಸದಲ್ಲಿ ತೊಡಗಿಸಿದಂತೆಯೂ ಆಗುತ್ತದೆ. ಇವೆಲ್ಲದಕ್ಕೆ ಶಿಕ್ಷಕರ ಕಡೆಯಿಂದ ಸೂಕ್ತ ಯೋಜನೆಯ ಅಗತ್ಯವಿರುತ್ತದೆ ಎಂಬುದರಲ್ಲಿ ಅನುಮಾನವಿಲ್ಲ.

ಬಹುಬೇಗ ಬೇಸರಕ್ಕೆ ಒಳಗಾಗುವ ಮಕ್ಕಳಿಗಾಗಿ

ಏನನ್ನು ಕಲಿಸುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳಲು ಕಷ್ಟಪಡುವುದರಿಂದ ಬಹುಬೇಗ ಬೇಸರಗೊಳ್ಳುವ ಮಗುವಿನ ವಿಚಾರದಲ್ಲಿ ಏನು ಮಾಡುವುದು? ಈ ಸಂದರ್ಭದಲ್ಲಿ ಮಗು ನಿಜ ಜೀವನಕ್ಕೆ ಹತ್ತಿರವಾದ ಪರಿಕಲ್ಪನೆಗೆ ಹೊಂದುವಂತೆ ಶಿಕ್ಷಕರು ದಾರಿಗಳನ್ನು ಕಂಡುಕೊಳ್ಳಬೇಕಾಗುತ್ತದೆ ಅಥವಾ ಉದಾಹರಣೆಗಳನ್ನು ಬಳಸಿಕೊಳ್ಳಬೇಕು. ಇದರಿಂದ ಮಗುವು ತನ್ನ ಸುತ್ತ ನಡೆಯುತ್ತಿರುವ ಸಂಗತಿಗಳಿಂದ ಕಲಿಯಲು ಸಹಾಯವಾಗುತ್ತದೆ. ಒಟ್ಟಾರೆಯಾಗಿ ಇದು ಸಾಮಾನ್ಯ ಕಾರ್ಯ–ತಂತ್ರವಾಗಬೇಕು. ಕೆಲವು ಮಕ್ಕಳಿಗೆ ಈ ವಿಚಾರದಲ್ಲಿ ಹೆಚ್ಚಿನ ಸಮಯದ ಅಗತ್ಯವಿರಬಹುದು. ಇದರ ಅರಿವು ಶಿಕ್ಷಕರಿಗೆ ಇರಬೇಕಾಗುತ್ತದೆ.

ಇವೆಲ್ಲದರ ಜೊತೆಗೆ ಪರಿಕಲ್ಪನೆಗಳು ಅಥವಾ ವಿಷಯಗಳನ್ನು ಚಿಕ್ಕದಾಗಿ ಮಾಡಿ ಮತ್ತು ಸಂಕ್ಷಿಪ್ತಗೊಳಿಸಿ ನಿಭಾಯಿಸಬಹುದಾದ ಸ್ವರೂಪಕ್ಕೆ ತಂದರೂ ಸಹಾಯವಾಗಬಹುದು. ಉದಾಹರಣೆಗೆ

ಪ್ರಾಣಿಗಳಲ್ಲಿ ಪುನರುತ್ಪಾದನೆ (Reproduction in Animals) ಎಂಬ ವಿಷಯವಿದ್ದರೆ, ಅಲ್ಲಿನ ವಿಷಯಗಳನ್ನು 19 ಮತ್ತು 20ನೇ ಪುಟದಲ್ಲಿನ ಚಿತ್ರಗಳಲ್ಲಿ ತೋರಿಸಿರುವಂತೆ ಮಗುವಿಗಾಗಿ ಪುನರ್ ಸೃಷ್ಟಿಸಬಹುದು. ಕೊನೆಯಲ್ಲಿ ಬರುವ ಉತ್ತರದ ಬಗ್ಗೆ ಚಿಂತಿಸಬೇಕಾಗಿಲ್ಲ. ಮಗು ಕಲಿಯಲು ಶಕ್ತವಾಗಬೇಕೆಂಬುದು ಉದ್ದೇಶವಾಗಿರುವುದರಿಂದ, ಆ ಸಮಯಾವಕಾಶದಲ್ಲಿ ಉತ್ತರದ ಬಗ್ಗೆ ಮೊದಲು ನೋಡದೆ ಮಕ್ಕಳು ಕಲಿಯಬೇಕು.

**ಮೊದಲ ತಲೆಮಾರಿನ ಕಲಿಕಾರ್ಥಿಗಳು ಎದುರಿಸುವ ಸಮಸ್ಯೆಗಳು**

ಮೊದಲ ತಲೆಮಾರಿನ ಕಲಿಕಾರ್ಥಿಗಳ ಸಮಸ್ಯೆಗಳು ಭಿನ್ನವಾಗಿದ್ದರೂ, ಒಂದು ನಿರ್ದಿಷ್ಟ ಹಂತದಲ್ಲಿ ಈ ಮೇಲಿನ ಕಾರ್ಯತಂತ್ರಗಳು ಅವರಿಗೂ ನೆರವಾಗಬೇಕು. ಹೊಸ ಜಾಗ, ಹೊಸ ಸನ್ನಿವೇಶ, ಹೊಸ ಜನರು ಇತ್ಯಾದಿ, ತುಂಬಾ ಸಮಯ ಮನೆಯಿಂದ ದೂರವಿರಬೇಕಾದದ್ದು, ಭಾಷಾ ಅಡೆತಡೆ ಇತ್ಯಾದಿ ಹಲವು ಕಾರಣಗಳಾಗಿ ಮೊದಲ ತಲೆಮಾರಿನ ಕಲಿಕಾರ್ಥಿಗಳು ಆತಂಕವನ್ನು ಎದುರಿಸಬಹುದು. ಇಂಥ ಮಕ್ಕಳು ಅಥವಾ ಇತರರು (ಮೊದಲ ತಲೆಮಾರಿನ ಕಲಿಕಾರ್ಥಿಗಳಲ್ಲದವರು) ಕೂಡಾ ಕೆಲವು ವಿಪರೀತ ವರ್ತನೆಗಳನ್ನು ತೋರುವ ಸಾಧ್ಯತೆಯೂ ಇರಬಹುದು. ಕೆಲವರು ವಾಪಸ್ ಹೋಗಬಹುದು, ಕೆಲವರು ಶಿಕ್ಷಕರಿಗೆ ಪ್ರತಿಕ್ರಿಯಿಸದೆ ಇರಬಹುದು (ನನ್ನ 3ನೇ ತರಗತಿಯಲ್ಲಿದ್ದ ಒಂದು ಮಗು ಮಾತನಾಡಲು ಬಹುತೇಕ ಒಂದು ವರ್ಷ ತೆಗೆದು–ಕೊಂಡಿತ್ತು) ಕೆಲವರು ಜಗಳಗಂಟರಾಗಿರಬಹುದು, ಕೆಲವರು ಅಧಿಕಾರ ಚಲಾಯಿಸುವ ಸ್ವಭಾವ ಹೊಂದಿರಬಹುದು, ಕೆಲವರು ವಿನಾ ಕಾರಣ ಅಳುತ್ತಿರಬಹುದು (ಯಾವುದೇ ಹೊಸ ಸನ್ನಿವೇಶಕ್ಕೆ ತೆರೆದುಕೊಂಡಾಗ ಆತಂಕ). ಈ ಹಿಂದೆ ನಾನು ಉಲ್ಲೇಖಿಸಿದಂತೆ, ಈ ವರ್ತನೆಗಳು, ಬಗೆಹರಿಯದ ಹಲವು ರೀತಿಯ ಭಾವನಾತ್ಮಕ ಸಮಸ್ಯೆಗಳು ಮತ್ತು ಸಂಭಾವ್ಯ ಪರಿಸ್ಥಿತಿಯಿಂದಾಗಿ ಕಾಣಿಸುವ ಆತಂಕಗಳಿಂದಾಗಿ ಇರಬಹುದು. ಹೀಗಾಗಿ ಶಿಕ್ಷಕರು ಮಗುವಿನ ಜೊತೆ ನಿಕಟ ಬಾಂಧವ್ಯ ಸ್ಥಾಪಿಸುವುದು ಮುಖ್ಯವಾಗಿದೆ. (ಭಾವನಾತ್ಮಕ ಸಮಸ್ಯೆಗಳು ಯಾವುದೇ ವಯೋಮಾನದವರಲ್ಲೂ ಕಾಣಿಸಬಹುದಾದ್ದರಿಂದ, ಅದಕ್ಕೆ ವಯಸ್ಸು ಅಥವಾ ತರಗತಿಯ ಮಟ್ಟದ ಹಂಗಿಲ್ಲ – ನಾವೆಲ್ಲರೂ ಕೆಲವು ವೈಯಕ್ತಿಕ ಒತ್ತಡದ ಪರಿಸ್ಥಿತಿಗಳಿಂದಾಗಿ ಕೆಟ್ಟ ದಿನಗಳನ್ನು ಹಾದು ಬಂದವರಲ್ಲವೇ?)

ಮನೆಯಲ್ಲಿ ಮೊದಲು ಶಾಲೆಗೆ ಹೋಗುತ್ತಿರುವವರೆಂಬುದು ಮೊದಲ ಪೀಳಿಗೆಯ ಕಲಿಕಾರ್ಥಿಗಳ ಬಗ್ಗೆ ನಿಜವಾದ ವ್ಯಾಖ್ಯಾನ. ಮನೆಯಲ್ಲಿ ಮಕ್ಕಳಿಗೆ ಶೈಕ್ಷಣಿಕ ಬೆಂಬಲ ನೀಡುವವರು ಯಾರೂ ಇಲ್ಲದಿರುವುದು ಅಥವಾ ಮಕ್ಕಳೇ ತಮ್ಮ ಹೋಂವರ್ಕ್ ಮಾಡಲು ಬಿಟ್ಟುಬಿಡುವುದು ಬಹುತೇಕ ವೇಳೆ ಮೊದಲ ತಲೆಮಾರಿನ ಕಲಿಕಾರ್ಥಿಗಳ ಜೊತೆ ಶಿಕ್ಷಕರು ಎದುರಿಸುವ ಸಮಸ್ಯೆಯಾಗಿದೆ. ಇಂಥ ಸನ್ನಿವೇಶಗಳಲ್ಲಿ ಹೋಮ್‌ವರ್ಕ್‌ನ ಸ್ವರೂಪದ ಬಗ್ಗೆ ಅಥವಾ ಹೋಂವರ್ಕ್ ನೀಡಬೇಕಾದ ಕಾರಣಗಳ ಬಗ್ಗೆಯೇ ಶಿಕ್ಷಕರು ಯೋಚಿಸ–ಬೇಕಾದದ್ದು ಅತಿಮುಖ್ಯ. ಮಗು ನಿರ್ವಹಿಸಲಾಗದು ಎನ್ನುವುದು ಸ್ಪಷ್ಟವಾಗಿರುವಾಗ ಯಾಕೆ ಅದನ್ನು ಕೊಡುತ್ತಿರಬೇಕು? ಮಕ್ಕಳ ಕೌಟುಂಬಿಕ ಸ್ಥಿತಿಗತಿಗಳನ್ನು ಪರಿಗಣಿಸಬೇಕು ಮತ್ತು ಕಿರಿದಾದ ಸೃಜನಾತ್ಮಕ ಬಗೆಯಿಂದ ದೊಡ್ಡದನ್ನು ಸಾಧಿಸಬಹುದು. ಶೈಕ್ಷಣಿಕ ಕಲಿಕೆಯ ಹಾದಿ ಸುಗಮಗೊಳಿಸುವಂಥ ಇತರ ಹವ್ಯಾಸಗಳನ್ನು ಮಕ್ಕಳಲ್ಲಿ ಶಿಕ್ಷಕರು ನಿರಾಯಾಸವಾಗಿ ರೂಢಿಸಬಹುದು–ಮಕ್ಕಳಿಗಾಗಿ ಶಾಲಾ ಅವಧಿ ನಂತರದ ವೇಳಾಪಟ್ಟಿ ರೂಪಿಸಬಹುದು, (ತಮ್ಮ ಮಕ್ಕಳ ಜೊತೆ ಕಳೆಯಲು ಸಮಯವಿಲ್ಲದ ಪಾಲಕರಿಗಾಗಿ ವೇಳಾಪಟ್ಟಿ) ದಿನನಿತ್ಯದ ಕಾರ್ಯಕಲಾಪವನ್ನು ಯೋಜಿಸುವ ಮೂಲಕ ಕಾರ್ಯಶೈಲಿಯನ್ನು ಬೆಳೆಸುವುದು, ಓದುವಿಕೆಗೆ ಪ್ರೋತ್ಸಾಹಿಸುವುದು (ಚೀಟಿಗಳು, ನಾಮಫಲಕಗಳು, ಟಿವಿ ಇತ್ಯಾದಿಗಳಾಗಿರಬಹುದು), ಸಮಯ ನಿರ್ವಹಣೆಯ ಕೌಶಲದ ಕಲಿಕೆ (ಶಾಲೆಗೆ ತೆರಳಲು ಸಿದ್ಧರಾಗುವಂತೆ ಬೆಳಗ್ಗೆ ಬೇಗನೆ ಏಳುವಂಥ ಸರಳ ಸಂಗತಿಗಳಾಗಿರಬಹುದು).

ಈ ಕಾರ್ಯತಂತ್ರಗಳು ಕೇವಲ ಕಿರಿಯ ತರಗತಿಗಳಿಗಷ್ಟೇ ಅಲ್ಲ ಎಂಬುದನ್ನು ನಾನು ಮತ್ತೊಮ್ಮೆ ಒತ್ತಿಹೇಳಲು ಬಯಸುತ್ತೇನೆ. ಹಿರಿಯ ತರಗತಿಗಳಲ್ಲೂ ಇಂಥ ಶಿಸ್ತು ಮತ್ತು ಹವ್ಯಾಸಗಳ ಸ್ವ–ನಿಯಂತ್ರಣದ ಕೊರತೆಯಿರುವ ಹಲವು ಮಕ್ಕಳು ಇದ್ದಾರೆ. ಮಕ್ಕಳಿಗೆ ತಾವು ಕೊಡುವ ಕಾರ್ಯವಿಧಾನಗಳ ಬಗ್ಗೆ ವಿವರಿಸಲು ಶಿಕ್ಷಕರು ಹೆಚ್ಚುವರಿ ಪ್ರಯತ್ನಪಡಬೇಕಾದ ಅಗತ್ಯವಿದೆ. ಹೋಂವರ್ಕ್ ಮಾಡುವ ವೇಳೆ ಮಗುವಿನ ಪಕ್ಕದಲ್ಲೇ ಇರುವಂತೆ ಅಥವಾ ಮಕ್ಕಳು ಹೋಂವರ್ಕ್ ಪೂರ್ಣಗೊಳಿಸಿದ್ದಾರೆಯೇ ಎಂದು ತಿಳಿದು–ಕೊಳ್ಳುವಂತೆಯೂ ಪೋಷಕರನ್ನು ವಿನಂತಿಸಬಹುದು. ಯಾವುದೇ ಶೈಕ್ಷಣಿಕ ಬೆಂಬಲ ನೀಡಲು ಪಾಲಕರಿಗೆ ಸಾಧ್ಯವಾಗದಿದ್ದರೂ, ತಮ್ಮ ಮಗುವಿನ ಶಾಲಾ ಶಿಕ್ಷಣ ಮತ್ತು ಕಲಿಕೆಯಲ್ಲಿ ಅವರ ಸಕ್ರಿಯ ಪಾಲ್ಗೊಳ್ಳುವಿಕೆಯಿಂದಾಗಿ ಮಗುವಿಗೆ ಅಧ್ಯಯನದಲ್ಲಿ ಪ್ರೋತ್ಸಾಹಿಸಬಹುದು. ಹೀಗೆ ಪೋಷಕರ ಭಾಗವಹಿಸುವಿಕೆ ಮತ್ತು ತೊಡಗುವಿಕೆಯಿಂದಾಗಿ ಖಂಡಿತಾ ಸಹಕಾರಿಯಾಗುತ್ತದೆ ಮತ್ತು ಅವರು ತಮ್ಮ ಮಕ್ಕಳಿಗೆ ಬೆಂಬಲಿಸಲು ಆರಂಭಿಸುತ್ತಾರೆ. ಹಾಗಾಗಿ, ಈ ವಿಧಾನದಲ್ಲಿ ಪಾಲಕರು–ಶಿಕ್ಷಕರ ಸಂಬಂಧ ಅತ್ಯಂತ ನಿರ್ಣಾಯಕವಾದದ್ದು. ಒಂದೊಮ್ಮೆ ಪೋಷಕರಿಗೆ ಗೌರವ ಸಿಕ್ಕಾಗ ಮತ್ತು ತೊಡಗಿಕೊಂಡಾಗ, ಅವರು ಕೂಡಾ ತಮ್ಮ ಮಗು ಶಾಲೆಗೆ ನಿರಂತರ ತೆರಳುವುದನ್ನು ಖಾತ್ರಿಪಡಿಸುವ ನಿಟ್ಟಿನಲ್ಲಿ ಹೆಚ್ಚು ಸಕ್ರಿಯರಾಗುತ್ತಾರೆ, ಹಲವು ವಿಚಾರಗಳಲ್ಲಿ ಇದುವೇ ಒಂದು ಕಾಳಜಿಯಿಂದ ಗಮನಿಸಬೇಕಾದ ಸಂಗತಿಯಾಗಿರುತ್ತದೆ.

ಮಕ್ಕಳ ಕಲಿಕೆಗೆ ಸಹಜವಾಗಿಯೇ ಅಂಕಗಳು ಸೂಚಕವಾಗಿರುತ್ತವೆ ಮತ್ತು ಪೋಷಕರು ಕೂಡಾ ಅಂಕಗಳು ಪ್ರಮುಖ ಎಂದೇ ಪರಿಗಣಿಸುತ್ತಾರೆ. ಆದರೆ ಶಾಲೆಗಳು, ಶಿಕ್ಷಕ–ಪಾಲಕರ ಸಭೆಗಳ ಸಂದರ್ಭ ಪೋಷಕರ ಜೊತೆ ಅರ್ಥಪೂರ್ಣ ಸಂವಾದಗಳನ್ನು ಏರ್ಪಡಿಸುವ ಮೂಲಕ ಪುರಾವೆ–ಆಧಾರಿತ ಕಲಿಕೆಯ ಉಪಕ್ರಮಗಳನ್ನು ನಡೆಸಬಹುದು. ಶಿಕ್ಷಕರು ಕಾರ್ಯಪತ್ರಗಳು, ಉತ್ತರಪತ್ರಿಕೆಗಳು, ನೋಟ್ ಪುಸ್ತಕಗಳನ್ನು ಪೋಷಕರೊಂದಿಗೆ ಹಂಚಿಕೊಂಡು ತಮ್ಮ ಮಕ್ಕಳ ಕೆಲಸ ಮತ್ತು ಸಾಮರ್ಥ್ಯಗಳ ಬಗ್ಗೆ ಅವರಿಗೆ ವಿವರಿಸಬಹುದು. ಬಹುತೇಕ ಸಂದರ್ಭಗಳಲ್ಲಿ ಪೋಷಕರು ಶಿಕ್ಷಿತರಲ್ಲದ ಕಾರಣ, ಇವನ್ನು ಅರ್ಥ ಮಾಡಿಕೊಳ್ಳಲಾಗದ್ದರಿಂದ ಪರಿಗಣಿಸಲಾಗದು. ತಮ್ಮ ಮಕ್ಕಳ ಕಾರ್ಯಕ್ಷಮತೆಯನ್ನು ಅರಿತುಕೊಳ್ಳುವುದು ಪೋಷಕರ ಹಕ್ಕಾಗಿರುವುದರಿಂದ ಮಕ್ಕಳ ಕೆಲಸವನ್ನು ಹಂಚಿಕೊಳ್ಳಬೇಕಾದದ್ದು ಶಿಕ್ಷಕರ ಜವಾಬ್ದಾರಿಯೆಂದು ನಾನು ನಂಬುತ್ತೇನೆ. ಶಿಕ್ಷಕ–ಪೋಷಕರ ಸಭೆಗಳು ದೂರಿಕೊಳ್ಳುವ ಅವಧಿಯಾಗಿರಬಾರದು. ಇದೇ ಕಾರಣಕ್ಕೆ ಪೋಷಕರು ಈ ಸಭೆಯನ್ನು ನಿರ್ಲಕ್ಷಿಸುತ್ತಾರೆ. 'ಪ್ರತೀ ಮಗುವೂ ಕಲಿಯಬಹುದು' ಎಂದು ನಾವು ನಿಜವಾಗಿ ನಂಬಿದ್ದರೆ, ಮಗುವಿನ ಸಾಮರ್ಥ್ಯಗಳ ಬಗ್ಗೆ ಪ್ರಸ್ತಾಪಿಸಿ ಜೊತೆಗೆ ಸುಧಾರಣೆಯ ವಲಯಗಳ ಬಗ್ಗೆಯೂ ನಾವು ಪ್ರಾಶಸ್ತ್ಯ ಕೊಡುತ್ತಿದ್ದೇವೆಂದು ಖಾತ್ರಿಪಡಿಸುವ ಅಗತ್ಯವಿದೆ. ಶಿಕ್ಷಕ – ಪೋಷಕರ ಸಭೆಗಳಲ್ಲಿ ಕೆಲವು ಶಾಲೆಗಳು ಶೈಕ್ಷಣಿಕ ಚಲನಚಿತ್ರಗಳನ್ನು ಪ್ರದರ್ಶಿಸುತ್ತವೆ. ಇವೆಲ್ಲವೂ ಶಿಕ್ಷಣತಜ್ಞರಷ್ಟೇ ಅಲ್ಲದೆ ಪೋಷಕರು ಕೂಡಾ ತಮ್ಮ ಮಕ್ಕಳ ಶಿಕ್ಷಣದಲ್ಲಿ ಒಳಗೊಳ್ಳುವಂತೆ ಮಾಡುವ ವಿಧಾನಗಳಾಗಿವೆ.

ವಿವಿಧ ಅಗತ್ಯಗಳು ಮತ್ತು ಸಾಮರ್ಥ್ಯಗಳೊಂದಿಗೆ ಎಲ್ಲಾ ವಿದ್ಯಾರ್ಥಿಗಳು ಶಾಲೆಗೆ ಬಂದಿರುವುದರಿಂದ ಯಾವುದೇ ವಿದ್ಯಾರ್ಥಿಯೂ ಮೂಲಭೂತವಾಗಿ ವಿಭಿನ್ನವಾಗಿರುವುದಿಲ್ಲ. ಇಂಥ ಮಕ್ಕಳಿಗೆ ನೆರವಾಗಲು ಶಾಲೆಗಳು ಹೆಚ್ಚುವರಿ ತರಗತಿಗಳು, ಪರಿಹಾರ ಬೋಧನಾ (Remedial classes)ಗಳನ್ನು ಕೂಡಾ ಏರ್ಪಡಿಸಬೇಕು. ಎಲ್ಲಿಯವರೆಗೆ ಶಿಕ್ಷಕರು ವಿವಿಧ ಕಾರ್ಯ–ತಂತ್ರಗಳನ್ನು ಬಳಸುವ ಮೂಲಕ ಮಕ್ಕಳ ಕಲಿಕಾ ಅಂತರವನ್ನು ನಿವಾರಿಸುವ ಮತ್ತು ತರಗತಿಗಳಲ್ಲಿ ವಿಚಾರಗಳನ್ನೇ ಇಲ್ಲಿಯೂ ಪುನರಾವರ್ತಿಸದೆ ಇರುತ್ತಾರೋ ಆಗ ಪರಿಹಾರ ಬೋಧನಾ ತರಗತಿಗಳು ಯಶಸ್ವಿಯಾಗುತ್ತವೆ. ಇಲ್ಲವಾದರೆ, ಮಕ್ಕಳು ಇಂಥ ತರಗತಿಗಳಿಗೆ ಗೈರಾಗಲು ಅವರಿಗೊಂದು ಕಾರಣ ಸಿಕ್ಕಂತಾಗುತ್ತದೆ. ಇಲ್ಲಿರುವ ಅತಿಮುಖ್ಯ ವಿಚಾರ ಎಚಿದರೆ ಸಮುದಾಯದೊಂದಿಗಿನ ಸಂಬಂಧ. ಅಂದರೆ ಪೋಷಕರು, ಶಿಕ್ಷಕರು ಮತ್ತು ಶಾಲೆ ಸಮಾನ ಹಾದಿಯಲ್ಲಿದ್ದೇವೆ ಮತ್ತು ಮಕ್ಕಳ ಕಲ್ಯಾಣದ ಸಮಾನ ಉದ್ದೇಶದಿಂದ ಪರಸ್ಪರ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದೇವೆ ಎನ್ನುವುದನ್ನು ನಾವು ಖಾತ್ರಿಪಡಿಸುವ ಅಗತ್ಯವಿದೆ.

ಮಕ್ಕಳ ಅಗತ್ಯಗಳನ್ನು ಗುರುತಿಸುವುದು ಮತ್ತು ಅವರಿಗೆ ಒಂದು ಸುರಕ್ಷಿತ ಮತ್ತು ಪೂರಕವಾದ ಕಲಿಕಾ ವಾತಾವರಣವನ್ನು ಒದಗಿಸುವ ಕಾರ್ಯವು ಶಿಕ್ಷಕರಾಗಿ ನಮಗೆಲ್ಲರಿಗೂ ಸೇರಿದ್ದಾಗಿದೆ. ಕಲಿಕೆ ಎಂದರೆ ಏನೆಲ್ಲಾ ಇದೆ ಎಂಬ ಬಗ್ಗೆ ನಮ್ಮ ನೆನಪುಗಳನ್ನು ಪುನರಾವಲೋಕಿಸಲು ಎನ್‌ಸಿಎಫ್ 2005ರ 2ನೇ ಅಧ್ಯಾಯವನ್ನು (ಕಲಿಕೆ ಮತ್ತು ಜ್ಞಾನ) ಮತ್ತೊಮ್ಮೆ ಅಭ್ಯಸಿಸುವುದು ಉತ್ತಮವಾದೀತು.

**ಉಲ್ಲೇಖಗಳು**


Tom. E.C. Smith, Polloway, et al. (2015) Teaching Students with Special Needs in Inclusive Settings. Toronto; Pearson Canada Inc

National Curriculum Framework 2005

Anand, M. (2015) Globalisation and Indian School Education: Impact and Challenges. European Scientific Journal, 1: 235–49.





**ಅರುಣಾ ಜ್ಯೋತಿ** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕಿಯಾಗಿದ್ದು. ಶಾಲಾ ಶಿಕ್ಷಕಿಯಾಗಿ ಹಲವು ವರ್ಷಗಳ ಅನುಭವ ಹೊಂದಿದ್ದಾರೆ. ಕೌನ್ಸೆಲಿಂಗ್ ಆಂಡ್ ಸ್ಪೆಷಲ್ ನೀಡ್ಸ್ ವಿಭಾಗದ ಮುಖ್ಯಸ್ಥೆಯಾಗಿ, ನಿಧಾನ ಕಲಿಕಾರ್ಥಿಗಳಿಗಾಗಿ ಒಂದು ಚಟುವಟಿಕೆ ಕೇಂದ್ರವನ್ನು ಸ್ಥಾಪಿಸಿದ್ದಾರೆ. ಚೆನ್ನೈನ ವಿಹೆಚ್‌ಎ ಆಸ್ಪತ್ರೆ ಮತ್ತು ಸ್ನೇಹಾ (ನಿಧಾನ ಕಲಿಕಾರ್ಥಿಗಳ ಕೇಂದ್ರ)ದಲ್ಲಿ ಸ್ವಯಂಸೇವಕಿಯಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ. ವಿಶ್ವವಿದ್ಯಾಲಯಕ್ಕೆ ಬರುವ ಮುನ್ನ ಅರುಣಾ ಅವರು ಅಜೀಮ್ ಪ್ರೇಮ್‌ಜಿ ಫೌಂಡೇಷನ್‌ನ ಮೊದಲ ಆರು ಅಜೀಮ್ ಪ್ರೇಮ್‌ಜಿ ಶಾಲೆಗಳನ್ನು ಸ್ಥಾಪಿಸಿದ ಶಾಲಾ ತಂಡದಲ್ಲಿ ಸಕ್ರಿಯರಾಗಿದ್ದರು. ಈ ಶಾಲೆಗಳಲ್ಲಿ ಅರುಣಾ ಅವರು ಶಿಕ್ಷಕ ವೃತ್ತಿಪರತೆ ಅಭಿವೃದ್ಧಿ, ಪಠ್ಯ ಸುಧಾರಣೆ, ಸಿಸಿಇ, ಇಸಿಇ, ವಿಶೇಷ ಶಿಕ್ಷಣ ಮತ್ತು ಹದಿಹರೆಯರಿಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ಸಕ್ರಿಯರಾಗಿದ್ದರು. ಅರುಣಾ ಜ್ಯೋತಿ ಅವರನ್ನು aruna.v@azimpremjifoundation.org ಮೂಲಕ ಸಂಪರ್ಕಿಸಬಹುದು.



ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಲತಾ ಕೆ ಸಿ**

# ವಿಷಯಗಳ ಗಡಿಯನ್ನು ಮೀರಲು ಪತ್ರದ ಪ್ರಯಾಣ

ಚಂದ್ರಿಕಾ ಸೋನಿ

ವಿಷಯಗಳ ಗಡಿಗಳನ್ನು ಮುರಿದಾಗ ಅಥವಾ ಮಸುಕಾಗಿಸಿದಾಗ ಕಲಿಕೆಯು ಅಪಾರ ಖುಷಿಯಿಂದ ಕೂಡಿರುತ್ತದೆ ಎನ್ನುವುದು ಪ್ರತಿಯೊಬ್ಬ ಸಹೋದ್ಯೋಗಿ ಶಿಕ್ಷಕರ ಅನುಭವಕ್ಕೆ ಬಂದಿರಲೇ-ಬೇಕು. ಯಾವುದೇ ಸಂದರ್ಭದಲ್ಲಿ, ಸಣ್ಣ ಮಕ್ಕಳನ್ನು ಏನೇ ಅದರೂ. ಹೀಗೆ ವಿಷಯಗಳ ಗಡಿಯೊಳಗೆ ಹಿಡಿದಿಡಲು ಸಾಧ್ಯವಿಲ್ಲ. ಒಂದು ವೇಳೆ ವಿಷಯಗಳ ನಡುವಿನ ಗಡಿಯನ್ನು ಸಮನ್ವಯಗೊಳಿಸಿದರೆ, ಸಂಗೀತ ಬರೆಯುವ ಪುಸ್ತಕದಲ್ಲಿ ವಾತಾವರಣದಲ್ಲಿನ ತಂಗಾಳಿಯು ಕಾಣಿಸೀತು. ಹಿಂದಿ ಬರೆಯುವ ಪುಸ್ತಕದಲ್ಲಿ ಹಾಡಿನ ಎಳೆ ಪತ್ತೆಯಾದೀತು, ಬುಟ್ಟಿಯಿಂದ ನಾಪತ್ತೆಯಾಗಿದ್ದ ನಾಲ್ಕು ಮಾವಿನ ಹಣ್ಣುಗಳು ಪರಿಸರದ ನೋಟ್ ಪುಸ್ತಕದಲ್ಲಿ ಕಾಣಸಿಕ್ಕೀತು. ಎಲ್ಲಾ ವಿಷಯಗಳು ಎಷ್ಟು ಬಿಗಿಯಾಗಿ ಹೆಣೆಯಲ್ಪಟ್ಟಿವೆ ಎಂದರೆ ಮಕ್ಕಳಿಗೆ ಆ ಕಗ್ಗಂಟನ್ನು ಬಿಡಿಸುವ ಪ್ರಯತ್ನವನ್ನು ಮಾಡಲಾಗುವುದಿಲ್ಲ ಮತ್ತು ಅದರಲ್ಲಿ, ಯಾವುದಾದರೊಂದು ಪ್ರಸಂಗ ಎರಡು ವಿಷಯಗಳಲ್ಲಿ ಸಮಾನವಾಗಿದ್ದರೆ ಎರಡನ್ನೂ ಬೆರೆಸುವುದು ಅನಿವಾರ್ಯ. ನನಗೆ ಮೂರನೇ ತರಗತಿಯಲ್ಲಿ ಅಂತಹ ಒಂದು ಸುಂದರ ಅನುಭವವಾಗಿತ್ತು. ವಿಶೇಷ ಒಡನಾಟದ ಅನುಭವ ನೀಡಿದ್ದ ಆ ತರಗತಿಗೆ ನಾನು ಪ್ರತಿದಿನ ಕನಿಷ್ಠ ಎರಡು ಮೂರು ಬಾರಿ ಹೋಗುತ್ತಿದ್ದೆ. ಕೆಲವೊಮ್ಮೆ ದಿನಕ್ಕೆ ನಾಲ್ಕು ಸಲ ಹೋಗುತ್ತಿದ್ದುದೂ ಉಂಟು.

ಇಲ್ಲಿ ನಾನು ಪರಿಸರ ಅಧ್ಯಯನ (Environmental Studies) ಮತ್ತು ಹಿಂದಿ–ಎರಡು ವಿಷಯಗಳನ್ನು ಬೋಧಿಸುತ್ತೇನೆ. ಹಿಂದಿ ಪಾಠ ಮಾಡುತ್ತಿರುವುದು ಅದೇ ಮೊದಲ ಸಲ. ಕೆಲವೊಮ್ಮೆ, ಭಾಷೆಯ ಸಂಕೀರ್ಣತೆ ನನ್ನನ್ನು ಗೊಂದಲಕ್ಕೀಡು ಮಾಡಿದರೆ, ಕೆಲವು ಬಾರಿ, ಬೋಧನೆಗೆ ಹೊಸ ದಿಕ್ಕನ್ನೇ ತೋರಿಸಿ ನನಗೆ ನೆರವಾಗುತ್ತದೆ, ಅಲ್ಲದೆ ಪರಿಸರ ಅಧ್ಯಯನದಂಥ ಇತರ ವಿಷಯಗಳ ಬೋಧನೆಗೆ ನನಗೆ ನೆರವಾಗುತ್ತದೆ. ಒಂದು ವೇಳೆ ಎರಡೂ ವಿಷಯಗಳಲ್ಲಿ ಸಮಾನ ಆಶಯಗಳಿದ್ದರೆ, ಎರಡೂ ವಿಷಯಗಳ ಬೋಧನೆಗೆ ಒಂದೇ ಮಾರ್ಗ ನನಗೆ ಸಿಕ್ಕಿದಂತಾಗುತ್ತದೆ.

ಪರಿಸರ ಅಧ್ಯಯನ ಕಲಿಕೆಯಲ್ಲಿನ ಅಂತರ ಇಳಿಕೆ (Ghatati Dooriyan – ಸಂಪರ್ಕದ ನೆಲೆಯಲ್ಲಿ ಅಂತರದಲ್ಲಿ ಇಳಿಕೆ ಮಾಡುವುದು), ಹಿಂದಿಯ ಮೈತ್ರಿ ಬಾಘ್ (ಪತ್ರ ಬರೆಯುವ ಆರಂಭಿಕ ಹಂತ Maitri Bagh) – ಈ ವಿಷಯಗಳು ಮಕ್ಕಳಿಗೆ ಯಾವಾಗಲೂ ಸಮಸ್ಯೆಯೇ. ಯಾಕೆಂದರೆ, ಇತ್ತೀಚಿನ ದಿನಗಳಲ್ಲಿ ಮಕ್ಕಳು ತಮ್ಮ ಪಾಡಿಗೆ ಪತ್ರಗಳನ್ನು ಬರೆಯುವುದೂ ಇಲ್ಲ, ಅತ್ತ ಮನೆಯಲ್ಲಿ ಯಾರಾದರೂ ಬರೆಯುವುದನ್ನು ನೋಡುವುದೂ ಇಲ್ಲ. ಇಂದಿನ ಸಂಚಾರಿ ದೂರವಾಣಿ ಸಂವಹನದ ಜಗತ್ತಿನಲ್ಲಿ, ಪತ್ರ ಬರೆಯುವುದು, ಪ್ರಾಚೀನ ಕಾಲದಲ್ಲಿ ಪಾರಿವಾಳಗಳು ಓಲೆಗಳನ್ನು ಹೊತ್ತೊಯ್ಯುತ್ತಿದ್ದಂತೆ ಅಳಿವಿನಂಚಿಗೆ ಸಾಗಿದೆ. ಪತ್ರದ ಪೆಟ್ಟಿಗೆಗಳು ಕಾಣುವುದೂ ಇಲ್ಲ, ಅದರ ಬಳಕೆಯೂ ಇಲ್ಲ. ಪತ್ರ ಬರೆಯುವ ಮತ್ತು ಅವುಗಳನ್ನು ರವಾನಿಸುವುದನ್ನು ಮಕ್ಕಳಿಗೆ ಹೇಳಿ–ಕೊಡುವುದು ಗಾಳಿಯಲ್ಲಿ ಗೋಪುರ ಕಟ್ಟಿದಷ್ಟೇ ಸವಾಲಿನ ಕೆಲಸ. ಇನ್‌ಲ್ಯಾಂಡ್ ಪತ್ರ ಅಥವಾ ಅಂಚೆ ಕಾರ್ಡ್‌ಗಳನ್ನು ನೋಡಿಯೇ ಇರದ ಮಕ್ಕಳು ಅವುಗಳ ಬಳಕೆಯನ್ನು ಹೇಗೆ ತಿಳಿದಾರು? ಆದರೆ, ರಕ್ಷಾಬಂಧನ ಅಥವಾ ಮದುವೆ ಆಮಂತ್ರಣ ಪತ್ರಗಳನ್ನು ಒಯ್ಯಲು ಬಳಸುವ ಉದ್ದದ ಲಕೋಟೆಗಳು ಅವರಿಗೆ ಚಿರಪರಿಚಿತ. ಇಷ್ಟಾದರೂ, ಮಕ್ಕಳಿಗೆ ಪತ್ರಗಳ ರವಾನೆ ಪ್ರಕ್ರಿಯೆಯ ಬಗ್ಗೆ ಏನೇನೂ ತಿಳಿದಿಲ್ಲ.

ಮಕ್ಕಳಿಗೆ ಈ ಪ್ರಕ್ರಿಯೆಯನ್ನು ಹೇಗೆ ಪರಿಚಯಿಸುವುದು ಎಂದು ತಲೆಕೆಡಿಸಿಕೊಂಡಿದ್ದ ಹೊತ್ತಿನಲ್ಲೇ ಹಿಂದಿಯ 'ಮೈತ್ರಿ ಬಾಘ್' ಪಾಠ ಶುರು ಮಾಡಿದೆ. ಇದು ನನಗೊಂದು ದಾರಿ ತೋರಿಸಿತು. ಆ ಪಾಠದಲ್ಲಿ ಮಗುವಿನ ಮಾವ ಒಂದು ಪತ್ರದ ಮೂಲಕ ಮೈತ್ರಿ ಬಾಘ್





आदरणीय - मामी जी | नाम - त्रिलोक | ग्राम - [illegible] | जिला - धमतरी

खुश रहो मामी जी आप कैसी हो और मामा [illegible] कैसे है। मैं आशा करता हूँ कि घर मे ठीक रहो [illegible] खाने पीने का ध्यान रखना नानी, नाना, दादी कैसे है। मम्मी, पापा सब [illegible] ठीक है [illegible] [illegible] हमर घर [illegible] [illegible] [illegible] घर आना।

खुश रहो [illegible]

[illegible] त्रिलोक



आदरणीय चन्द्रिका टीचर

नमस्ते टीचर आप कैसे हो मैं [illegible] स्कूल मे [illegible] अच्छा लगता है [illegible] आप धमतरी में रहते हो ना [illegible] आप भी ठीक से धमतरी मे रहते थे ना और खुश भी रहना और आप कब आओगे स्कूल पढ़ाने को आप जल्दी से आओगे ना और अच्छे अच्छे कहानी बताना [illegible] भी बताना और हम भी आपको अच्छी कविताएँ पढ़ेंगे किताब से और सुनाएंगे [illegible]

[illegible] चन्द्रिका टीचर

ಬಗ್ಗೆ ವಿವರವಾಗಿ ಹೇಳುತ್ತಾರೆ. ಈ ಪಾಠವನ್ನು ಓದಿದ ಬಳಿಕ ಮಕ್ಕಳು ತಮ್ಮ ಸ್ನೇಹಿತರಿಗೆ, ಕುಟುಂಬ ಸದಸ್ಯರಿಗೆ ಮತ್ತು ತಮ್ಮ ಶಿಕ್ಷಕರಿಗೆ ಕೆಲವು ಪತ್ರಗಳನ್ನು ಬರೆದರು. ಬಳಿಕ ಈ ಪತ್ರಗಳನ್ನು ರವಾನಿಸುವುದು ಹೇಗೆ ಎಂಬ ಪ್ರಶ್ನೆ ಎದ್ದಿತು.

ಒಂದು ಪತ್ರವನ್ನು ರವಾನಿಸಬೇಕಾದರೆ, ವಿಳಾಸ ಬರೆದಿರಬೇಕು ಮತ್ತು ಪತ್ರವನ್ನು ಅಂಚೆ ಪೆಟ್ಟಿಗೆಯೊಳಗೆ ಹಾಕಬೇಕು. ಈ ಪ್ರಕ್ರಿಯೆಯಲ್ಲಿ ಕಷ್ಟಗಳು ಎದುರಾದವು. ಪರಿಸರ ಕಲಿಕೆಯಲ್ಲಿನ ಚಿತ್ರವು ತುಂಬಾ ಗೊಂದಲದಿಂದ ಕೂಡಿತ್ತು. ಆ ಚಿತ್ರದ ಮೂಲಕ ಈ ಪ್ರಕ್ರಿಯೆಯು ಯಾರಿಗೂ ಅರ್ಥವಾಗುವಂತಿರಲಿಲ್ಲ. ಉದಾಹರಣೆಗೆ, ಚಿತ್ರದಲ್ಲಿ ಪತ್ರಗಳನ್ನು ವ್ಯಕ್ತಿಯೊಬ್ಬ ವಿಲೇವಾರಿ ಮಾಡುತ್ತಿದ್ದ. ಅವನು ಪತ್ರವನ್ನು ಅಂಚೆಗೆ ಹಾಕಿದ ನಗರದಲ್ಲಿ ವಿಲೇವಾರಿ ಮಾಡುತ್ತಿದ್ದನೋ ಅಥವಾ ಪತ್ರ ತಲುಪಿದ ನಗರದಲ್ಲಿ ವಿಲೇವಾರಿ ಮಾಡುತ್ತಿದ್ದನೋ ಎಂದು ಗೊತ್ತಾಗುತ್ತಿರಲಿಲ್ಲ. ಈ ಪ್ರಸಂಗದಲ್ಲಿ ಪಾತ್ರಗಳು ನೆರವಾದರೂ ಅವುಗಳನ್ನು ಸರಿಯಾಗಿ ನಿರ್ವಹಿಸುವುದೇ ದೊಡ್ಡ ಸವಾಲಿನದ್ದಾಗಿತ್ತು.

ಹೀಗೆ ಗೊಂದಲಗಳನ್ನು ಎದುರಿಸುತ್ತಿರುವಾಗಲೇ ನನಗೆ, 'ಏಕಲವ್ಯ' ಪ್ರಕಾಶಿಸಿದ ಖಾತ್ (Khat) ಎಂಬ ಪುಸ್ತಕದ ನೆನಪಾಯಿತು. ನಾಗಪುರದಲ್ಲಿ ನೆಲೆಸಿದ್ದ ತನ್ನ ಅಜ್ಜನಿಗೆ (ಅಜೂಬಾ) ಅಪೂರ್ವ ಎಂಬ ಸಣ್ಣ ಹುಡುಗಿ ಬರೆದ ಸುಂದರವಾದ ಸಣ್ಣಕತೆಗಳ ಪುಸ್ತಕವದು. ಅಪೂರ್ವ ತನ್ನ ಅಜ್ಜನ ಹುಟ್ಟಿದ ದಿನದಂದು ಶುಭಾಶಯ ಕೋರಲೆಂದು ಈ ಕತೆ ಬರೆದಿದ್ದಳು. ತನ್ನ ಪತ್ರವು ಸಕಾಲಕ್ಕೆ ಅಜ್ಜನಿಗೆ ತಲುಪಬೇಕು ಎಂದು ಅವಳು ಬಯಸಿದ್ದಳು. ಲಕೋಟೆಯ ಮೇಲ್ಭಾಗದಲ್ಲಿ ಸುಂದರವಾದ ಎರಡು ಪುಟ್ಟ ಕಣ್ಣುಗಳುಳ್ಳ ನಗುಮುಖದ ಚಿತ್ರವನ್ನು ಅವಳು ಬರೆದಿದ್ದಳು. ಒಳಗೆ, ಹೂ ಮತ್ತು ಬಳ್ಳಿಗಳಿಂದ ಸಿಂಗರಿಸಿದ್ದಳು.

ಅಂಚೆ ಪೆಟ್ಟಿಗೆಗೆ ಪತ್ರವನ್ನು ಹಾಕುವಾಗ ಅವಳು, 'ನನ್ನ ದದ್ದು ಹತ್ತಿರ ಬೇಗ ಹೋಗು' ಎಂದು ಹೇಳುತ್ತಾಳೆ.

ಹೀಗೆ, ನಾಗಪುರಕ್ಕೆ ಪತ್ರದ ಪ್ರಯಾಣವನ್ನು ಸುಂದರವಾಗಿ ವಿವರಿಸಲಾಗಿದೆ. ಈ ಕತೆಯನ್ನು ಮಕ್ಕಳೊಂದಿಗೆ ನಾನು ಹಂಚಿಕೊಂಡಾಗ ಅವರ ಮುಖದಲ್ಲೂ ಸುಂದರವಾದ ನಗು ತುಂಬಿಕೊಂಡಿತ್ತು. ಇದನ್ನೇ ಒಂದು ಪಾತ್ರವಾಗಿಸಿಕೊಳ್ಳುವ ಯೋಚನೆ ನನಗೆ ಬಂದದ್ದು ಆಗಲೇ.

ನಾವು ಕೆಲವು ಚಂದದ ಪಾತ್ರಗಳನ್ನು ಸಿದ್ಧಪಡಿಸಿದೆವು. ನಾಲ್ಕು ಮಕ್ಕಳು ಅಂಚೆ ಪೆಟ್ಟಿಗೆಗಳಾದರು, ಒಂದು ಮಗು ಅಪೂರ್ವಳ ಪಾತ್ರ





ವಹಿಸಿತು, ಇನ್ನೊಂದು ಮಗು ಅಪೂರ್ವಳ ಪತ್ರವಾಯಿತು. ಇತರ ಆರು ಮಕ್ಕಳು ಬೇರೆಬೇರೆ ಸ್ಥಳಗಳಿಗೆ ರವಾನೆಯಾಗಬೇಕಾದ ಇತರ ಅಂಚೆಕಟ್ಟುಗಳು ಮತ್ತು ಪತ್ರಗಳಾದರು. ಎರಡು ಮಕ್ಕಳು ಅಂಚೆವಾಲಾನ ಪಾತ್ರ ನಿರ್ವಹಿಸಿದರು. ಇನ್ನು ಕೆಲವು ಮಕ್ಕಳು ಅಂಚೆಕಚೇರಿಯಲ್ಲಿ ಪತ್ರಗಳನ್ನು ವಿಲೇವಾರಿ ಮಾಡುವ ಅಥವಾ ಅವುಗಳಿಗೆ ಅಂಚೆ ಚೀಟಿ ಹಚ್ಚುವ ವಿವಿಧ ಸಿಬ್ಬಂದಿಯಾದರು. ಮತ್ತೆ ಕೆಲವರು ಸೈಕಲ್ ಮತ್ತು ರೈಲಿನ ಬೋಗಿಗಳಾದರು. ಹೀಗೆ, ಕನಿಷ್ಠ ಅರ್ಧದಷ್ಟು ತರಗತಿಯೇ ಈ ಚಟುವಟಿಕೆಯಲ್ಲಿ ಪಾಲ್ಗೊಂಡಿತು. ಇನ್ನುಳಿದ ಮಕ್ಕಳು ಇಡೀ ಚಟುವಟಿಕೆಯಲ್ಲಿ ಪ್ರೇಕ್ಷಕರಾಗಿ ಪಾಲ್ಗೊಂಡು ಖುಷಿಪಟ್ಟರು.

ಅಂಚೆಪೆಟ್ಟಿಗೆಯೊಳಗಿನ ಕತ್ತಲೆಯಲ್ಲಿ ಪತ್ರವು ಹೇಗೆ ಬೆದರಿ ಕೂರುತ್ತದೆ, ಇತರ ಪತ್ರಗಳ ಹಿಂದೆ ಅದು ಹೇಗೆ ಅವಿತಿರುತ್ತದೆ, ರೈಲಿನ ಸದ್ದಿಗೆ ಅದು ಹೇಗೆ ಬೆಚ್ಚಿಬೀಳುತ್ತದೆ, ಪಾರ್ಸೆಲ್ ಜತೆ ಹೇಗೆ ಸ್ನೇಹ ಸಂಪಾದಿಸುತ್ತದೆ, ನಾಗಪುರಕ್ಕೆ ಹೋಗುವ ದಾರಿಯುದ್ದಕ್ಕೂ ಪತ್ರವು ದೊಡ್ಡ ಅಂಚೆಕಟ್ಟುಗಳ ಪಕ್ಕದಲ್ಲಿ ರಾತ್ರಿಯಿಡೀ ಹೇಗೆ ನಿದ್ದೆ ಮಾಡುತ್ತದೆ, ಅಂಚೆಚೀಟಿ ಹಚ್ಚುವಾಗ ಹೇಗೆ ಕಣ್ಣನ್ನು ಬಿಗಿಯಾಗಿ ಮುಚ್ಚುತ್ತದೆ? ಹೀಗೆ. ಮಕ್ಕಳು ಪ್ರತಿ ಭಾಗದಲ್ಲೂ ಉತ್ತಮ ಪ್ರದರ್ಶನ ನೀಡಿದರು, ಜೊತೆಗೆ ಒಂದು ಪತ್ರ ರವಾನೆ ಮತ್ತು ಬಟವಾಡೆಯ ಇಡೀ ಪ್ರಕ್ರಿಯೆಯನ್ನು ತಿಳಿದುಕೊಂಡರು.

ಮಕ್ಕಳ ಭಾಗವಹಿಸುವಿಕೆ ಎಷ್ಟು ಚೆನ್ನಾಗಿತ್ತೆಂದರೆ, ಶಾಲೆಯ ಬೆಳಗಿನ ಪ್ರಾರ್ಥನಾ ಸಭೆಯಲ್ಲಿಯೂ ಈ ಪ್ರದರ್ಶನವನ್ನು ಪ್ರಸ್ತುತಪಡಿಸಲು ನಾವು ನಿರ್ಧರಿಸಿದೆವು. ಇದರಿಂದ ಇತರ ಮಕ್ಕಳಿಗೆ ಮನರಂಜನೆಯ ಜೊತೆಗೆ ಅಂಚೆ ವಿಲೇವಾರಿಯ ಸಂಕೀರ್ಣ ಪ್ರಕ್ರಿಯೆಯನ್ನು ಅರಿತುಕೊಳ್ಳಲೂ ನೆರವಾಗಲಿ ಎಂಬುದು ನಮ್ಮ ಉದ್ದೇಶವಾಗಿತ್ತು. ಮಕ್ಕಳು ಅತ್ಯುತ್ಸಾಹದಿಂದ ಈ ಪ್ರದರ್ಶನಕ್ಕೆ ಸಜ್ಜಾದರು. ಮುಂದಿನ ಬುಧವಾರದ ಪ್ರಾರ್ಥನಾ ಸಭೆಯಲ್ಲಿ ಪ್ರದರ್ಶನ ನೀಡುವುದು ಎಂದು ನಿಗದಿಯಾಯಿತು.

ಹೀಗೆ, ಕಲಿಕೆಯ ಒಂದು ವಿಷಯವು ಹಿಂದಿ ಪಾಠದಿಂದ ತನ್ನ ಪಯಣವನ್ನು ಆರಂಭಿಸಿ ಪರಿಸರ ವಿಜ್ಞಾನಗಳ ಕಲಿಕೆಯತ್ತ ತಿರುವು ಪಡೆದು, ಬಳಿಕ ಬೆಳಗಿನ ಪ್ರಾರ್ಥನಾ ಸಭೆವರೆಗೆ ಸಾಗಿಬಂದಿತು. ಇಡೀ ಪ್ರಕ್ರಿಯೆಯಲ್ಲಿ ಮಕ್ಕಳಿಂದಲೂ ಕೆಲವು ಕುತೂಹಲಕಾರಿ ಅಂಶಗಳನ್ನು ಕಲಿತೆವು. ತಮ್ಮ ತಂದೆತಾಯಿಗೆ ಮಕ್ಕಳು ಬರೆದ ಕೆಲವು ಪತ್ರಗಳಂತೂ ಅಸಾಮಾನ್ಯವಾಗಿದ್ದವು. ಅಂತಹ ಪತ್ರಗಳನ್ನು ಆಯಾ ಪೋಷಕರಿಗೆ ನಾವು ಕಳುಹಿಸಿದೆವು. ಅವರಿಗೂ ಅತ್ಯಂತ ಸಂತೋಷವಾಯಿತು.




ಚಂದ್ರಿಕಾ ಸೋನಿ ಅವರು ಧಮ್ ತರಿಯಲ್ಲಿನ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಪರಿಸರ ವಿಜ್ಞಾನ ಶಿಕ್ಷಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮಕ್ಕಳೊಂದಿಗೆ ಬೆರೆತು ಕಲಿಸುವುದು, ಕ್ರಿಯಾತ್ಮಕ ಚಟುವಟಿಕೆಗಳ ಮೂಲಕ ಮಕ್ಕಳ ಪ್ರತಿಭೆಗೆ ಹೊಸ ಆಯಾಮಗಳನ್ನು ನೀಡುವುದು ಮತ್ತು ಕೌಶಲಾಧಾರಿತ ಬೋಧನೆಯ ವಾತಾವರಣ ಕಲ್ಪಿಸುವುದು ಶಿಕ್ಷಕಿಯಾಗಿ ಅವರ ವಿಶೇಷ ಆಸಕ್ತಿಗಳು. ಚಂದ್ರಿಕಾ ಸೋನಿ ಅವರ ಸಂಪರ್ಕಕ್ಕೆ chandrika.soni@azimpremjifoundation.org

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಮಕ್ಕಳು ವಿಭಿನ್ನ ರೀತಿಯಲ್ಲಿ ಕಲಿಯುತ್ತಾರೆ: | ಸಂಗಾರೆಡ್ಡಿಯ ಅನುಭವ

ಆರಂಭಿಕ ಬಾಲ್ಯ ಶಿಕ್ಷಣ ತಂಡ (ಸಂಗಾರೆಡ್ಡಿ)

ಸಮಗ್ರ ಶಿಶು ಅಭಿವೃದ್ಧಿ (Integrated Child Development Services- ICDS) ಯೋಜನೆಯಡಿಯಲ್ಲಿ ನಡೆಯುತ್ತಿರುವ ಸುಮಾರು 13 ಲಕ್ಷ ಅಂಗನವಾಡಿ ಕೇಂದ್ರ (Anganwadi Centres - AWCs)ಗಳಿಗೆ ಹಾಜರಾಗುವ 3ರಿಂದ 6 ವರ್ಷದೊಳಗಿನ 3.3 ಕೋಟಿ ಮಕ್ಕಳ ಪೈಕಿ ಇಬ್ಬರು–ದೇವಿಕಾ ಮತ್ತು ಬಾಲಾ. ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ ಸಚಿವಾಲಯದ ಐಸಿಡಿಎಸ್ ಯೋಜನೆಯಡಿ ಈ ಕೇಂದ್ರಗಳು ಪೌಷ್ಟಿಕ ಆಹಾರ, ಆರೋಗ್ಯ ಮತ್ತು ಆರಂಭಿಕ ಶಿಕ್ಷಣ ಸೇವೆಯನ್ನು ಒದಗಿಸುತ್ತವೆ. ಮಕ್ಕಳು ಇಲ್ಲಿ ಶಿಕ್ಷಕರು ಹೇಳಿಕೊಡುವ ಆಟ ಮತ್ತು ಅರ್ಥಪೂರ್ಣ ಚಟುವಟಿಕೆಗಳ ಮೂಲಕ ಕಲಿಯುತ್ತಾರೆ. ಈ ಅಂಗನವಾಡಿ ಕೇಂದ್ರಗಳಿಗೆ ಬರುವ ಬಹುತೇಕ ಮಕ್ಕಳು ಸೌಲಭ್ಯವಂಚಿತ ಕುಟುಂಬಗಳಿಗೆ ಸೇರಿದವರು. ಈ ಮಕ್ಕಳ ಕಲಿಕಾ ಸಾಮರ್ಥ್ಯವು ಅವರ ಸಮಾಜೋ–ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿದೆಯೇ? ಒಂದು ವೇಳೆ ಅವರು ಓದಲು ಅಥವಾ ಬರೆಯಲು ವಿಫಲರಾಗುತ್ತ, ಶಾಲೆಯಿಂದ ಹೊರಗುಳಿಯುತ್ತಲೇ ಬೆಳೆದರೆ, ಅದು ಸೋಮಾರಿತನ, ಕೆಟ್ಟ ಹವ್ಯಾಸ ಅಥವಾ ಶಿಕ್ಷಣದ ಬಗೆಗಿನ ನಿರಾಸಕ್ತಿ ಮುಂತಾದುವುಗಳಿಂದ ಪ್ರಭಾವಿತವಾದ ಅವರ ವೈಯಕ್ತಿಕ ಅನರ್ಹತೆಯ ಪರಿಣಾಮವೇ? ಬಡತನ, ಜಾತಿ, ಧರ್ಮ ಮತ್ತು ಇತರ ಸಾಮಾಜಿಕ ಭೇದಗಳು ಅವರ ಕಲಿಕಾ ಸಾಮರ್ಥ್ಯಕ್ಕೆ ಕಾರಣವಾಗುತ್ತವೆಯೇ?

**ಪ್ರಕರಣ 1**

**ಹಿನ್ನೆಲೆ**

ಮೂರರ ಹರೆಯದ ಆರೋಗ್ಯವಂತ ಮಗು ದೇವಿಕಾ, 'ಅಮ್ಮ' ಎಂಬಂತಹ ಪದಗಳನ್ನಷ್ಟೇ ಅಸ್ಪಷ್ಟವಾಗಿ ಉಚ್ಚರಿಸಬಲ್ಲಳು ಮತ್ತು ಕೆಲವೇ ಶಬ್ದಗಳನ್ನು ಮಾಡಬಲ್ಲಳು. ಅವಳನ್ನು ಮಾತು ಬಾರದ ನತದೃಷ್ಟ ಮಗು ಎಂದೇ ಪರಿಗಣಿಸಲಾಗಿತ್ತು. ಅವಳ ಮಾತನಾಡಲಾಗದ ತೊಂದರೆಯ ಬಗ್ಗೆ ತಂದೆತಾಯಿಗೆ ಚಿಂತೆಯಾಗಿತ್ತು. ಅವರು ದೇವರ ಮೊರೆ ಹೋಗಿದ್ದರು ಮತ್ತು ಸಾಕಷ್ಟು ಪೂಜೆಗಳನ್ನು ಮಾಡಿದ್ದರು. ಆದರೆ ಆ ಪ್ರಯತ್ನಗಳೆಲ್ಲವೂ ನಿಷ್ಪ್ರಯೋಜಕವಾಗಿ ಅವರು ಹತಾಶೆಯಿಂದ ಬಳಲಿದ್ದರು. ಎಲ್ಲಾ ಆಸೆಗಳನ್ನೂ ಬಿಟ್ಟಿದ್ದ ಅವಳ ತಾಯಿ ಒಂದು ದಿನ 'ಆರಂಭಿಕ ಬಾಲ್ಯ ಕಾಳಜಿ ಮತ್ತು ಶಿಕ್ಷಣ ದಿನ' ('Early Childhood Care and Education Day) (ಶಿಕ್ಷಕರು–ಪೋಷಕರ ಸಭೆ)ಕ್ಕೆ ಹಾಜರಾದರು. ಆ ಸಭೆಯಲ್ಲಿ ಶಿಕ್ಷಕರು ಆರಂಭಿಕ ಬಾಲ್ಯ ಶಿಕ್ಷಣ (Early Childhood Education-ECE) ಮತ್ತು ಮಕ್ಕಳ ಸಮರ್ಪಕ ಬೆಳವಣಿಗೆಗೆ ಬಾಲ್ಯದಲ್ಲಿ ಸಿಗಬೇಕಾದ ಅವಕಾಶಗಳ ಬಗ್ಗೆ ತಿಳಿಸಿದರು. ಆ ತಾಯಿ ತಕ್ಷಣವೇ ತನ್ನ ಮಗಳನ್ನು ಒಂದು ಅಂಗನವಾಡಿ ಕೇಂದ್ರಕ್ಕೆ ದಾಖಲಿಸಿದರು.

**ಮಧ್ಯಂತರ**

ದೇವಿಕಾ ಆರಂಭದಲ್ಲಿ ಅಳುಕಿದರೂ ಶಿಕ್ಷಕಿ ಒದಗಿಸಿದ ಮುಕ್ತ ಆಟದ ಅವಕಾಶಗಳಿಂದಾಗಿ ಬಹಳ ಬೇಗನೆ ಇತರೆ ಮಕ್ಕಳ ಜೊತೆಗೆ ಬೆರೆಯಲು ಆರಂಭಿಸಿದಳು. ಅಂಗನವಾಡಿಯ ಭೌತಿಕ ವ್ಯವಸ್ಥೆಯ ಹೊಸತನ್ನು ಕಂಡುಕೊಳ್ಳುವ ಅವಳ ಆಸಕ್ತಿಯನ್ನು ಕೆರಳಿಸಿತ್ತು. ಅವಳು ಆಟದ ಸಾಮಗ್ರಿಗಳನ್ನು ಬಳಸಲಾರಂಭಿಸಿದಳು ಮತ್ತು ವಸ್ತುಗಳತ್ತ ಕೈ ತೋರಿಸಿ ಪದಗಳನ್ನು ಅಸ್ಪಷ್ಟವಾಗಿ ಉಚ್ಚರಿಸಲು ತೊಡಗಿದಳು. ದೇವಿಕಾ ತೋರಿಸಿದ ವಸ್ತುಗಳ ಹೆಸರುಗಳನ್ನು ಹೇಳುವ ಮೂಲಕ ಶಿಕ್ಷಕರು ಅವಳಿಗೆ ನೆರವಾಗುತ್ತಿದ್ದರು. ಇದನ್ನು ಗಮನಿಸಿದ ಅವಳದೇ ವಯಸ್ಸಿನ ಇತರ ಮಕ್ಕಳೂ ಕೂಡಾ ಸರಳ ಪದಗಳ ಕಲಿಕೆಗೆ ಅವಳಿಗೆ ನೆರವಾದರು. ನಿಧಾನವಾಗಿ ಅವಳು ಸಣ್ಣಸಣ್ಣ ವಾಕ್ಯಗಳನ್ನು ರಚಿಸಲು ಸಮರ್ಥಳಾದಳು. ದೇವಿಕಾ ಪ್ರತಿದಿನ ಕೇಂದ್ರಕ್ಕೆ ಬರುವಂತೆ ಅವಳ ತಾಯಿ ನೋಡಿಕೊಂಡರು. ದೇವಿಕಾ ತರಗತಿಯಲ್ಲಿ ಎಲ್ಲಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಶಿಕ್ಷಕರೂ ನೋಡಿಕೊಂಡರಲ್ಲದೆ ಹೆಚ್ಚುಹೆಚ್ಚು ಅವಕಾಶಗಳನ್ನು ಕೊಟ್ಟರು. ಇದರಿಂದ ಅಂತರ್ಮುಖಿಯಾದ ಮತ್ತು ಒಂಟಿಯಾಗಿದ್ದ ಒಂದು ಮಗು ಕ್ರಿಯಾಶೀಲ ಮತ್ತು ಖುಷಿಯ ಮಗುವಾಗಿ ಮಾರ್ಪಟ್ಟಿತು. ಪ್ರತಿಫಲನ ಅಂಗನವಾಡಿ ಕೇಂದ್ರದ ಭಯ–ಮುಕ್ತವಾದ ಕಲಿಕೆಯ ವಾತಾವರಣವೇ ದೇವಿಕಾಳಿಗೆ ಆನಂದದಿಂದ ತೊಡಗಿಸಿಕೊಳ್ಳಲು ಕಾರಣವಾಯಿತು. ಶಿಕ್ಷಕಿಯ ಸಂವಾದಗಳು, ಕತೆ ಹೇಳುವುದು, ನೃತ್ಯದೊಂದಿಗೆ ಹಾಡುವುದು ಮತ್ತು ಆಟೋಟ ಚಟುವಟಿಕೆಗಳು, ಅವಳ ಭಾಷಾ ಬೆಳವಣಿಗೆಗೆ ಮತ್ತು ನಿರಂತರ ಪ್ರೋತ್ಸಾಹವು ಕಲಿಕೆಗೆ ನೆರವಾಯಿತು. ಮಗುವಿನ ತಾಯಿಯೂ ಅವಳು ಪ್ರತಿನಿತ್ಯ ಶಾಲೆಗೆ ಹಾಜರಾಗುವಂತೆ ನೋಡಿಕೊಂಡರಲ್ಲದೆ ಮನೆಯಲ್ಲಿಯೂ ಮಗುವಿನೊಂದಿಗೆ ಹೆಚ್ಚಿನ ಸಮಯ ಕಳೆದು ಕೇಂದ್ರದಲ್ಲಿ ಕಲಿತದ್ದನ್ನು ಮತ್ತೆ ಹೇಳಿಕೊಟ್ಟರು. ಪೋಷಕರು ಮತ್ತು ಶಿಕ್ಷಕರ ಸಭೆಯೊಂದರಲ್ಲಿ ದೇವಿಕಾಳ ತಾಯಿ ತನ್ನ ಅನುಭವವನ್ನು ಇತರ ಪೋಷಕರೊಂದಿಗೆ ಹಂಚಿಕೊಂಡರು. ಮಕ್ಕಳ ಬೆಳವಣಿಗೆಯಲ್ಲಿ ಆರಂಭಿಕ ಬಾಲ್ಯ ಶಿಕ್ಷಣದ ಅವಶ್ಯಕತೆಯನ್ನು ಅವರು ಒತ್ತಿಹೇಳಿದರು.

**ಪ್ರಕರಣ 2**

**ಹಿನ್ನೆಲೆ**

ಅಂಗನವಾಡಿ ಕೇಂದ್ರಕ್ಕೆ ಸೇರುವಾಗ ಬಾಲನಿಗೆ ಇನ್ನೂ ಮೂರು ವರ್ಷ. ಇತರ ಮಕ್ಕಳು ಚಟುವಟಿಕೆಗಳಲ್ಲಿ ನಿರತರಾಗಿರುವಾಗ ಅವನು ಕೇಂದ್ರದ ಒಂದು ಮೂಲೆಯಲ್ಲಿ ಕುಳಿತಿರುತ್ತಿದ್ದ. ಅವನು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಏನಾದರೂ ಪ್ರಶ್ನಿಸಿದರೂ ಅವನು ಉತ್ತರಿಸುತ್ತಿರಲಿಲ್ಲ. ಬಾಲನ ತಂದೆ ತಾಯಿ ಪರಸ್ಪರ ಬೇರ್ಪಟ್ಟಿದ್ದು, ಅವನು ತನ್ನ ತಾಯಿಯೊಂದಿಗೆ ವಾಸಿಸುತ್ತಿದ್ದನು. ದಿನಗೂಲಿ ಕೆಲಸ ಮಾಡುತ್ತಿದ್ದ ಅವನ ತಾಯಿಗೆ ಅವನೊಂದಿಗೆ ಹೆಚ್ಚು ಸಮಯ ಕಳೆಯಲಾಗುತ್ತಿರಲಿಲ್ಲ. ತಂದೆ–ತಾಯಿ ಜೊತೆಗಿದ್ದಾಗ ಪ್ರತಿದಿನವೆಂಬಂತೆ ಮದ್ಯವ್ಯಸನಿ ತಂದೆ, ತಾಯಿಗೆ ನೀಡುತ್ತಿದ್ದ ಹಿಂಸೆಗೆ ಆತ ಸಾಕ್ಷಿಯಾಗಿರುತ್ತಿದ್ದ. ಒಂದು ದಿನ ಅವನ ತಂದೆ, ಬಾಲ ಮತ್ತು ಅವನ ಸಹೋದರಿಯನ್ನು ಸ್ನಾನದ ಮನೆಯಲ್ಲಿ ಕೂಡಿಹಾಕಿ, ತಾಯಿಗೆ ಬೆಂಕಿ ಹಚ್ಚುವ ಪ್ರಯತ್ನ ಮಾಡಿದ್ದ. ಅದೃಷ್ಟವಶಾತ್ ಅವನ ತಾಯಿ ತಪ್ಪಿಸಿಕೊಂಡಿದ್ದಳು ಮತ್ತು ತಂದೆ

ಜೈಲುಪಾಲಾಗಿದ್ದ. ಅಂದಿನಿಂದ ಬಾಲ ಮಾತು ನಿಲ್ಲಿಸಿದ. ತಾಯಿ ಮತ್ತು ಸಹೋದರಿಯ ಹೊರತು ಬೇರೆ ಯಾರೊಂದಿಗೂ ಮಾತನಾಡುತ್ತಿರಲಿಲ್ಲ.

**ಮಧ್ಯಪ್ರವೇಶ**

ಶಿಕ್ಷಕರು ಪ್ರಜ್ಞಾಪೂರ್ವಕವಾಗಿ ಬಾಲನೊಂದಿಗೆ ನಿರಂತರವಾಗಿ ಮಾತನಾಡುತ್ತಲೇ ಇರುತ್ತಿದ್ದರು, ಮತ್ತು ಬೇರೆ ಮಕ್ಕಳ ಪ್ರಶ್ನೆಗೆ ಪ್ರತಿಕ್ರಿಯಿಸುವಂತೆ, ಆಟಿಕೆಗಳೊಂದಿಗೆ ಆಟವಾಡುವಂತೆ ಪ್ರೇರೇಪಿಸುತ್ತಿದ್ದರು. ಅಂಗನವಾಡಿ ಸಹಾಯಕಿಯೂ ಅವನ ಜೊತೆ ಕುಳಿತುಕೊಂಡು ಉತ್ತೇಜಿಸುತ್ತಿದ್ದರಲ್ಲದೆ ಬೇರೆ ಮಕ್ಕಳೊಂದಿಗೂ ಬೆರೆಯುವಂತೆ ನೋಡಿಕೊಳ್ಳುತ್ತಿದ್ದರು. ಅಲ್ಲದೆ, ಅಂಗನವಾಡಿ ಕೇಂದ್ರಕ್ಕೆ ಕೊಳಕಾಗಿ ಬರುತ್ತಿದ್ದ ಕಾರಣ ಅವನು ವೈಯಕ್ತಿಕ ಶುಚಿತ್ವದ ಕಡೆಗೂ ಗಮನಹರಿಸುವಂತೆ ಮಾಡುತ್ತಿದ್ದರು. ಕ್ರಮೇಣ ಆ ಸಹಾಯಕಿಯೊಂದಿಗೆ ಆಟವಾಡಲು ಶುರುಮಾಡಿದ ಬಾಲ ಇತರ ಮಕ್ಕಳೊಂದಿಗೆ ಕೂಡಾ ಬೆರೆಯಲಾರಂಭಿಸಿದ. ಕೆಲವೇ ತಿಂಗಳಲ್ಲಿ ಅವನು ಆಟೋಟ ಚಟುವಟಿಕೆ, ಕಲಾ ಚಟುವಟಿಕೆಗಳಲ್ಲಿ ಬಹಳ ಉಮೇದಿನಿಂದ ಪಾಲ್ಗೊಳ್ಳಲಾರಂಭಿಸಿದ ಮತ್ತು ತೆರೆದ ತುದಿಯುಳ್ಳ ಆಟಿಕೆಗಳಾದ ಬ್ಲಾಕ್ ಮತ್ತು ಸ್ಟ್ರಾಗಳ ಜೊತೆ ಕೈಚಳಕ ತೋರಿಸಲಾರಂಭಿಸಿದ.

**ಪರ್ಯಾಲೋಚನೆ**

ಶಿಕ್ಷಕಿ ಮತ್ತು ಸಹಾಯಕಿಯಿಂದ ನಿರಂತರ ಗಮನ, ಪ್ರೋತ್ಸಾಹ ಮತ್ತು ಸ್ಫೂರ್ತಿ ಸಿಕ್ಕಿದ್ದರಿಂದ ಬಾಲ ತನ್ನ ಮನೆಯ ಅನನುಕೂಲ ವಾತಾವರಣದಿಂದಾಗಿ ಅನುಭವಿಸುತ್ತಿದ್ದ ಖಿನ್ನತೆಯಿಂದ ಹೊರಬರಲು ಸಾಧ್ಯವಾಯಿತು. ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಇದು ಸುರಕ್ಷಿತ ಮತ್ತು ಹಿತಕರವಾದ ವಾತಾವರಣ ಎಂಬುದು ಖಾತರಿಯಾಗುತ್ತಲೇ ಬಾಲ ಆಟೋಟ ಮತ್ತು ಇತರ ಚಟುವಟಿಕೆಗಳಲ್ಲಿ ಎಲ್ಲಾ ಮಕ್ಕಳೊಂದಿಗೆ ಬೆರೆಯಲಾರಂಭಿಸಿದ. ಮಗುವಿನಲ್ಲಿ ಮೂಡಿದ ಆತ್ಮವಿಶ್ವಾಸದಿಂದಾಗಿ ಕಲಿಕೆ ಮತ್ತು ಬೆಳವಣಿಗೆಗೆ ಹೆಚ್ಚಿನ ಅವಕಾಶ ಸೃಷ್ಟಿಯಾಯಿತು.



**ನಿರ್ಣಯ**

ಅಂಗನವಾಡಿ ಕೇಂದ್ರಗಳಿಗೆ ಬರುವ ಬಹುತೇಕ ಮಕ್ಕಳು ಶಾಲೆಗೆ ಹೋಗುವ ಮೊದಲ ತಲೆಮಾರಿನವರಾಗಿದ್ದು, ಅವರ ಬದುಕು ಸಮಾಜೋ–ಸಾಂಸ್ಕೃತಿಕ ರೂಢಿಗಳ ತೊಡಕು ಮತ್ತು ಆರ್ಥಿಕ ನಿರ್ಬಂಧಗಳಿಂದ ಕೂಡಿರುತ್ತದೆ. ಮಕ್ಕಳ ಕಲಿಕಾ ಸಾಮರ್ಥ್ಯವು ಅವರ ಕುಟುಂಬದ ಸಮಾಜೋ–ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿರುವುದಿಲ್ಲ ಎಂಬುದನ್ನು ಸಾರುವ ಪುಟ್ಟ ಮಕ್ಕಳ ಪ್ರತಿನಿಧಿಗಳು ದೇವಿಕಾ ಮತ್ತು ಬಾಲ. ಸಮಾನ ಅವಕಾಶಗಳನ್ನು ನೀಡುತ್ತಾ ಸಂತೋಷಕರ ಕಲಿಕೆಯ ವಾತಾವರಣವನ್ನು ಒದಗಿಸುವ, ಕಾಳಜಿ ಮತ್ತು ಬೆಂಬಲ ನೀಡುವ ಶಿಕ್ಷಕರಿಂದ ಈ ಮಕ್ಕಳ ಬದುಕಿನಲ್ಲಿ ಭಾರೀ ದೊಡ್ಡ ಬದಲಾವಣೆಯನ್ನು ತರಲು ಸಾಧ್ಯ. ಅತ್ಯುನ್ನತ ಗುಣಮಟ್ಟದ ಇಸಿಇ ಕಾರ್ಯಕ್ರಮದ ಜಾರಿಯಲ್ಲಿ, ಅನುಭವಗಳು ಮತ್ತು ಸಮಗ್ರ ದೃಷ್ಟಿಕೋನದ ನಡುವಿನ ಸಂಬಂಧವನ್ನು ಅರ್ಥೈಸಿಕೊಂಡ ಮತ್ತು ಪ್ರತಿ ಮಗುವಿನ ಅವಶ್ಯಕತೆಯ ಬಗ್ಗೆ ಸಂವೇದನಾಶೀಲರಾಗಿರುವ ಸಮರ್ಥ ಶಿಕ್ಷಕರ ಪಾತ್ರ ಬಹಳ ಮುಖ್ಯ.

ಈ ಶಿಕ್ಷಕರು ಸುರಕ್ಷಿತ ಮತ್ತು ಸ್ವಚ್ಛ ವಾತಾವರಣ ಹಾಗೂ ಕರಿಹಲಗೆಗಳ ಉಪಯೋಗ, ಕಲಿಕಾ ಅವಕಾಶಗಳು, ವೃತ್ತಾಕಾರದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ, ಮುದ್ರಣಸ್ನೇಹಿ ವಾತಾವರಣ ಮತ್ತಿತರ ಪಠ್ಯ ಮೂಲಸೌಕರ್ಯಗಳ ನಿರ್ವಹಣೆ ಮೂಲಕ ಮಕ್ಕಳಿಗೆ ಅವರ ಸೀಮಿತ ಹಣಕಾಸಿನ ನಿರ್ಬಂಧಗಳ ನಡುವೆಯೇ ಕಲಿಕೆಯ ಅವಕಾಶ ಒದಗಿಸುತ್ತಾರೆ. ಅವರು ಅಂಗನವಾಡಿ ಕೇಂದ್ರ, ಪೋಷಕರು, ಸಮುದಾಯದ ನಡುವೆ ಒಂದು ಸೌಹಾರ್ದ ನಂಟನ್ನು ಸೃಷ್ಟಿಸುವರಲ್ಲದೆ, ಒಂದು ಮಗುವಿನ ಉತ್ಕೃಷ್ಟ ಬೆಳವಣಿಗೆಯನ್ನು ಕಾಯ್ದುಕೊಳ್ಳಲು ಈ ಎಲ್ಲದರ ನಡುವೆ ಅನ್ಯೋನ್ಯ ಸಂಬಂಧವನ್ನೂ ಬೆಸೆಯುತ್ತಾರೆ. ಮಕ್ಕಳು ಕಲಿಯುವಂತೆ ಮಾಡಬಲ್ಲ ಯಾವುದೇ ಸಮರ್ಥ ವಿಧಾನ ಇಲ್ಲ. ಪ್ರತಿ ಮಗುವೂ ಅನನ್ಯ ಮತ್ತು ಪ್ರತಿಯೊಬ್ಬರೂ ವಿಭಿನ್ನ ರೀತಿಯಲ್ಲಿ, ಪ್ರತ್ಯೇಕ ಸಮಯದಲ್ಲಿ ಮತ್ತು ವಿಭಿನ್ನ ಸ್ಥಳಗಳಲ್ಲಿ ಕಲಿಯುತ್ತಾರೆ. ಮಕ್ಕಳನ್ನು ಅನುಭವ, ಪ್ರಯೋಗ ಮತ್ತು ತಮ್ಮ ಸುತ್ತಲಿನ ಸಂಗತಿಗಳನ್ನು ಪ್ರಶ್ನಿಸಲು ಉತ್ತೇಜಿಸುವಂತಹ ಮತ್ತು ಬೆಂಬಲಿಸುವಂತಹ ವಾತಾವರಣವನ್ನು ಶಿಕ್ಷಕರು ಸೃಷ್ಟಿಸ–ಬೇಕಾಗುತ್ತದೆ. ಆಗ ಪ್ರತಿ ಮಗುವೂ ಕಲಿಯಬಲ್ಲದು.

**ಆರಂಭಿಕ ಬಾಲ್ಯ ಶಿಕ್ಷಣದ ಉಪಕ್ರಮ**

೩ರಿಂದ ೬ರ ವಯಸ್ಸಿನ ಮಕ್ಕಳ ಸಮಗ್ರ ಬೆಳವಣಿಗೆಯನ್ನು ಗುರಿಯಾಗಿಟ್ಟುಕೊಂಡು ಅಂಗನವಾಡಿ ಕೇಂದ್ರಗಳನ್ನು ಸ್ಪಂದನಶೀಲ ಕಲಿಕಾ ಕೇಂದ್ರಗಳಾಗಿ ಮಾರ್ಪಡಿಸುವ ಗುರಿಯಾಗಿಟ್ಟುಕೊಂಡು ಚಿಂತನಶೀಲ ವೃತ್ತಿಪರರಾಗಬೇಕೆಂಬ ನಿಟ್ಟಿನಲ್ಲಿ ಅಂಗನವಾಡಿ ಶಿಕ್ಷಕರ ಕಲಿಕಾ ಸಾಮರ್ಥ್ಯದ ಬೆಳವಣಿಗೆಯ ಮೇಲೆ ಸಂಗಾರೆಡ್ಡಿ ಬಾಲ್ಯಪೂರ್ವ ಶಿಕ್ಷಣ ಉಪಕ್ರಮವು (The Sangareddy Early Childhood Education Initiative) ಗಮನ ಕೇಂದ್ರೀಕರಿಸುತ್ತದೆ. ಈ ಮಧ್ಯಪ್ರವೇಶವು ಐಸಿಡಿಎಸ್‌ನ ಪ್ರಸ್ತುತ ವ್ಯವಸ್ಥಿತ ಸಂಪನ್ಮೂಲಗಳ ಚೌಕಟ್ಟಿನಲ್ಲೇ ಇರುತ್ತದೆ. ಶಿಕ್ಷಕರ ಸಾಮರ್ಥ್ಯ ಬೆಳವಣಿಗೆಯು ಗುಣಮಟ್ಟದ ಆರಂಭಿಕ ಬಾಲ್ಯ ಶಿಕ್ಷಣ ಕಾರ್ಯಕ್ರಮ ಮತ್ತು ಮಕ್ಕಳಿಗೆ ಲಭ್ಯವಿರುವ ಆರಂಭಿಕ ಬಾಲ್ಯ ಶಿಕ್ಷಣದ ಅವಕಾಶಗಳನ್ನು ಕೇಂದ್ರಿತವಾಗಿರುತ್ತದೆ. ಇಂಥ ಸಮಗ್ರವಾದ 'ಸೇವಾನಿರತರ ಸಾಮರ್ಥ್ಯ ಅಭಿವೃದ್ಧಿ ಮಾದರಿಯು (In-service capacity development model) ಮಕ್ಕಳಿಗೆ ಸಮರ್ಪಕ ಪಠ್ಯ ಅಭಿವೃದ್ಧಿ–ಪಡಿಸುವಲ್ಲಿ ಶಿಕ್ಷಕರ ಕೌಶಲವನ್ನು ಪರಿಣಾಮಕಾರಿಯಾಗಿ ಬೆಳೆಸುವಲ್ಲಿ ನೆರವಾಗಬಲ್ಲದು ಎಂಬುವುದು ನಮ್ಮ ಅನುಭವವಾಗಿದೆ.

ತೆಲಂಗಾಣದ ಸಂಗಾರೆಡ್ಡಿ ಜಿಲ್ಲೆಯಾದ್ಯಂತ ಎಲ್ಲಾ ಶಿಕ್ಷಕರಿಗೆ ಸೇವಾನಿರತ ಶಿಕ್ಷಕರ ಸಾಮರ್ಥ್ಯ ಅಭಿವೃದ್ಧಿಯನ್ನು ಒಂದು ಬಹುಮುಖಿ ಮಾದರಿಯಾಗಿ ಬಳಸಿಕೊಳ್ಳಲಾಗುತ್ತಿದೆ. ಕಾರ್ಯಾ–ಗಾರಗಳು, ಕೇಂದ್ರ ಮಟ್ಟದ ಕಾರ್ಯಕ್ರಮಗಳು, ವಲಯ ಮಟ್ಟದ ಸಭೆಗಳು, ಯೋಜನಾ ಸಭೆಗಳು, ಇಸಿಸಿಇ ದಿನಾಚರಣೆಗಳು, ಬಾಲಮೇಳಗಳು, ವಿಚಾರ ಸಂಕಿರಣಗಳು, ಶಿಕ್ಷಕರ ಸಮ್ಮೇಳನಗಳು ಮತ್ತು ನಿಯತಕಾಲಿಕೆಗಳಂಥ ಬಹುಮುಖಿ ವೇದಿಕೆಗಳಲ್ಲಿ ನಮ್ಮ

ಕಾರ್ಯಕ್ರಮದ ಮುಖ್ಯಾಂಶಗಳನ್ನು ಶಿಕ್ಷಕರ ಜೊತೆಗೆ ಹಂಚಿಕೊಂಡು ನೆರವಾಗುವುದರಿಂದ ಅವರ ನಡುವೆ ಕಲಿಕೆಯ ಉತ್ತಮ ಅಭ್ಯಾಸಗಳು ಸಾಧ್ಯವಾಗುತ್ತದೆ. ಅನುಭವಾಧಾರಿತ ವಿಧಾನದಲ್ಲಿ ಶಿಕ್ಷಕರು ಸ್ವಾನುಭವದ ಚಟುವಟಿಕೆಗಳ ಮೂಲಕ ಕಠಿಣವಾದ ಜೀವನ ಕೌಶಲಗಳನ್ನು ಮಕ್ಕಳಿಗೆ ಕಲಿಸಲು ಅವಕಾಶವಿರುತ್ತದೆ.

**ಶಿಕ್ಷಕರ ಪ್ರಭಾ ವಲಯದಲ್ಲಿ ಮಕ್ಕಳ ಕಲಿಕೆಯನ್ನು ಸಾಧ್ಯವಾಗಿಸುವ ಅಂಶಗಳು**

ಅಂಗನವಾಡಿ ಕೇಂದ್ರಗಳಿಗೆ ಹಾಜರಾಗುವ ಮಕ್ಕಳ ಕಲಿಕೆ ಮತ್ತು ಬೆಳವಣಿಗೆಯನ್ನು ಸಾಧ್ಯವಾಗಿಸಬಲ್ಲ ಒಂದು ಉತ್ತಮ ಇಸಿಇ ಕಾರ್ಯಕ್ರಮವು ಶಿಕ್ಷಕರನ್ನು ಆಧರಿಸಿರುತ್ತದೆ. ಅಂತಹ ಕೆಲವು ಪ್ರಮುಖ ಅಂಶಗಳನ್ನು ಇಲ್ಲಿ ಕೊಡಲಾಗಿದೆ. ಇದನ್ನೇ ಒಂದು ಮಾರ್ಗಸೂಚಿಯಾಗಿ ಬಳಸಿ ಒಬ್ಬ ಶಿಕ್ಷಕ/ಕಿಯು ಈ ಕಾರ್ಯ-ಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು ಸಾಧ್ಯ..

ಪ್ರತಿದಿನ, ಶಿಕ್ಷಕರು ಸ್ವಚ್ಛ ಮತ್ತು ಪೌಷ್ಟಿಕ ಆಹಾರವನ್ನು ಕೊಡುತ್ತಾರೆ ಮತ್ತು ಮಕ್ಕಳು ಊಟಕ್ಕೆ ಮೊದಲು ಮತ್ತು ನಂತರ ತಮ್ಮ ಕೈಗಳನ್ನು ತೊಳೆಯುವುದನ್ನು ಖಾತರಿಪಡಿಸಿಕೊಳ್ಳಬೇಕು ಹಾಗೂ ಊಟದ ಬಳಿಕ ಕನಿಷ್ಠ ಒಂದು ಗಂಟೆ ವಿಶ್ರಾಂತಿ ನೀಡಬೇಕು.

* ಪ್ರತಿ ತಿಂಗಳು ಶಿಕ್ಷಕಿಯು ಮಕ್ಕಳ ಬೆಳವಣಿಗೆಯನ್ನು (ಎತ್ತರ ಮತ್ತು ತೂಕ) ಅಳತೆ ಮಾಡಬೇಕು.
* ಶಿಕ್ಷಕಿಯು ಕೇಂದ್ರದಲ್ಲಿ ಒಂದು ಪ್ರಥಮ ಚಿಕಿತ್ಸಾ ಪೆಟ್ಟಿಗೆಯನ್ನು ಹೊಂದಿರಬೇಕು ಮತ್ತು ಕೇಂದ್ರ ಹಾಗೂ ಅದರ ಸುತ್ತಮುತ್ತ ಸ್ವಚ್ಛ, ಸುರಕ್ಷಿತ ವಾತಾವರಣವನ್ನು ಕಲ್ಪಿಸಬೇಕು.
* ಶಿಕ್ಷಕಿಯು ಒಂದು ವಿಷಯಾಧಾರಿತ ವೇಳಾಪಟ್ಟಿಯನ್ವಯ ಉತ್ತೇಜನಕಾರಿ ಕಲಿಕಾ ವಾತಾವರಣವನ್ನು ಸಂಘಟಿಸುತ್ತಾರೆ ಮತ್ತು ಆಟದ ಪರಿಕರಗಳು ಮಕ್ಕಳಿಗೆ ದೊರಕುವಂತೆ ನೋಡಿಕೊಳ್ಳುತ್ತಾರೆ.
* ಶಿಕ್ಷಕರು ಮಕ್ಕಳ ಚಟುವಟಿಕೆಗಳನ್ನು ದಾಖಲಿಸಿ ಪ್ರದರ್ಶಿಸುತ್ತಾರೆ.
* ಶಿಕ್ಷಕ/ಕಿ ಮಕ್ಕಳನ್ನು ಕಾಳಜಿಯಿಂದ ನೋಡಿಕೊಳ್ಳುತ್ತಾರೆ ಮತ್ತು ಸಕಾರಾತ್ಮಕ ವಿಧಾನಗಳ ಮೂಲಕ ಶಿಸ್ತು ಕಲಿಸುತ್ತಾರೆ.
* ಶಿಕ್ಷಕ/ಕಿಯು ಮಕ್ಕಳ ಆಟ ಮತ್ತು ಊಟದ ವೇಳೆ ಪರಸ್ಪರ ಸಾಮಾಜಿಕ ಸಂವಾದಕ್ಕೆ ಅವಕಾಶ ಕಲ್ಪಿಸುತ್ತಾರೆ.
* ಅಂಗನವಾಡಿ ಕೇಂದ್ರದಲ್ಲಿ ಪ್ರತಿ ದಿನ ಕನಿಷ್ಠ ಮೂರರಿಂದ ನಾಲ್ಕು ಗಂಟೆ ಇಸಿಇ ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರುತ್ತಾರೆ.



**ಉತ್ತಮ ಇಸಿಇ ಕಾರ್ಯಕ್ರಮಕ್ಕೆ ದಾರಿ ಮಾಡಿಕೊಡುವ ಪ್ರಮುಖ ಬೋಧನಾ ಅಭ್ಯಾಸಗಳು**

ಒಂದು ಸಣ್ಣ ಹಳ್ಳಿಯಲ್ಲಿ ಶಿಕ್ಷಕಿಯಾಗಿರುವ ಶೈಲಜಾ, ಹೆಚ್ಚಿನ ಮಕ್ಕಳು ಕೇಂದ್ರಕ್ಕೆ ಬರುವವರೆಗೂ ಇತರ ಮಕ್ಕಳನ್ನು ಕಲಿಕಾ ತಾಣಗಳಲ್ಲಿ ಮುಕ್ತವಾಗಿ ಆಟವಾಡಲು ಬಿಡುತ್ತಾರೆ. ಮಕ್ಕಳು ತಮ್ಮ ಪಾಡಿಗೆ ಆಟವಾಡುತ್ತಾ ತಮ್ಮದೇ ಅನುಭವಗಳನ್ನು ಪಡೆಯಲು ಅವಕಾಶವಾಗುವಂತೆ ಅವರು ತರಗತಿ ಕೊಠಡಿಯಲ್ಲಿ ಬೇರೆಬೇರೆ ತಾಣಗಳನ್ನು ನಿರ್ಮಿಸಿದ್ದರು. ಮಕ್ಕಳು ಪರಸ್ಪರ ಚರ್ಚಿಸುತ್ತಾ, ಸಹಕರಿಸುತ್ತಾ, ಹಂಚಿಕೊಳ್ಳುತ್ತಾ, ಗುಂಪಿನಲ್ಲಿ ಆಟವಾಡುತ್ತಾ, ತಮ್ಮ ಸರದಿಗೆ ಕಾಯುತ್ತಾ ಸಾಮಾಜಿಕ ಸಾಮರ್ಥ್ಯಗಳನ್ನು ಹೆಚ್ಚಿಸಿ-ಕೊಳ್ಳುತ್ತಿರುತ್ತಾರೆ. ಈ ಮುಕ್ತ ಆಟೋಟದೊಂದಿಗೆ ಶಿಕ್ಷಕಿಯು ಒಳಾಂಗಣ ಮತ್ತು ಹೊರಾಂಗಣ ಆಟಗಳನ್ನೂ ಹೇಳಿಕೊಡುತ್ತಾರೆ.

ಎಲ್ಲಾ ಮಕ್ಕಳು ಕೇಂದ್ರಕ್ಕೆ ಬರುತ್ತಿದ್ದಂತೆ ಶಿಕ್ಷಕ/ಕಿಯು ಎಲ್ಲರನ್ನೂ ವೃತ್ತಾಕಾರದಲ್ಲಿ ಕುಳ್ಳಿರಿಸಿ, ಪ್ರತಿಯೊಬ್ಬರೂ ಸರದಿಯಲ್ಲಿ ಹೋಗಿ ಗೋಡೆಯಲ್ಲಿ ಅಂಟಿಸಿರುವ ಹೆಸರುಗಳ ತಖ್ತೆಯಲ್ಲಿ ತಮ್ಮ ಸಹಿ ಹಾಕುವ ಮೂಲಕ ಹಾಜರಿ ಪಡೆಯುತ್ತಾರೆ. ಹೀಗೆ, ಆ ಶಿಕ್ಷಕಿಯು ವಿವಿಧ ಚಟುವಟಿಕೆಗಳ

ಮೂಲಕ ಅಕ್ಷರಾಭ್ಯಾಸದ ಅನುಭವವನ್ನೂ ಸಂಯೋಜಿಸಿ ಮಕ್ಕಳಿಗೆ ಕೊಡುತ್ತಿದ್ದಾರೆ. ವೃತ್ತದ ಸಮಯ ('circle time') ಅಂಗವಾಗಿ ಕತೆ, ಹಾಡು, ಸಂಖ್ಯಾಧಾರಿತ ಚಟುವಟಿಕೆಗಳ ಮೂಲಕ ಅವರು ಮಾತುಕತೆಯನ್ನು ಆರಂಭಿಸುತ್ತಾರೆ. ಈ ಗುಂಪು ಚಟುವಟಿಕೆಗಳ ಭಾಗವಾಗಿ ಅವರು ಮೂರ್ತ ವಸ್ತುಗಳು ಮತ್ತು ಮುದ್ರಣ ಸಾಮಗ್ರಿಗಳನ್ನು ಬಳಸಿ ಆಲಿಸುವ, ಮಾತನಾಡುವ ಮತ್ತು ಆಟದ ಮೇಲೆ ಗಮನ ಕೊಡುವಂತಹ ಅವಕಾಶ ಸೃಷ್ಟಿಸುತ್ತಾರೆ.

ಮಕ್ಕಳಿಗೆ ಕಥೆ ಪುಸ್ತಕಗಳನ್ನು ಕೊಟ್ಟು ಅದರಲ್ಲಿನ ಚಿತ್ರಗಳನ್ನು ಓದುತ್ತಾರೆ, ಓದುವಂತೆ ನಟಿಸುತ್ತಾರೆ ಇತ್ಯಾದಿ. ಹವಾಮಾನ ಕೋಷ್ಟಕ, ನಿಯಮಗಳ ಕೋಷ್ಟಕ, ಪ್ರದರ್ಶನ ಫಲಕ ರಚನೆಯಂತಹ ಮಕ್ಕಳ ಕ್ರಿಯಾತ್ಮಕ ಅವಕಾಶಗಳನ್ನು ಹೆಚ್ಚಿಸುವ ಇತರ ಚಟುವಟಿಕೆಗಳೂ ಇರುತ್ತವೆ. ಮಕ್ಕಳು ವಿವಿಧ ಭಾವನೆಗಳನ್ನು ಗುರುತಿಸಿ, ಅರ್ಥೈಸಿಕೊಳ್ಳುವಂತೆ ಮಾಡಿ ಅವುಗಳನ್ನು ತಮ್ಮ ದೈನಂದಿನ ಬದುಕಿನ ಅನುಭವದೊಂದಿಗೆ ಜೋಡಿಸುವ ಅವಕಾಶವನ್ನು ಶಿಕ್ಷಕಿ ಒದಗಿಸುತ್ತಾರೆ. ಅವರು ಪ್ರತಿದಿನ ಮಕ್ಕಳಲ್ಲಿ ಕೇಳುವ ಸಾಮಾನ್ಯ ಪ್ರಶ್ನೆಯೆಂದರೆ 'ಇವತ್ತು ಹೇಗಿದ್ದೀರಿ? ಎಂದು. ಇದಕ್ಕೆ ಪ್ರತಿಯಾಗಿ ಮಗು ಯಾವುದಾದರೂ ಸೂಕ್ತ ಭಾವನೆಯನ್ನು ಸೂಚಿಸುವ ಒಂದು ಕಾರ್ಡ್‌ನ್ನು ಹೆಕ್ಕಿ, ಆ ಕ್ಷಣದ ಭಾವನೆಗೆ ಕಾರಣವನ್ನು ವಿವರಿಸುತ್ತದೆ. ಮಾಡಿ ಕಲಿಯುವ ಅನುಭವ, ಚಿಂತನಶೀಲ ಪ್ರಶ್ನೆಗಳು, ಉಲ್ಲಾಸ, ಅನುಪಾಲನಾ ಚಟುವಟಿಕೆಗಳು, ನಡವಳಿಕೆಗಳ ಸೂಕ್ತ ಪ್ರಾತ್ಯಕ್ಷಿಕೆ, ಮುಕ್ತಆಟದ ಅವಧಿಗಳು, ಗರಿಷ್ಠ ಮತ್ತು ಕನಿಷ್ಠ ತೊಡಗಿಸಿಕೊಳ್ಳುವಿಕೆ ಚಟುವಟಿಕೆಗಳ ಸಮತೋಲನ, ಮುಕ್ತ ಹಾಗೂ ನಿರ್ದೇಶಿತ ಚಟುವಟಿಕೆಗಳು – ಇವು ಆ ಶಿಕ್ಷಕಿ ಕೈಗೊಳ್ಳುವ ದೈನಂದಿನ ವಿಧಾನಗಳು.

ಒಂದು ಅಂಗನವಾಡಿ ಕೇಂದ್ರದಲ್ಲಿ ಶಿಕ್ಷಕಿ ಪ್ರತಿದಿನ ಪಾಲಿಸಬೇಕಾದ ಕೆಲವು ಸರಳ ಆದರೆ ಪ್ರಮುಖ ಅಂಶಗಳನ್ನು ನಮ್ಮ ಅನುಭವದ ಆಧಾರದಲ್ಲಿ ರೂಪಿಸಿ ಇಲ್ಲಿ ಕೊಡಲಾಗಿದೆ. ಇವುಗಳು ಮಕ್ಕಳ ಬೆಳವಣಿಗೆಯ ಮೇಲೆ ಗಮನಾರ್ಹ ಪರಿಣಾಮ ಬೀರಬಲ್ಲವು.

| **ಅಭ್ಯಾಸ** | **ಅವಧಿ** |
|---|---|
| ಮಾರ್ಗದರ್ಶನದೊಂದಿಗೆ ಒಳಾಂಗಣ ಮತ್ತು ಹೊರಾಂಗಣ ಆಟೋಟಗಳಿಗೆ ಅವಕಾಶ ಕಲ್ಪಿಸುವುದು | ೬೦ ನಿಮಿಷ |
| ಗುಂಪು ಚಟುವಟಿಕೆಯಲ್ಲಿ ಮಕ್ಕಳಿಗೆ ಪರಸ್ಪರ/ಎಲ್ಲರೊಡನೆ ಅರ್ಥಪೂರ್ಣ ಸಂವಾದಕ್ಕೆ ಅವಕಾಶ ಕೊಡುವುದು | ದಿನಕ್ಕೆ ೬೦ ನಿಮಿಷ |
| ಪ್ರತಿದಿನ ಮಕ್ಕಳ ವರ್ತನೆಯನ್ನು ಗಮನಿಸುವುದು ಮತ್ತು ಸಾಮಾಜಿಕ ಕೌಶಲಗಳ ಬಗ್ಗೆ ಮಾರ್ಗದರ್ಶನ | ನಿರಂತರ |
| ಮಕ್ಕಳಿಗೆ ಕ್ರಿಯಾಶೀಲ ಅನುಭವ ಕಲ್ಪಿಸಿಕೊಡುವುದು | ೨೦ ನಿಮಿಷ |
| ಮಕ್ಕಳಿಗೆ ಜರೂರಿನ ಅಕ್ಷರಜ್ಞಾನದ ಅನುಭವ ಕಲ್ಪಿಸಿಕೊಡುವುದು | ೩೦ ನಿಮಿಷ |
| ಸಂಖ್ಯೆಗಳ ಪರಿಚಯ ಕೌಶಲಕ್ಕೆ ಪೂರಕವಾಗಿ ಪ್ರಯತ್ನ ಮತ್ತು ಪ್ರಯೋಗ ಕೈಗೊಳ್ಳುವಂತೆ ನೋಡಿಕೊಳ್ಳುವುದು | ೩೦ ನಿಮಿಷ |



**ಒಂದು ಉತ್ತಮ ಇಸಿಇ ಕಾರ್ಯಕ್ರಮಕ್ಕೆ ಕಾರಣವಾಗುವ ಅಂಶಗಳು**

ತರಬೇತಿ ಪಡೆದ ಮತ್ತು ಸಮರ್ಥ ಶಿಕ್ಷಕರು ಒದಗಿಸುವ ಒಂದು ಪರಿಣಾಮಕಾರಿಯಾದ, ಸಮರ್ಪಕವಾಗಿ ವಿನ್ಯಾಸಗೊಂಡ ಇಸಿಇ ಕಾರ್ಯಕ್ರಮವು, ಅನುಭವ ಮತ್ತು ಸಮಗ್ರ ಬೆಳವಣಿಗೆಯ ನಡುವಿನ ಕೊಂಡಿಯನ್ನು ಅರ್ಥ ಮಾಡಿಕೊಳ್ಳಬಲ್ಲ ತರಬೇತಿ ಪಡೆದ ಮತ್ತು ಸಮರ್ಥ ಶಿಕ್ಷಕ/ಕಿ ಇರಬೇಕು ಹಾಗೂ ಮಕ್ಕಳ ಅವಶ್ಯಕತೆಯನ್ನು ಅರ್ಥ ಮಾಡಿಕೊಳ್ಳುವಂತಿರಬೇಕು. ಕೆಲವು ಮುಖ್ಯ ಸಂಗತಿಗಳು ಇಲ್ಲಿವೆ:

**ಮೂಲ ಸೌಕರ್ಯ**

ಸಣ್ಣ ಮಕ್ಕಳಿಗೆ ಅವರ ಕಲಿಕೆ ಮತ್ತು ಬೆಳವಣಿಗೆಗೆ ಪೂರಕವಾದ ವಿಶಾಲ, ಸುರಕ್ಷಿತವಾದ ಹಾಗೂ ಆಧರಿಸುವಂಥ ಒಂದು ಭೌತಿಕ ವಾತಾವರಣದ ಅವಶ್ಯಕತೆಯಿದೆ. ಸಾಕಷ್ಟು ಸ್ಥಳಾವಕಾಶ, ಸ್ವಚ್ಛವಾದ ಶೌಚಾಲಯ, ಸಂಚಾರಿ ಕರಿಹಲಗೆ, ಕಲಿಕಾ ತಾಣಗಳು, ಆಸನ ವ್ಯವಸ್ಥೆ ಇತ್ಯಾದಿಗಳು ಒಂದು ಆರಂಭಿಕ ಕಲಿಕಾ ವಾತಾವರಣವನ್ನು ಒಳಗೊಂಡಿರಲೇ-ಬೇಕಾದ ಆವಶ್ಯಕ ಸೌಕರ್ಯಗಳಾಗಿವೆ. ಇದಕ್ಕೆ ಪೂರಕವಾಗಿ ಮಕ್ಕಳ ಕಲಿಕೆ ಮತ್ತು ಆಟಕ್ಕೆ ಒಳಾಂಗಣ ಹಾಗೂ ಹೊರಾಂಗಣಗಳಲ್ಲಿ ಯಥೇಚ್ಛವಾದ ದೃಶ್ಯ, ಸ್ಪರ್ಶ ಸಂಬಂಧಿಯಾದ ಬರವಣಿಗೆಯ ಪರಿಕರಗಳ ಅಗತ್ಯವಿದೆ.

ಸುನೀತಾ, ಎಂಟು ವರ್ಷಗಳ ಹಿಂದೆ ಸಣ್ಣ ಬಾಡಿಗೆಯ ಕೊಠಡಿಯಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡಲು ಶುರು ಮಾಡಿದ್ದರು. ಅಲ್ಲಿ ಶಾಲಾಪೂರ್ವ ಚಟುವಟಿಕೆಗಳನ್ನು ನಡೆಸಲು ಅವಕಾಶವಿರಲಿಲ್ಲ. ಅವರು ಬೇರೆಡೆಗೆ ಕೇಂದ್ರವನ್ನು ಸ್ಥಳಾಂತರಿಸಲು ಇಚ್ಛಿಸಿದರೂ ಅಂಗನವಾಡಿ ಕೇಂದ್ರಕ್ಕೆ ಸ್ಥಳ ಬಾಡಿಗೆಗೆ ಕೊಡಲು ಜನರು ಒಪ್ಪುತ್ತಿರಲಿಲ್ಲ. ಅಲ್ಲಿನ ಪ್ರಾಥಮಿಕ ಶಾಲೆಯ ಅಡುಗೆ ಕೋಣೆ ಬಳಸದೇ ಇರುವುದು ಗಮನಕ್ಕೆ ಬಂದಾಗ, ಊರವರ ಬೆಂಬಲದೊಂದಿಗೆ ಶಾಲಾ ಮುಖ್ಯೋಪಾಧ್ಯಾಯರನ್ನು ಭೇಟಿಯಾಗಿ ಅಂಗನವಾಡಿ ಕೇಂದ್ರವನ್ನು ಅಲ್ಲಿಗೆ ಸ್ಥಳಾಂತರಿಸಲು ಅನುಮತಿ ಕೋರಿ ಮನವಿ ಮಾಡಿದರು. ಕೆಲವು ತಿಂಗಳು ಕಳೆದರೂ ಯಾವುದೇ ಪ್ರತಿಕ್ರಿಯೆ ಬಂದಿರಲಿಲ್ಲ. ಇದೇ ವೇಳೆ ಅಂಗನವಾಡಿ ಕೇಂದ್ರದ ಮಕ್ಕಳ ಉತ್ತಮ ಕಲಿಕೆಗೆ ಅವಕಾಶಗಳನ್ನು ಸೃಷ್ಟಿಸಲು ಸುನೀತಾ ಮಾಡುತ್ತಿರುವ ಪ್ರಯತ್ನಗಳನ್ನೆಲ್ಲಾ ಆ ಮುಖ್ಯೋಪಾಧ್ಯಾಯರು ಗಮನಿಸುತ್ತಿದ್ದರು.

ಆ ಅಂಗನವಾಡಿ ಕೇಂದ್ರಕ್ಕೆ ಹೋಗಿ ತಮ್ಮ ಶಾಲೆಯಲ್ಲಿ ಒಂದನೇ ತರಗತಿಗೆ ದಾಖಲಾದ ಮಕ್ಕಳು ಹಾಗೂ ಕೇಂದ್ರಕ್ಕೆ ಹೋಗಿರದ ಒಂದನೇ ತರಗತಿ ಮಕ್ಕಳಿಗೂ ಸಾಮರ್ಥ್ಯದಲ್ಲಿ ಇರುವ ವ್ಯತ್ಯಾಸವನ್ನೂ ಆ ಮುಖ್ಯೋಪಾಧ್ಯಾಯರು ಗಮನಿಸಿದ್ದರು. ಹಾಗಾಗಿ, ಶಾಲೆಯಲ್ಲೇ ಬಳಸದೇ ಇದ್ದ ಉತ್ತಮವಾದ ಮತ್ತೊಂದು ಕೊಠಡಿಯನ್ನು ಅಂಗನವಾಡಿ ಕೇಂದ್ರಕ್ಕಾಗಿ ಅವರು ಬಿಟ್ಟುಕೊಟ್ಟರು. ಸುನೀತಾ ತಿಂಗಳೊಳಗೆ ಆ ಕೊಠಡಿಯನ್ನು ಸಣ್ಣ ಮಕ್ಕಳ ಕಲಿಕೆಗೆ ಪೂರಕವಾದ, ಸಾಕ್ಷರ ಶ್ರೀಮಂತವಾದ ಒಂದು ಸ್ಪಂದನಶೀಲ ಸ್ಥಳವಾಗಿ ಬದಲಾಯಿಸಿದರು. ಯೋಗ್ಯ ಸ್ಥಳಕ್ಕೆ ಕೇಂದ್ರವನ್ನು ಸ್ಥಳಾಂತರಿಸಬೇಕೆಂಬ ಸುನೀತಾರ ದೃಢವಾದ ಪ್ರಯತ್ನದಿಂದಾಗಿ, ಮಕ್ಕಳ ದೈನಂದಿನ ಚಟುವಟಿಕೆಗೆ ಅವಶ್ಯಕವಾಗಿದ್ದ ಉತ್ತಮ ವಾತಾವರಣದಲ್ಲಿ ಕೇಂದ್ರವು ನಡೆಯುವಂತಾಯಿತು.

**ಪಠ್ಯಕ್ರಮ**

ಮಕ್ಕಳ ಸಮಗ್ರ ಬೆಳವಣಿಗೆಗೆ ಸಮರ್ಪಕವಾದ ವಿಕಾಸಾತ್ಮಕ ಪಠ್ಯಕ್ರಮವೂ ಅತ್ಯವಶ್ಯ. ಅನುಭವಾಧಾರಿತ ಚರ್ಚಾತ್ಮಕ ಬೋಧನೆ, ಕ್ರೀಡೆ ಆಧಾರಿತ ಚಟುವಟಿಕೆಗಳು, ಹೊರಾಂಗಣ ಚಟುವಟಿಕೆಗಳು ಮತ್ತು ಪರಿಕರಗಳೊಂದಿಗೆ ತೊಡಗಿಸಿ-ಕೊಳ್ಳುವುದು ಕೂಡಾ ಒಳಗೊಂಡಿರಬೇಕು.

ಬಾಲಮಣಿ ಟೀಚರ್, ಕಲಿಕೆ ಮತ್ತು ಬೋಧನಾ ಪರಿಕರ (ಟಿ.ಎಎಲ್.ಎಂ – Teaching-Learning Materials - TLM)ಗಳ ಬಳಕೆಯ ಮೂಲಕ ಮಕ್ಕಳ ಬೆಳವಣಿಗೆಗೆ ಸಾಕಷ್ಟು ಅವಕಾಶ ಸೃಷ್ಟಿಸುತ್ತಾರೆ. ಅವರು ಬಣ್ಣದ ಬಟ್ಟೆಯ ತುಂಡುಗಳು, ಮೊಟ್ಟೆಯ ತಟ್ಟೆಗಳು, ಕಾಗದದ ಲೋಟಗಳನ್ನು ಬಳಸಿ ಮಕ್ಕಳಿಗೆ ಹೊಂದಾಣಿಕೆ, ವರ್ಗೀಕರಣ, ಮಾದರಿಗಳ ತಯಾರಿ ಮೂಲಕ ಮಕ್ಕಳ ಪೂರ್ವ ಸಂಖ್ಯಾಶಾಸ್ತ್ರದ ಸಾಮರ್ಥ್ಯವನ್ನು ಹೇಳಿಕೊಡುತ್ತಾರೆ. ಹೀಗೆ ಬಗೆಬಗೆಯ ಪರಿಕರಗಳ ಜೊತೆಗೆ ವಿವಿಧ ಚಟುವಟಿಕೆಗಳಲ್ಲಿ ಮಕ್ಕಳು ಭಾಗಿಯಾದಾಗ ಅವರ ಗಮನದ ಅವಧಿ ಏರಿಕೆಯಾಗಿ, ಅಲ್ಪಾವಧಿಯಲ್ಲೇ ಹಲವು ಪರಿಕಲ್ಪನೆಗಳನ್ನು ಬೆಳೆಸಲು ಶಿಕ್ಷಕರಿಗೂ ಸಾಧ್ಯವಾಗಿದೆ. ಟಿಎಲ್ಎಂಗಳ ಅಲಭ್ಯತೆಯು ಕಾರಣಕ್ಕೆ ಅವರು ನಿರಾಶರಾಗದೆ ಸ್ಥಳೀಯವಾಗಿ ಲಭ್ಯವಿರುವ ಸಾಮಗ್ರಿಗಳನ್ನೇ ಬಳಸಿ ಖರ್ಚಿಲ್ಲದ ಸರಳ ಉಪಾಯಗಳೊಂದಿಗೆ ಮಕ್ಕಳಿಗೆ ಸ್ವಾನುಭವದೊಂದಿಗೆ ಕಲಿಯುವ ವಾತಾವರಣ ಕಲ್ಪಿಸಿದ್ದಾರೆ.

**ಶಿಕ್ಷಕರು**

ಬಹುತೇಕ ಅಂಗನವಾಡಿ ಶಿಕ್ಷಕಿಯರು ಕಷ್ಟಕರ ಪರಿಸ್ಥಿತಿಯಲ್ಲಿಯೂ ಒಳ್ಳೆಯ ರೀತಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಕಲಿಕಾ ಅನುಭವಕ್ಕೆ ಶಿಕ್ಷಕರು ಅವಿಭಾಜ್ಯ ಅಂಗವಾಗಿದ್ದು, ಅವರಿಗೆ ನಮ್ಮ ವಿಶ್ವಾಸ ಮತ್ತು ಬೆಂಬಲದ ಅಗತ್ಯವಿರುತ್ತದೆ. ಶಾಲಾ ಅಧ್ಯಾಪಕರ ಕೆಲಸದಷ್ಟೇ ಸಂಕೀರ್ಣವಾಗಿರುವ ಅಂಗನವಾಡಿ ಶಿಕ್ಷಕಿಯರ ಕೆಲಸವನ್ನು ಗುರುತಿಸಬೇಕಾದ ಅವಶ್ಯಕತೆ ಇದೆ. ಹೊಸ ಶಿಕ್ಷಕಿಯರಿಗೆ ವೃತ್ತಿಪರ ವಿದ್ಯಾರ್ಹತೆ ಬೇಕಾಗಿದ್ದರೆ, ಈಗಾಗಲೇ ಸೇವೆ ಸಲ್ಲಿಸುತ್ತಿರುವವರು ಇನ್ನೂ ಉತ್ತಮ ಬೋಧಕರಾಗಲು ಕಾಲ ಕಾಲಕ್ಕೆ ಉತ್ತಮ ಶಿಕ್ಷಣ ತಜ್ಞರಿಂದ ತರಬೇತಿ ಕೊಡಬೇಕಾಗುತ್ತದೆ.

**ಕುಟುಂಬ**

ಒಂದು ಮಗುವಿನ ಕಲಿಕೆ ಮತ್ತು ಬೆಳವಣಿಗೆಯ ವ್ಯವಸ್ಥೆಯಲ್ಲಿ ಕುಟುಂಬವೂ ಅತಿ ಮುಖ್ಯ ಅಂಗ ಎಂದು ಗುರುತಿಸ-ಬೇಕಾಗುತ್ತದೆ. ಹಾಗಾಗಿ, ಅಂಗನವಾಡಿ, ಪೋಷಕರು ಮತ್ತು ಸಮಾಜದ ನಡುವೆ ಸೌಹಾರ್ದ ಸಂಬಂಧ ಹಾಗೂ ಪರಸ್ಪರ ನಂಟನ್ನು ಬೆಸೆಯುವುದು ಅತ್ಯವಶ್ಯ.

ಅಂಗನವಾಡಿ ಕೇಂದ್ರಕ್ಕೆ ಹೋಗದೆ ಇರುವ ಮಕ್ಕಳು ಸಮಾಜದಲ್ಲಿ ಸಾಕಷ್ಟಿದ್ದಾರೆ ಎಂಬುದನ್ನು ಅನಿತಾ ಟೀಚರ್ ಗಮನಿಸಿದ್ದರು. ಅವರು ಆರಂಭಿಕ ಬಾಲ್ಯ ಕಾಳಜಿ ಮತ್ತು ಶಿಕ್ಷಣ ದಿನಾಚರಣೆಗೆ (Early Childhood Care and Education Day – ಪೋಷಕರು – ಶಿಕ್ಷಕರ ಸಭೆ) ಪೋಷಕರನ್ನು ಮತ್ತು ಸಮುದಾಯದ ಸದಸ್ಯರನ್ನು ಆಹ್ವಾನಿಸಿ ಅಂಗನವಾಡಿ ಕೇಂದ್ರಗಳಲ್ಲಿ ಕೈಗೊಳ್ಳುವ ನಿತ್ಯ ಚಟುವಟಿಕೆಗಳ ಬಗ್ಗೆ ಹಾಗೂ ಮಕ್ಕಳ ಬೆಳವಣಿಗೆಯ ಮೇಲೆ ಅದು ಬೀರುವ ಪರಿಣಾಮದ ಬಗ್ಗೆ ಪ್ರಾತ್ಯಕ್ಷಿಕೆ ನೀಡಲಾರಂಭಿಸಿದರು. ಸಭೆಗೆ ಗೈರುಹಾಜರಾದವರ ಮನೆಗಳಿಗೂ ಅವರು ಭೇಟಿ ನೀಡಿ ಶಾಲಾಪೂರ್ವ ಶಿಕ್ಷಣದ ಮಹತ್ವವನ್ನು ವಿವರಿಸಿದರು. ಅಂಗನವಾಡಿಗಳೆಂದರೆ 'ಆಹಾರ ವಿತರಣಾ ಸ್ಥಳ' ಎಂಬ ದೃಷ್ಟಿಕೋನವನ್ನ ಹೋಗಲಾಡಿಸಿ 'ಮಕ್ಕಳ ಸಾಮರ್ಥ್ಯವನ್ನು ಹೆಚ್ಚಿಸುವ ಸ್ಪಂದನಶೀಲ ಕಲಿಕಾ ಕೇಂದ್ರಗಳು' ಎಂಬ ಭಾವನೆ ಬರುವಂತೆ ಮಾಡಲು ಅವರಿಗೆ ಆರು ತಿಂಗಳೇ ಬೇಕಾಯಿತು. ಮಕ್ಕಳ ದಾಖಲಾತಿಯನ್ನು 25ರಿಂದ 40ಕ್ಕೆ ಹೆಚ್ಚಿಸಲು ಕೂಡಾ ಅನಿತಾ ಟೀಚರ್‌ಗೆ ಇದು ನೆರವಾಯಿತು.





**ಉಲ್ಲೇಖಗಳು**


Early Childhood Education Initiative Sangareddy. (2017). *Anganwadi Teachers Development Tracking.* Sangareddy. Azim Premji Foundation. Unpublished.

Early Childhood Education Initiative Sangareddy. (2018). *Anganwadi Teachers Capacity Development Model for Impactful Early Learning.* Sangareddy. Azim Premji Foundation. Unpublished.

Ministry of Women and Child Development. (2016). *Anganwadi Centres,* 2013. Delhi. Government of India.


* ಮಕ್ಕಳ ಗುರುತನ್ನು ಮರೆಮಾಚಲು ಹೆಸರುಗಳನ್ನು ಬದಲಾಯಿಸಲಾಗಿದೆ.


**ಇಸಿಇ ತಂಡ (ಸಂಗಾರೆಡ್ಡಿ)**
ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಆರಂಭಿಕ ಬಾಲ್ಯ ಶಿಕ್ಷಣ (ಇಸಿಇ) ಉಪಕ್ರಮವು ಶಿಕ್ಷಕರು ಸಾಮರ್ಥ್ಯಾಭಿವೃದ್ಧಿಯ ಮೇಲೆ ಗಮನ ಹರಿಸುವ ಮೂಲಕ ಅವರು ಚಿಂತನಶೀಲ ಅಭ್ಯಾಸಿಗರಾಗಿ ವಿಕಸಿತರಾಗಿ, ಈ ಮೂಲಕ ಅಂಗನವಾಡಿ ಕೇಂದ್ರಗಳನ್ನು 3ರಿಂದ 6ರ ವಯೋಮಾನದ ಮಕ್ಕಳ ಸಮಗ್ರ ಬೆಳವಣಿಗೆಯ ದೃಷ್ಟಿಯಲ್ಲಿ ಸ್ಪಂದನಶೀಲ ಕಲಿಕಾ ಕೇಂದ್ರಗಳಾಗಿ ಮಾರ್ಪಡಿಸುವುದು ಅದರ ಗುರಿಯಾಗಿದೆ.

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಪರ್ಯಾಲೋಚನೆಗಾಗಿ ದಾಖಲೀಕರಣ | ಶಿಕ್ಷಕರೊಬ್ಬರ ದಿನಚರಿ

ಗಜೇಂದ್ರ ದೇವಾಂಗನ್

**26 ಜುಲೈ 2019**

ಇಂದಿನ ಕೆಲಸವು ಕೆಲವು ದೈಹಿಕ ಚಟುವಟಿಕೆಗಳ ಮೂಲಕ ಆರಂಭವಾಯಿತು. ಸುಮಾರು ಹತ್ತು ನಿಮಿಷಗಳ ಚಟುವಟಿಕೆಯ ಬಳಿಕ ನಾವು ದಣಿದಿದ್ದ ಕಾರಣ ಎಲ್ಲರೂ ವೃತ್ತಾಕಾರದಲ್ಲಿ ಕುಳಿತೆವು. ಅಲ್ಲಿ ಇಪ್ಪತ್ತೈದು ಮಕ್ಕಳಿದ್ದು, ಅವರಲ್ಲಿ ಹದಿನಾರು ಮಕ್ಕಳು ಹೊಸದಾಗಿ ಪ್ರವೇಶ ಪಡೆದವರಾಗಿದ್ದರು. ಹಿಂದಿನ ದಿನ ನನಗೆ ಕೆಲವು ಮಕ್ಕಳನ್ನು ಪರಿಚಯಿಸಲಾಗಿತ್ತು. ಆದರೆ ಕೇವಲ ಒಂದೇ ದಿನದಲ್ಲಿ ಅವರೆಲ್ಲರ ಹೆಸರನ್ನು ನೆನಪಿನಲ್ಲಿಟ್ಟುಕೊಳ್ಳುವುದು ಸಾಧ್ಯವಿರಲಿಲ್ಲ. ಇಂದು ಹಲವಾರು ಹೊಸ ಮುಖಗಳೂ ಇದ್ದವು. ಹಾಗಾಗಿ, ಮೊದಲು ಅವರೆಲ್ಲರ ಹೆಸರನ್ನು ತಿಳಿದುಕೊಳ್ಳುವುದು ಹಾಗೂ ಪರಿಚಯ ಮಾಡಿಕೊಳ್ಳುವುದು ಅಗತ್ಯವಾಗಿತ್ತು. ನಾನು ನನ್ನ ಹೆಸರನ್ನು ಹೇಳಿ, ಸ್ವತಃ ಅವರಿಗೆ ಪರಿಚಯಿಸಿಕೊಂಡೆ ಹಾಗೂ ಅವರು ನನ್ನನ್ನು 'ಗಜೇಂದ್ರ ಟೀಚರ್' ಎಂಬುದಾಗಿ ಕರೆಯಬಹುದು ಎಂದು ಹೇಳಿದೆ. ನಂತರ, 'ನಿಮಗೆ ನನ್ನ ಹೆಸರು ಗೊತ್ತು. ಆದರೆ ನನಗೆ ನಿಮ್ಮನ್ನು ಕರೆಯಬೇಕಾಗಿದ್ದಲ್ಲಿ ನಾನು ಹೇಗೆ ಕರೆಯಬೇಕು? ಆದ್ದರಿಂದ ನೀವು ನನಗೆ ನಿಮ್ಮ ಹೆಸರುಗಳನ್ನು ಹೇಳಿದರೆ, ನಾನು ನಿಮ್ಮನ್ನು ಅದೇ ಹೆಸರಿನಿಂದ ಕರೆಯಬಹುದು,' ಎಂದು ಹೇಳಿದೆ. ಇದನ್ನು ನಾನು ಅತ್ಯಂತ ಸಹಜವಾಗಿ ಹೇಳಿದೆ. ಬಹಳಷ್ಟು ಮಕ್ಕಳಿಗೆ ತಮ್ಮ ಹೆಸರನ್ನು ಹೇಳಬೇಕು ಎಂದು ಅನಿಸಿತು. ಮೊದಲನೆಯ ದಿನವೇ ಹೀಗೆಲ್ಲ ಆಗುತ್ತದೆ ಎಂದರೆ ನನಗೆ ನಂಬಲು ಸಾಧ್ಯವಾಗಲಿಲ್ಲ. ನಾನಿನ್ನೂ ನನ್ನ ವಾಕ್ಯವನ್ನು ಪೂರ್ಣಗೊಳಿಸಿರಲಿಲ್ಲ, ಮಕ್ಕಳು ಒಬ್ಬೊಬ್ಬರಾಗಿ ಎದ್ದುನಿಂತು ತಮ್ಮ ಹೆಸರನ್ನು ಹೇಳತೊಡಗಿದರು. ಈ ಎಲ್ಲ ಮಕ್ಕಳು ಶಾಲೆಗೆ ಇಂದೇ ಬಂದವರಾಗಿದ್ದರು. ಇಷ್ಟೊಂದು ಮಕ್ಕಳು ಯಾವುದೇ ಬಲವಂತವಿಲ್ಲದೇ ತಮ್ಮ ತಮ್ಮ ಹೆಸರು ಹೇಳುತ್ತಿರುವುದನ್ನು ನನ್ನ ಶಿಕ್ಷಕ ವೃತ್ತಿಯಲ್ಲಿಯೇ ಮೊದಲ ಬಾರಿಗೆ ನೋಡಿ ನನಗೆ ಆಶ್ಚರ್ಯವಾಯಿತು.

ಮಕ್ಕಳ ಇಂತಹ ನಡವಳಿಕೆಯ ಹಿಂದಿರುವ ಕಾರಣವೇನು? ಹೇಳಲು ಖಂಡಿತವಾಗಿಯೂ ಸಾಧ್ಯವಿಲ್ಲ. ಆದರೆ, ಅದು ನಮ್ಮ ವರ್ತನೆಯನ್ನು ಅವಲಂಬಿಸಿರುವ ಸಾಧ್ಯತೆಯಿದೆ. ಮಕ್ಕಳು ಶಾಲೆಯೆಡೆಗೆ ಆಕರ್ಷಿತರಾಗಬೇಕು, ಶಾಲೆಯಲ್ಲಿ ಮುಂದುವರೆಯಬೇಕು ಹಾಗೂ ನಮ್ಮ ನಿರೀಕ್ಷೆಗಳಿಗೆ ತಕ್ಕಂತೆ ವರ್ತಿಸಬೇಕು ಎಂದು ನಾವು ಬಯಸುವುದಾದಲ್ಲಿ, ನಮ್ಮ ವರ್ತನೆಯೂ ಮಕ್ಕಳ ನಿರೀಕ್ಷೆಯ ಪ್ರಕಾರ ಇರಬೇಕು. ಮಗುವೊಂದು ಶಾಲೆಗೆ ಬಂದಾಗ ಅಲ್ಲಿ ಅದಕ್ಕೆ ಕಟ್ಟಡ, ಇತರ ವಿದ್ಯಾರ್ಥಿಗಳು, ಶಿಕ್ಷಕರು, ಭಾಷೆ, ಶಾಲಾ ಪ್ರಕ್ರಿಯೆಗಳು ಇತ್ಯಾದಿ ಎಲ್ಲವೂ ಹೊಸದೇ ಆಗಿರುತ್ತವೆ ಎಂಬುದನ್ನು ನಾವು ಅಗತ್ಯವಾಗಿ ಅರ್ಥ ಮಾಡಿಕೊಳ್ಳಬೇಕು. ಮಕ್ಕಳಿಗೆ ಅವರ ಅನುಭವ ಮತ್ತು ಭಾಷೆಯನ್ನು ಹಂಚಿಕೊಳ್ಳಲು ಅವಕಾಶವನ್ನು ಕೊಟ್ಟಾಗ ಅವರ ಬೆಳವಣಿಗೆ ಚೆನ್ನಾಗಿ ಆಗುತ್ತದೆ. ಅವರನ್ನು ತರಗತಿ ಕೊಠಡಿಗಳತ್ತ ಆಕರ್ಷಿಸಲು ನಾವು ಅವರೊಡನೆ ಅವರ ಭಾಷೆಯಲ್ಲಿ ಮಾತನಾಡಬೇಕು, ಅವರ ಬಳಿ ಕುಳಿತುಕೊಳ್ಳಬೇಕು, ಅವರೊಂದಿಗೆ ನಗುನಗುತ್ತಿರಬೇಕು ಹಾಗೂ ಅವರ ಸಮಸ್ಯೆಗಳನ್ನು ಕೇಳಬೇಕು. ಹೊಸ ಜಾಗದಲ್ಲಿ ತಾವು ಸುರಕ್ಷಿತವಾಗಿದ್ದೇವೆ ಎಂಬ ಭಾವನೆಯು ಮಕ್ಕಳಿಗೆ ಬರುವಂತೆ ಮಾಡುವುದು ತುಂಬಾ ಅವಶ್ಯಕ.

ಇಂದು ಕೈಗೊಂಡ ಮತ್ತೊಂದು ಚಟುವಟಿಕೆಯಲ್ಲಿ ಎಲ್ಲ ಮಕ್ಕಳಿಗೂ ಬರೆಯಲು ಪಾಟಿಯನ್ನು (ಸ್ಲೇಟ್) ಕೊಡಲಾಯಿತು. ಒಟ್ಟು 26 ಸ್ಲೇಟ್‌ಗಳನ್ನು ವಿತರಿಸಲಾಯಿತು. ಬರೆಯುವ ಚಟುವಟಿಕೆ ಮುಗಿಸಿದ ಮೇಲೆ ಸ್ಲೇಟ್‌ಗಳನ್ನು ಒಂದು ಜಾಗದಲ್ಲಿ ಇರಿಸುವಂತೆ ಮಕ್ಕಳಿಗೆ ಹೇಳಲಾಯಿತು. ಬರೆಯುವ ಅಭ್ಯಾಸವು ಸ್ವಲ್ಪ ಹೆಚ್ಚು ಸಮಯವನ್ನು ತೆಗೆದುಕೊಂಡಿದ್ದರಿಂದ ಮಕ್ಕಳಿಗೆ ತುಸು ಬೇಸರ ಬಂದಿತು. ಅವರನ್ನು ಚೈತನ್ಯಶಾಲಿಗಳಾಗಿ ಇಡಲು ಚಟುವಟಿಕೆಯನ್ನು ಬದಲಾಯಿಸುವುದು ಅಗತ್ಯವಾಗಿತ್ತು.

'ಸ್ಲೇಟ್‌ಗಳನ್ನು ಹಂಚುವ ಮೊದಲು ನಾನು ಎಣಿಕೆ ಮಾಡಿಲ್ಲ ಮತ್ತು ಎಷ್ಟು ಸ್ಲೇಟ್‌ಗಳಿವೆ ಎಂಬುದನ್ನು ತಿಳಿಯಬೇಕಾಗಿದ್ದು, ನಾವದನ್ನು ಎಣಿಸೋಣ' ಎಂದು ನಾನು ಮಕ್ಕಳಿಗೆ ಹೇಳಿದೆ. ಸ್ಲೇಟ್‌ಗಳು ಮಧ್ಯದಲ್ಲಿರುವಂತೆ ನಾವೆಲ್ಲರೂ ಅವುಗಳ ಸುತ್ತ ವೃತ್ತಾಕಾರದಲ್ಲಿ ಕುಳಿತೆವು. ನಾನು ಒಂದೊಂದೇ ಸ್ಲೇಟನ್ನು ಎತ್ತಿಕೊಂಡ ಹಾಗೆ ಮಕ್ಕಳು ಅದನ್ನು ಎಣಿಸುತ್ತ ಹೋಗುವುದು ಎಂದು ತೀರ್ಮಾನಿಸಿದೆವು. ಎಣಿಕೆ ಆರಂಭವಾಯಿತು. ಮಕ್ಕಳು ಎಣಿಸುತ್ತಿರುವಾಗ ನಡುವೆ ಒಮ್ಮೊಮ್ಮೆ ನಾನು ಸ್ಲೇಟ್‌ಗಳನ್ನು ಎತ್ತಿಕೊಳ್ಳುವುದನ್ನು ನಿಲ್ಲಿಸಿಬಿಡುತ್ತಿದ್ದೆ. ಮಕ್ಕಳು ಎಣಿಸುವುದನ್ನು ಮುಂದುವರೆಸುತ್ತಾರೆ ಎಂದು ನಾನು ಭಾವಿಸಿದ್ದೆ. ಆದರೆ ಅವರು ತುಂಬಾ ಜಾಗರೂಕರಾಗಿದ್ದರು. ಅವರು ಒಂದೋ ಉಳಿದವರು ಎಣಿಸದಂತೆ ತಡೆಯುತ್ತಿದ್ದರು ಅಥವಾ ಸ್ಲೇಟನ್ನು ಪಕ್ಕಕ್ಕಿಡುವಂತೆ ನನ್ನನ್ನು ಕೇಳಿಕೊಳ್ಳುತ್ತಿದ್ದರು. ಕೆಲವು ಮಕ್ಕಳಿಗೆ ಸಂಖ್ಯೆಗಳನ್ನು ಅನುಕ್ರಮವಾಗಿ ಹೇಳಲು ಆಗುತ್ತಿರಲಿಲ್ಲ. ಆದ್ದರಿಂದ ಸಂಖ್ಯೆ ಮತ್ತು ಸಂಖ್ಯೆಗಳ ಹೆಸರಿನಲ್ಲಿ ವ್ಯತ್ಯಾಸವಿತ್ತು. ಹಾಗಿದ್ದರೂ ಮಕ್ಕಳು ತಾವೇ ಅದನ್ನು ಸರಿಪಡಿಸಿಕೊಂಡು ಮತ್ತೆ ಎಣಿಸಲು ಆರಂಭಿಸಿದರು. ನಾವು ಮತ್ತೆಮತ್ತೆ ಎಣಿಸಿದೆವು. ಸಂಖ್ಯೆ 26ನ್ನು ತಲುಪಿದಾಗ, ನಾನು ಯಾವುದೋ ನೆಪ ಹೇಳಿ, ಅವರು ಮತ್ತೆ ಎಣಿಸುವಂತೆ ಮಾಡಿದೆ. ಹೀಗೆ ಅನೇಕ ಬಾರಿ ಆಯಿತು. ಇಂದಿನ ಎಣಿಕೆ ಪ್ರಕ್ರಿಯೆಯು ಹಲವು ಮಕ್ಕಳ ಪಾಲಿಗೆ ದೊಡ್ಡ ಸವಾಲೇ ಆಗಿತ್ತು. ಅವರು ನಿಖರವಾದ ಸಂಖ್ಯೆಯನ್ನು ತಿಳಿಯಲು ಬಯಸುತ್ತಿದ್ದರು. ಈ ಚಟುವಟಿಕೆಯು ತುಂಬಾ ಆಸಕ್ತಿಪೂರ್ಣವಾಗಿತ್ತು. ಎಲ್ಲಾ ಮಕ್ಕಳು ತಮ್ಮ ಗಮನವನ್ನು ಎಣಿಕೆಯ ಮೇಲೆ ಕೇಂದ್ರೀಕರಿಸಿದ್ದರು. ನಾವು ಒಂದೆರಡು ಬಾರಿ ಇಂಗ್ಲಿಷ್‌ನಲ್ಲಿಯೂ ಎಣಿಸಿದೆವು.

ಈ ಚಟುವಟಿಕೆಯ ಪ್ರಮುಖ ಅಂಶವೆಂದರೆ, ಚಟುವಟಿಕೆ-ಯುದ್ದಕ್ಕೂ ಮಕ್ಕಳು ಸಂಪೂರ್ಣ ಅದರಲ್ಲಿಯೇ ನಿರತರಾಗಿದ್ದುದು. ಎರಡನೆಯದಾಗಿ, ಉಪಯೋಗಿಸಿದ ಬೋಧನಾ ಕಲಿಕಾ ಸಾಮಗ್ರಿಗಳು (TLM–Teaching Learning Materials) ಮೋಹಕವಾದ ಅಥವಾ ದುಬಾರಿ ವಸ್ತುಗಳಾಗಿರಲಿಲ್ಲ. ನಾವು ತರಗತಿ ಕೊಠಡಿಗಳಲ್ಲಿ ಉಪಯೋಗಿಸುವ ಬೋಧನಾ ಕಲಿಕಾ ಸಾಮಗ್ರಿಗಳು ಮಕ್ಕಳಿಗೆ ಸ್ಪರ್ಶಿಸಲು, ದೂರದಿಂದ ನೋಡಲು

ಹಾಗೂ ತಾವೇ ಬಳಸಲು ಸಾಧ್ಯವಾದಂತಹ ಸಾಮಗ್ರಿಗಳಾಗಿರ-ಬೇಕು. ಅವು ಸದೃಢವಾಗಿದ್ದು ಹೆಚ್ಚು ಕಾಲ ಬಾಳಿಕೆ ಬರುವಂತಹದಾಗಿರಬೇಕು. ಮಕ್ಕಳು ಬಳಸಲು ಸುರಕ್ಷಿತವಾಗಿರ-ಬೇಕು ಹಾಗೂ ಸುತ್ತಲಿನ ಪರಿಸರದಲ್ಲಿಯೇ ಸುಲಭವಾಗಿ ಸಿಗುವಂತಹದ್ದಾಗಿರಬೇಕು.

ಇಲ್ಲಿ, ಎಣಿಸುವುದು ನಮ್ಮ ಮುಖ್ಯ ಗುರಿಯಾಗಿತ್ತು ಹಾಗೂ ಮಕ್ಕಳು ಘನ ವಸ್ತುಗಳನ್ನು ಎಣಿಸಲು ಕಲಿಯಬೇಕು ಎಂಬುದನ್ನು ನಾವು ಬಯಸಿದ್ದೆವು. ಮಕ್ಕಳ ಜೊತೆ ಕೆಲಸ ಮಾಡುವಾಗ, ವಿಷಯ-ವಸ್ತುಗಳನ್ನು ಅವರೆದುರಿಗೆ ಹೇಗೆ ಪ್ರಸ್ತುತಪಡಿಸುತ್ತೇವೆ ಎಂಬ ತಂತ್ರವೂ ಇನ್ನೊಂದು ಪ್ರಮುಖವಾದ ಸಂಗತಿಯಾಗಿದೆ. ಶಿಕ್ಷಕರು ತಮ್ಮ ಭಾಷೆ, ಧ್ವನಿ, ಅಭಿನಯ ಹಾಗೂ ಕೌಶಲ್ಯಗಳನ್ನು ಬಳಸಿ ಸಾಧಾರಣವಾದುದನ್ನು ಅಸಾಧಾರಣವಾದುದನ್ನಾಗಿ ಮಾಡಬಲ್ಲರು. ಇಂದು ಮಕ್ಕಳ ಜೊತೆಗೆ ಎಣಿಕೆಯ ಚಟುವಟಿಕೆಯಲ್ಲಿ ಭಾಗಿಯಾಗಿ ನಾನೂ ಕೂಡ ಸಂತೋಷಪಟ್ಟೆನು.

**ದಿನಚರಿ 29 ಜೂನ್ 2019**

ಇಂದಿನ ಕೆಲಸವನ್ನು ಯೋಜನೆಯ ಪ್ರಕಾರ ಕೈಗೊಳ್ಳಲಾಗಿತ್ತು. ಮಕ್ಕಳಿಗೆ ತಾವು ಮನೆಯಂತಹುದೇ ಪರಿಸರದಲ್ಲಿ ಇದ್ದೇವೆ, ಶಾಲೆಯಲ್ಲಿ ಸುರಕ್ಷಿತವಾಗಿದ್ದೇವೆ ಎಂಬ ಭಾವನೆ ಮೂಡಲು, ಅವರು ವಿವಿಧ ಚಟುವಟಿಕೆಗಳಲ್ಲಿ ಸಂತೋಷದಿಂದ ಪಾಲ್ಗೊಳ್ಳಲು, ತಾವು ಹೇಳುವುದನ್ನು ಆಲಿಸಲು ಯಾರೋ ಇದ್ದಾರೆ ಎಂಬ ಭಾವನೆ ಅವರಲ್ಲಿ ಮೂಡಲು ಹಾಗೂ ತಾವು ಕಲಿತಿರುವುದು ತುಂಬಾ ಮುಖ್ಯವಾದುದು ಎಂದು ಅವರಿಗೆ ತಿಳಿಯಬೇಕು ಎಂಬ ಉದ್ದೇಶದಿಂದ, ಹಲವಾರು ಚಟುವಟಿಕೆಗಳ ಮೂಲಕ ನಾನು ಪ್ರತಿಯೊಂದು ಮಗುವನ್ನೂ ಚೆನ್ನಾಗಿ ತಿಳಿದುಕೊಳ್ಳಲು ಪ್ರಯತ್ನಿಸಿದೆ.

**ಇಂದು ಮಾಡಿದ ಕೆಲಸದ ವಿವರ ಹೀಗಿದೆ.**

ನಾನು ಒಂದನೆಯ ತರಗತಿಗೆ ಹೋದೆ. ಕೆಲವು ಮಕ್ಕಳು ತರಗತಿ ಕೊಠಡಿಯಲ್ಲಿ ಆಡುತ್ತಿದ್ದರು. ನಾನು ಅವರ ಕೈಕುಲುಕಿ, 'ಶುಭೋದಯ' ಎಂದು ಹೇಳಿದೆ. ಆಸನಗಳನ್ನು ವ್ಯವಸ್ಥಿತಗೊಳಿಸ-ಬೇಕಾಗಿತ್ತು. ಹಾಗಾಗಿ, ಬೇರೆ ತರಗತಿಯ ಕೆಲವು ಮಕ್ಕಳನ್ನು ಕರೆದೆ, ಅವರ ಸಹಾಯದೊಂದಿಗೆ ನೆಲದ ಮೇಲೆ ಚಾಪೆಗಳನ್ನು ಹಾಸಿದೆ. ಪ್ರಾರ್ಥನೆ-ಸಭೆಗಳು ಮುಗಿದ ಮೇಲೆ ಮಕ್ಕಳಿಗೆ ಬೆಳಗಿನ ತಿಂಡಿಗಾಗಿ ಕಡಲೆಕಾಳುಗಳನ್ನು ಕೊಡಬೇಕಿತ್ತು. ನಾನು ಪ್ರತಿಯೊಂದು ಮಗುವಿನ ಬಳಿಗೂ ಹೋಗಿ, ಮಗು ಕಾಳುಗಳನ್ನು ಚಾಪೆಯ ಮೇಲೆ ಬೀಳಿಸಿಕೊಳ್ಳದೇ ಸರಿಯಾಗಿ ತಿನ್ನುವಂತೆ ನೋಡಿಕೊಂಡೆ.

ನಾವೆಲ್ಲರೂ ವೃತ್ತಾಕಾರದಲ್ಲಿ ನಿಂತೆವು. 'ಕುಳಿತುಕೊಳ್ಳಿ, ಎದ್ದು ನಿಲ್ಲಿ, ಕೈಗಳನ್ನು ಮೇಲಕ್ಕೆತ್ತಿ, ಕೈಗಳನ್ನು ಕೆಳಗಿಳಿಸಿ, ಸುತ್ತಲೂ ತಿರುಗಿ' ಎಂಬಿತ್ಯಾದಿ ನನ್ನ ಆಜ್ಞೆಗಳನ್ನು ಅನುಸರಿಸಿ, ಮಕ್ಕಳು ಕೆಲವು ದೈಹಿಕ ಚಟುವಟಿಕೆಗಳನ್ನು ಅಭ್ಯಾಸ ಮಾಡತೊಡಗಿದರು. ಆಜ್ಞೆಗಳ ಅನುಕ್ರಮಣಿಕೆಯಲ್ಲಿ ತಟ್ಟನೆ ಆಗುವ ಬದಲಾವಣೆಗಳು ಮಕ್ಕಳಿಗೆ ಕೈಕೊಡುತ್ತಿದ್ದವು. ಇದು ತಮಾಷೆಗೆ ಕಾರಣವಾಗುತ್ತಿತ್ತು. ಮಕ್ಕಳು ಇದನ್ನು ತುಂಬಾ ಆನಂದಿಸಿದರು ಹಾಗೂ ಮನಸಾರೆ ನಕ್ಕರು. ಈ ಚಟುವಟಿಕೆ ಮುಗಿದ ಮೇಲೆ ಪ್ರತಿಯೊಬ್ಬರೂ ವೃತ್ತಾಕಾರದಲ್ಲಿ ಕುಳಿತರು. ನಾವು 'ಮಾವಿನಹಣ್ಣಿನ ಬುಟ್ಟಿ, ಮೋಟುರಾಮ್ ಹಲ್ವಾಯಿ ಮತ್ತು ಗಮಲಾ ಪದ್ಯ'ಗಳನ್ನು ಪೂರ್ಣ ಉತ್ಸಾಹದಿಂದ ಅಭಿನಯದೊಂದಿಗೆ ಹಾಡಿದೆವು. ನಂತರ ನಾನು ಅವರಿಗೆ, ಕಪ್ಪುಹಲಗೆಯತ್ತ ಮುಖ ಮಾಡಿ ಕುಳಿತುಕೊಳ್ಳುವಂತೆ ಹೇಳಿ, ಕಪ್ಪುಹಲಗೆಯ ಮೇಲೆ ಕುಂಡ, ನಳ, ಹಗ್ಗ, ಮೀನು ಮತ್ತು ಮನೆ ಎಂಬ ಪದಗಳನ್ನು ಬರೆದೆ. ಬಹಳಷ್ಟು ಮಕ್ಕಳು ಪದಗಳನ್ನು ಓದಬಲ್ಲವರಾಗಿದ್ದರು. ಏಕೆಂದರೆ, ಅವರಲ್ಲಿ ಹಲವರು ಈ ಮೊದಲೇ ಶಾಲೆಗೆ ಹೋದವರಾಗಿದ್ದರು. ಆದರೂ ಕೆಲ ಮಕ್ಕಳಿಗೆ, ಈ ಪದಗಳು ಸಂಪೂರ್ಣ ಹೊಸದಾಗಿದ್ದವು. ಅದಕ್ಕಾಗಿ, ಚಿತ್ರಗಳನ್ನು ಬರೆದು ಈ ಪದಗಳನ್ನು ಉಚ್ಚರಿಸಲು ಅಭ್ಯಾಸ ಮಾಡುವಂತೆ ಹೇಳಿದೆ ಮತ್ತು ಅವುಗಳನ್ನು ಪದಚಿತ್ರಗಳ ಮೂಲಕ ಗುರುತಿಸುವಂತೆ ಹೇಳಿದೆ.

ಅಷ್ಟು ಹೊತ್ತಿಗಾಗಲೇ ನಾವು ಮಾತು, ಹಾಡುಗಳಲ್ಲಿ ಬಹಳಷ್ಟು ಸಮಯವನ್ನು ಕಳೆದಿದ್ದೆವು. ಚಟುವಟಿಕೆಯನ್ನು ಬದಲಾಯಿಸುವ ಅಗತ್ಯವಿತ್ತು. ಮಕ್ಕಳಿಗೆ ಕಪ್ಪುಹಲಗೆಯ ಮೇಲಿದ್ದ ಪದ ಮತ್ತು ಚಿತ್ರಗಳನ್ನು ನೋಡಿ, ಬರೆಯಲು ಹೇಳಿದೆ. ಮಕ್ಕಳ ಬರವಣಿಗೆಯನ್ನು ಗಮನಿಸಿದಾಗ ನನಗೆ ಕೆಲವೇ ಕೆಲವು ಮಕ್ಕಳ ಬರವಣಿಗೆಯು ಸ್ಪಷ್ಟವಾಗಿರುವುದು ಗಮನಕ್ಕೆ ಬಂದಿತು. ಹೆಚ್ಚಿನ ಮಕ್ಕಳಿಗೆ ಬರಹಪೂರ್ವ ಅಭ್ಯಾಸದ ಅವಶ್ಯಕತೆ ಇದೆ ಎಂದು ನನಗನ್ನಿಸಿತು. ಅವರು ಲೇಖನಿಯನ್ನು ಹೇಗೆ ಸಮರ್ಪಕವಾಗಿ ಹಿಡಿದುಕೊಳ್ಳಬೇಕು ಎನ್ನುವುದನ್ನು ತಿಳಿದುಕೊಂಡರೆ ಮತ್ತು ಆಕಾರಗಳ ವಿನ್ಯಾಸವನ್ನು ಅರ್ಥಮಾಡಿಕೊಂಡರೆ, ಬರವಣಿಗೆಯು ಮತ್ತಷ್ಟು ಸುಲಭವಾಗಬಹುದು. ಸದ್ಯಕ್ಕಂತೂ ಮಕ್ಕಳು ತಮ್ಮ ಬರವಣಿಗೆಯಲ್ಲಿ ಆಕಾರಗಳನ್ನು ರಚಿಸುವ ವಿಧಾನವನ್ನೇ ಸುಧಾರಿಸುವ ಅಗತ್ಯ ತುಂಬಾ ಇತ್ತು. ಆದ್ದರಿಂದ, ಕಪ್ಪುಹಲಗೆಯ ಮೇಲೆ ಸರಳವಾದ ಚಿತ್ರಗಳನ್ನು ಬರೆಯುವ ಮೂಲಕ ಹಾಗೂ ಜೊತೆಜೊತೆಗೆ ಮಕ್ಕಳ ನೋಟ್ ಬುಕ್‌ಗಳನ್ನು ಗಮನಿಸುವುದರ ಮೂಲಕ ಬರಹದ ಅಭ್ಯಾಸವು ಆರಂಭವಾಯಿತು. ಸುಮಾರು ಒಂದು ತಾಸಿನ ಬಳಿಕ ಕೆಲವು ಮಕ್ಕಳಿಗೆ ನೀರು ಕುಡಿಯಬೇಕಿತ್ತು, ಇನ್ನು ಕೆಲವರಿಗೆ ಶೌಚಾಲಯಕ್ಕೆ ಹೋಗಬೇಕಿತ್ತು. ಹಾಗಾಗಿ ಅವರಿಗೆ ಐದು ನಿಮಿಷಗಳ ವಿರಾಮವನ್ನು ನೀಡಲಾಯಿತು.

ಆನಂತರ, ನಮ್ಮ ಕೆಲಸವು ಗಣಿತದ ಮೇಲೆ ಕೇಂದ್ರೀಕೃತವಾಯಿತು. ಒಂದರಿಂದ ಮೂವತ್ತರವರೆಗಿನ ಅಂಕಿಗಳನ್ನು ಎಲ್ಲರೂ ಒಟ್ಟಾಗಿ ಎಣಿಸುವುದರೊಂದಿಗೆ ಚಟುವಟಿಕೆಯನ್ನು ಆರಂಭಿಸಿದೆವು ಮತ್ತು ಅದನ್ನು ಹಲವಾರು ಬಾರಿ ಪುನರಾವರ್ತಿಸಿದೆವು. ಮಕ್ಕಳು ಸಂಖ್ಯೆಗಳ ಅನುಕ್ರಮಣಿಕೆಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು ಮತ್ತು ಹೇಗೆ ಎಣಿಸಬೇಕು ಎಂಬುದನ್ನು ಈಗಾಗಲೇ ತಿಳಿದಿರುವ ಮಕ್ಕಳಿಗೆ ಇದು ಹೆಚ್ಚಿನ ಅಭ್ಯಾಸವನ್ನು ನೀಡಬೇಕು ಎನ್ನುವುದು ನನ್ನ ಉದ್ದೇಶವಾಗಿತ್ತು. ಅದೇ ಹೊತ್ತಿಗೆ ನಾವು ಇನ್ನೊಂದು ಚಟುವಟಿಕೆಯನ್ನೂ ಮಾಡಿದೆವು. ನಾವು ದೊಡ್ಡಗಾತ್ರದ ಮಣಿಗಳನ್ನು ಎಣಿಸುವುದರ ಮೂಲಕ (ಜೋಡೋ ಜ್ಞಾನ್ ಕಿಟ್‌ನಿಂದ) ಎಣಿಕೆಯ ಅಭ್ಯಾಸವನ್ನು ಮಾಡಿದೆವು. ಮಣಿಗಳನ್ನು ನೆಲದ ಮೇಲೆ ರಾಶಿ ಹಾಕಿ ಹರಡಿದೆವು. ಗುಂಪಿನಿಂದ ಯಾರಾದರೂ ಇಬ್ಬರು ಮಕ್ಕಳು ಜೊತೆಯಾಗಿ ಮುಂದೆ ಬರುವಂತೆ ಹೇಳಿದೆ. ಒಂದು ಮಗುವಿಗೆ ತನ್ನೆರಡೂ ಅಂಗೈಗಳನ್ನು ತೆರೆದು ಒಟ್ಟಾಗಿ ಇಟ್ಟುಕೊಳ್ಳುವಂತೆ ಹೇಳಿದೆ. ಮತ್ತೊಂದು ಮಗುವಿಗೆ, ನೆಲದಿಂದ ಒಂದೊಂದೇ ಮಣಿಯನ್ನು ಎತ್ತಿ ಜೊತೆಯಲ್ಲಿರುವ ಮಗುವಿನ ಅಂಗೈನಲ್ಲಿ ಇಡುತ್ತ ಹೋಗುವಂತೆ ಹೇಳಿದೆ. ಅಂಗೈನಲ್ಲಿ ಮಣಿಯನ್ನು ಇಡುತ್ತಲೇ ವೀಕ್ಷಿಸುತ್ತಿರುವ ಉಳಿದ ಮಕ್ಕಳು ಅದನ್ನು ಎಣಿಸುತ್ತಿದ್ದರು. ಕೆಲವೊಮ್ಮೆ ಬೇರೆಯವರೊಡನೆ ಸಮಾಲೋಚಿಸಿದ ನಂತರ ಮಕ್ಕಳು ಸರಿಯಾಗಿ ಎಣಿಸಿ ಹೇಳುತ್ತಿದ್ದರು. ಮಣಿಯನ್ನು ಅಂಗೈನಲ್ಲಿ ಇಟ್ಟ ಮೇಲಷ್ಟೇ ಅವರು ಅದನ್ನು ಎಣಿಸುತ್ತಿದ್ದರು. ಎಲ್ಲಾ ಮಕ್ಕಳೂ ಈ ಚಟುವಟಿಕೆಯಲ್ಲಿ ಪಾಲ್ಗೊಳ್ಳಲು ಆಸಕ್ತರಾಗಿದ್ದರು. ಆದ್ದರಿಂದ, ಅವರಿಗೆ ಇಬ್ಬಿಬ್ಬರು ಜೊತೆಯಾಗಿ ಮುಂದೆ ಬಂದು ಪಾಲ್ಗೊಳ್ಳಲು ಅವಕಾಶ ಮಾಡಿಕೊಡಲಾಯಿತು. ಇಂದು ನಾವು 1ರಿಂದ 10ರವರೆಗೆ ವಸ್ತುಗಳನ್ನು ಎಣಿಸುವ ಅಭ್ಯಾಸ ಮಾಡಿದೆವು.

ಸ್ವಲ್ಪ ವಿರಾಮದ ನಂತರ, ನಾವು ಮತ್ತೆ ಗಣಿತವನ್ನು ಆರಂಭಿಸಿದೆವು. ಈ ಬಾರಿ ನಾವು ಚಿತ್ರಗಳ ಮೂಲಕ ಚಿಕ್ಕದು–ದೊಡ್ಡದು, ಮೇಲೆ–ಕೆಳಗೆ ಮುಂತಾದ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆವು. ಬಹಳಷ್ಟು ಮಕ್ಕಳಿಗೆ ಚಿತ್ರಗಳನ್ನು ನೋಡಿ, ಚಿಕ್ಕದು ಮತ್ತು ದೊಡ್ಡದು, ಮೇಲೆ ಮತ್ತು ಕೆಳಗೆ ಮುಂತಾದವುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಅಂಕಿಗಳ ಆಧಾರದ ಮೇಲೆ ಕಡಿಮೆ ಮತ್ತು ಹೆಚ್ಚು ಎಂಬುದನ್ನೂ ಅವರು ಹೇಳಬಲ್ಲವರಾಗಿದ್ದರು. ಮಕ್ಕಳಲ್ಲಿ ಅಂದಾಜಿಸುವ ಸಾಮರ್ಥ್ಯವನ್ನು ಬೆಳೆಸಲು ಹಾಗೂ ಕಡಿಮೆ–ಹೆಚ್ಚು ಎಂಬುದರ ಪರಿಕಲ್ಪನೆಯನ್ನು ಇನ್ನಷ್ಟು ಸ್ಪಷ್ಟಗೊಳಿಸಲು ಚಟುವಟಿಕೆಯೊಂದನ್ನು ಕೈಗೊಳ್ಳಲಾಯಿತು. ನಾನು ಮಕ್ಕಳ ಸ್ಲೇಟ್‌ಗಳು, ನೋಟ್ ಬುಕ್‌ಗಳು ತರಗತಿ ಕೊಠಡಿಯ ಮತ್ತು ಗ್ರಂಥಾಲಯದ ಪುಸ್ತಕಗಳು, ಕೆಲವು ಪ್ಲಾಸ್ಟಿಕ್ ಬ್ಲಾಕ್ಸ್‌ಗಳನ್ನು ಹೊರತೆಗೆದೆ. ನಾವೆಲ್ಲರೂ ವೃತ್ತಾಕಾರದಲ್ಲಿ ಕುಳಿತುಕೊಂಡೆವು. ನಾನು ಕೆಲವು ವಸ್ತುಗಳನ್ನು ಕೈಗಳಲ್ಲಿ ಎತ್ತಿಕೊಂಡು, 'ಯಾವ ಕೈಯಲ್ಲಿ ಹೆಚ್ಚು ವಸ್ತುಗಳಿವೆ? ಹೇಳಿ.' ಎಂದು ಮಕ್ಕಳನ್ನು ಕೇಳಿದೆ. ಮಕ್ಕಳೆಲ್ಲ ತಮಗೆ ಸರಿಕಂಡ ಉತ್ತರವನ್ನು ಹೇಳುತ್ತಿದ್ದರು. ಕೆಲವೊಮ್ಮೆ ನಾನು ಒಂದೇ ತರಹದ ವಸ್ತುಗಳನ್ನು ಎತ್ತಿಕೊಳ್ಳುತ್ತಿದ್ದೆ. ಮತ್ತೆ ಕೆಲವೊಮ್ಮೆ ಬೇರೆ ಬೇರೆ ತರಹದ ವಸ್ತುಗಳನ್ನು ಎತ್ತಿಕೊಳ್ಳುತ್ತಿದ್ದೆ. ಈ ಚಟುವಟಿಕೆಯನ್ನು ಹಲವಾರು ಬಾರಿ ಪುನರಾವರ್ತಿಸಿದೆ. ಅದೇ ವೇಳೆಯಲ್ಲಿ, ಯಾವ ವಸ್ತು ಹೆಚ್ಚಿದೆ ಎಂಬುದನ್ನು ತಿಳಿಯುವುದು ಹೇಗೆ ಎನ್ನುವುದನ್ನು ಮಕ್ಕಳಿಗೆ ಹೇಳಿದೆ. ವಸ್ತುಗಳನ್ನು ಹೇಗೆ ಜೋಡಿಯಾಗಿಸಬೇಕು ಮತ್ತು ಕಡಿಮೆ–ಹೆಚ್ಚು ಎನ್ನುವುದನ್ನು ಹೇಗೆ ತಿಳಿಯಬೇಕು ಎನ್ನುವುದನ್ನೂ ಕಲಿಸಿದೆ. ಹಲವಾರು ಮಕ್ಕಳು ವಸ್ತುಗಳನ್ನು ಜೊತೆಗೂಡಿಸುವ ಕೆಲಸದಲ್ಲಿ ನೆರವಾದರು.

ಕಳೆದ ಈ ಮೂರು ದಿನಗಳ ಕಾಲವೂ, ಊಟದ ನಂತರ ಮಕ್ಕಳಿಗೆ ಹದಿನೈದು ನಿಮಿಷಗಳ ಕಾಲ ಮುಕ್ತವಾಗಿ ಆಟವಾಡಲು ಸಮಯವನ್ನು ನೀಡಲಾಗಿತ್ತು. ಆ ಸಮಯದಲ್ಲಿ ಮಕ್ಕಳು ವಿವಿಧ ರೀತಿಯ ಆಟದ ಸಾಮಗ್ರಿಗಳ ಜೊತೆಗೆ (ಬ್ಲಾಕ್ಸ್, ಅಡುಗೆ ಆಟದ ಸೆಟ್ ಇತ್ಯಾದಿ) ಒಬ್ಬೊಬ್ಬರೇ ಮತ್ತು ಸಣ್ಣ ಗುಂಪಿನಲ್ಲಿ ಆಟವಾಡುತ್ತಿದ್ದರು. ಇದೂ ಕೂಡ ಮುಖ್ಯ ಉದ್ದೇಶವೊಂದರ ಭಾಗವೇ ಆಗಿದೆ. ಏಕೆಂದರೆ, ಈ ಅವಧಿಯಲ್ಲಿ ಬೇರೆಬೇರೆ ಹಳ್ಳಿಗಳಿಂದ ಬರುವ ಮಕ್ಕಳು ಪರಸ್ಪರ ಪರಿಚಯಿಸಿಕೊಂಡರು ಹಾಗೂ ಸ್ನೇಹವನ್ನು ಬೆಳೆಸಿಕೊಂಡರು. ಓಡುವುದು ಮತ್ತು ಬ್ಲಾಕ್ಸ್‌ಗಳನ್ನು ಜೋಡಿಸುವುದರಿಂದ ಮಕ್ಕಳ ಶಾರೀರಿಕ ಬೆಳವಣಿಗೆಯೂ ಬಲಗೊಳ್ಳುತ್ತದೆ. ಹೊಸತನ್ನೇನಾದರೂ ಸೃಷ್ಟಿಸುವಂತೆ ಅವರ ಮೆದುಳಿಗೆ ಕೆಲಸ ಸಿಗುತ್ತದೆ. ಅಡುಗೆಯಾಟ, ಡಾಕ್ಟರ್–ಡಾಕ್ಟರ್ ಆಟ ಇತ್ಯಾದಿಗಳನ್ನು ಆಡುವಾಗ ಅವರು ವಿಭಿನ್ನ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಅವರು ಒಂದಕ್ಕಿಂತಲೂ ಹೆಚ್ಚು ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದರು. ಅದು ಈ ವಯಸ್ಸಿನಲ್ಲಿ ಸರ್ವತೋಮುಖ ಬೆಳವಣಿಗೆಗೆ ಅಗತ್ಯವಾಗಿತ್ತು. ನನ್ನ ತರಗತಿಯಲ್ಲಿ ಒಬ್ಬ ಚಿಕ್ಕ ಬಾಲಕನಿದ್ದಾನೆ. ಅವನು ಗುಂಪಿನಲ್ಲಿ ಎಲ್ಲರಿಗಿಂತ ಕಿರಿಯ. ಇಡೀ ದಿನವೂ ತುಂಬಾ ಚುರುಕಾಗಿರುತ್ತಾನೆ. ನಾನು ಗಮನಿಸಿದ ಪ್ರಕಾರ, ಅವನಿಗೆ 20–30 ಸೆಕೆಂಡುಗಳಿಗಿಂತ ಹೆಚ್ಚು ಕಾಲ ಯಾವ ಕೆಲಸದಲ್ಲಿಯೂ ಗಮನವನ್ನು ಕೇಂದ್ರೀಕರಿಸಲು ಆಗುವುದಿಲ್ಲ. ಅವನು ಯಾವಾಗಲೂ ಬೇರೆಬೇರೆ ಕೆಲಸವನ್ನು ಮಾಡಲು ಉತ್ಸುಕನಾಗಿರುತ್ತಾನೆ. ಆತ ಮಾತನಾಡುವುದು ಕಡಿಮೆ; ಹಲವು ಪ್ರಶ್ನೆಗಳನ್ನು ಕೇಳಿದರೂ, ಕೆಲವೇ ಪದಗಳಲ್ಲಿ ಉತ್ತರಿಸುತ್ತಾನೆ. ಅವನು ಓಡುವುದನ್ನು, ಗಲಾಟೆ ಮಾಡುವುದನ್ನು, ಬೇರೆ ಮಕ್ಕಳನ್ನು ನೂಕುವುದನ್ನೆಲ್ಲ ಗಮನಿಸುತ್ತಲೇ ಇದ್ದೆ. ಅವನ ಏಕಾಗ್ರತೆಯನ್ನು ಹೆಚ್ಚಿಸಬೇಕು, ಕೈಗಳ ಹಿಡಿತವನ್ನು ಬಲಗೊಳಿಸಬೇಕು, ಅವನು ಸಮತೋಲನವನ್ನು ಸಾಧಿಸಲು ಶಕ್ತನಾಗಬೇಕು, ಗಂಭೀರವಾಗಿ ಆಲೋಚಿಸಲು ಕಲಿಯಬೇಕು ಎಂದು ನನಗನ್ನಿಸಿತು. ಆದ್ದರಿಂದ ಅವನಿಗಾಗಿ ಒಂದು ಚಟುವಟಿಕೆಯನ್ನು ರೂಪಿಸಿದೆ.

ಅವನನ್ನು ನನ್ನ ಬಳಿಗೆ ಕರೆದು, ಪಕ್ಕದಲ್ಲಿಯೇ ಕೂರಿಸಿಕೊಂಡೆ. ಊಟಕ್ಕಿಂತ ಮೊದಲು ನಾವು ಎಣಿಸಿದ್ದ ಮಣಿಗಳನ್ನೇ ಅವನಿಗೆ ಕೊಟ್ಟೆ. ಸುಮಾರು ಇಪ್ಪತ್ತು ಮಣಿಗಳಿದ್ದವು. ಮಣಿಗಳನ್ನು ಒಂದರ ಮೇಲೊಂದು ಇಡಬೇಕೆಂದು ಹೇಳಿದೆ. ಹೇಗೆ ಮಾಡಬೇಕೆಂಬುದನ್ನೂ ತೋರಿಸಿದೆ. ಅವನು ಉತ್ಸಾಹದಿಂದ ಆ ಕೆಲಸದಲ್ಲಿ ತೊಡಗಿಕೊಂಡ. ಅವನ ಪ್ರಯತ್ನಗಳು ನೋಡುವ ಹಾಗಿದ್ದವು. ಅವನು ಒಂದು ಮಣಿಯನ್ನು ಇನ್ನೊಂದರ ಮೇಲಿಡುತ್ತ ಹೋದಂತೆ, ಕೆಲವೊಮ್ಮೆ ಬಾಗುತ್ತಿದ್ದ, ಕೆಲವೊಮ್ಮೆ ಒರಗುತ್ತಿದ್ದ, ಕೆಲವೊಮ್ಮೆ ಮಂಡಿಯ ಮೇಲೆ ಕುಳಿತಿರುತ್ತಿದ್ದ, ಮಣಿಗಳನ್ನು ಕೈಯಲ್ಲಿ ಇಟ್ಟುಕೊಳ್ಳುತ್ತಿದ್ದ, ಕೆಲವೊಮ್ಮೆ ಕಾಲಿನ ಮೇಲೆಯೂ ಇಟ್ಟುಕೊಳ್ಳುತ್ತಿದ್ದ. ಏನೇ ಹೆಣಗಾಡಿದರೂ ಒಂದರ ಮೇಲೊಂದರಂತೆ ಎರಡು ಮೂರು ಮಣಿಗಳನ್ನು ಇಡಲೂ ಅವನಿಂದಾಗಲಿಲ್ಲ. ಹತ್ತು ನಿಮಿಷ ಒದ್ದಾಡಿದ. ಆಮೇಲೆ, ನಿರಾಶೆಗೊಂಡು ಈ ಚಟುವಟಿಕೆಯನ್ನು ಬಿಡಲು ಸಿದ್ಧನಾದ. ಹಾಗಾಗಿ ನಾನು ಅವನಿಗೆ ಎರಡನೆಯ ಅಭ್ಯಾಸವನ್ನು ನೀಡಿದೆ. ಮಣಿಗಳನ್ನು ದಾರದಲ್ಲಿ ಪೋಣಿಸಲು ಹೇಳಿದೆ. ಅವನು ಅದೇ ಉತ್ಸಾಹದಲ್ಲಿ ಕೆಲಸ ಮಾಡಲು ಆರಂಭಿಸಿದ. ಈ ಬಾರಿ ಕೆಲಸವು ಹಿಂದಿನದಕ್ಕಿಂತಲೂ ಸುಲಭವಾಗಿತ್ತು. ಆದರೆ ಅದರಲ್ಲಿ ಕಷ್ಟವಿರಲಿಲ್ಲವೆಂದಲ್ಲ. ದಾರದ ತುದಿಯಲ್ಲಿ ಎಳೆಗಳು ಬಿಚ್ಚಿಕೊಂಡಿದ್ದ ಕಾರಣ ಮಣಿಗಳಲ್ಲಿ ಸುಲಭವಾಗಿ ಹೋಗುತ್ತಿರಲಿಲ್ಲ. ಅಂತೂ ಕೊನೆಗೆ, ಅವನ ಶ್ರಮ ಫಲ ಕೊಟ್ಟಿತು. ಮಣಿಗಳನ್ನು ಪೋಣಿಸುವಲ್ಲಿ ಅವನು ಯಶಸ್ವಿಯಾಗಿದ್ದ. ಅಲ್ಲಿಯ ತನಕ ಅವನು ಪ್ರಯಾಸ–ಪಡುತ್ತಿದ್ದುದನ್ನು ನೋಡಿ ಬೆವರತೊಡಗಿದ್ದ ನಾನೂ ನಿರಾಳವಾಗಿ ಉಸಿರಾಡಿದೆ.

ಆ ಚಟುವಟಿಕೆಯ ನಂತರ, ಪ್ರತಿಯೊಂದು ಮಗುವಿನಿಂದಲೂ ಒಂದೊಂದು ಹಾಡು ಹೇಳಿಸಿದೆ. ಅವರ ಸಾಮರ್ಥ್ಯ ಹಾಗೂ ಆಸಕ್ತಿಗೆ ಅನುಗುಣವಾಗಿ ಅವರ ನೋಟ್ ಬುಕ್‌ಗಳಲ್ಲಿ ಮನೆಕೆಲಸವನ್ನು ಬರೆದುಕೊಟ್ಟೆ. ಇಡೀ ದಿನದ ಚಟುವಟಿಕೆಗಳು, ಓಡುವುದು, ಜಿಗಿಯುವುದು ಮುಂತಾದವುಗಳ ಕಾರಣ ನನ್ನ ಮೈ ಮತ್ತು ಮನಸ್ಸು ಎರಡೂ ದಣಿದಿದ್ದವು. ತರಗತಿಯ ನಂತರ ನನಗೆ ಸ್ವಲ್ಪ ಶಾಂತಿ ಮತ್ತು ಬಿಡುವು ಬೇಕಾಗಿತ್ತು. ಮರುದಿನದ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗಿದ್ದರಿಂದ ಅದು ಕಷ್ಟ. ತರಗತಿ ಕೊಠಡಿಯಲ್ಲಿನ ಪ್ರಕ್ರಿಯೆಗಳು ಯಶಸ್ವಿಯಾಗಬೇಕಾದರೆ, ಪ್ರಾಯೋಗಿಕವಾದ ಹಾಗೂ ಫಲಪ್ರದವಾದ ಯೋಜನೆಗಳನ್ನು ಹಾಕಿಕೊಳ್ಳುವುದು ತುಂಬಾ ಮುಖ್ಯ. ಮಕ್ಕಳ ಪ್ರೀತಿ ಹಾಗೂ ಏನನ್ನಾದರೂ ಮಾಡಬೇಕೆಂಬ ಇಚ್ಛಾಶಕ್ತಿಯು ನಮಗೆ ಕೆಲಸ ಮಾಡಲು ಚೈತನ್ಯವನ್ನು ನೀಡುತ್ತದೆ. ನಂತರ ನಮ್ಮ ಮನಸ್ಸು ಮತ್ತು ಹೃದಯವನ್ನು ಕೆಲಸದಲ್ಲಿ ತೊಡಗಿಸಲು ಸುಲಭವಾಗುತ್ತದೆ. ಇಂದಿನ ದಿನವನ್ನು ನಾನು ತುಂಬಾ ಆನಂದಿಸಿದೆ.. ನಾನು ನಿಧಾನವಾಗಿ ನನ್ನ ಗುರಿಯತ್ತ ಸಾಗುತ್ತಿದ್ದೇನೆ ಹಾಗೂ ಮಕ್ಕಳ ಕೆಲಸ ಮತ್ತು ಪ್ರೀತಿಯಿಂದಾಗಿ ಖಂಡಿತವಾಗಿಯೂ ಯಶಸ್ವಿಯಾಗುತ್ತೇನೆ ಎಂದು ನನಗೆ ಅನ್ನಿಸುತ್ತಿದೆ.



**ಗಜೇಂದ್ರ ಕುಮಾರ್ ದೇವಾಂಗನ್** ಅವರು ವಿಜ್ಞಾನದಲ್ಲಿ ಪದವಿ ಹಾಗೂ ಹಿಂದಿ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಅವರು D.Ed ಕೂಡ ಪೂರೈಸಿದ್ದು, ಪ್ರಸ್ತುತ ಛತ್ತೀಸ್‌ಗಡ್‌ನ ಧಾಮ್‌ತರಿಯಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಶನ್ ಶಾಲೆಯಲ್ಲಿ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದಕ್ಕೂ ಮೊದಲು, ಹನ್ನೆರಡು ವರ್ಷಗಳ ಕಾಲ ಅವರು ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಅವರು ವಿಶೇಷವಾಗಿ ಹಿಂದಿ ಭಾಷೆಯಲ್ಲಿ ಮಕ್ಕಳಿಗಾಗಿ ಚಿತ್ರಗಳು, ಆಟಗಳು, ಕವಿತೆಗಳು, ಕಥೆಗಳು ಹಾಗೂ ಚಟುವಟಿಕೆಗಳನ್ನು ಸಿದ್ಧಪಡಿಸುವುದರಲ್ಲಿ ಆಸಕ್ತಿಯನ್ನು ಹೊಂದಿದ್ದಾರೆ. ಪಠ್ಯಪುಸ್ತಕಗಳಲ್ಲಿ ಇರುವ ಕವಿತೆಗಳಿಗೆ ರಾಗ ಸಂಯೋಜಿಸುವುದು ಮತ್ತು ಡೋಲಕ್ ನುಡಿಸುತ್ತಾ ಮಕ್ಕಳೊಂದಿಗೆ ನೃತ್ಯ ಮಾಡುವುದೆಂದರೆ ಅವರಿಗೆ ತುಂಬಾ ಇಷ್ಟ. ಇವರನ್ನು gajendra.dewangan@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಲತಾ ಕೆ ಸಿ**

# ಸಂತಸದಾಯಕ ಕಲಿಕೆಯ ಮೂಲಕ ಸಾಕ್ಷರತೆಯ ಸಾಧನೆ

ಇಂದಿರಾ ವಿಜಯಸಿಂಹ

ದಕ್ಷಿಣ ಒಡಿಶಾದ ರಾಯಗಢ ಜಿಲ್ಲೆಯ ತಲುಪಲು ದುರ್ಗಮವಾದ ಕೊಂಪೆಯಲ್ಲಿ ಕಾಶೀಪುರ ಎಂಬ ಪ್ರಶಾಂತವಾದ ಗ್ರಾಮವಿದೆ. ಸೌಮ್ಯವಾದ ಅಲೆಯಲೆಯಂತಿರುವ ಬೆಟ್ಟಗಳು, ನದಿಗಳಿಂದ ಸುತ್ತುವರೆದ ಗ್ರಾಮದ ಪರಿಸರ ಒಂದು ಪರಿಪೂರ್ಣ ಚಿತ್ರದಂತಿದೆ. ಚಿತ್ತನೆಯಾದ ಚೌಕುಳಿ ಗದ್ದೆಗಳಿಂದ ಕೂಡಿದ ಬೆಟ್ಟದ ತಪ್ಪಲು ಬಣ್ಣಬಣ್ಣದ ಹೊದಿಕೆ ಹೊದ್ದಂತೆ, ಪ್ರಕೃತಿಯಲ್ಲಿ ಹಸಿರಿನ ವಿವಿಧ ಛಾಯೆಗಳು ನೋಡುಗನನ್ನು ಬೆರಗುಗೊಳಿಸುತ್ತವೆ.

ಇಲ್ಲಿನ ಜನರ ಬದುಕಿನ ವಾಸ್ತವಿಕತೆಯೋ, ಸುತ್ತಲಿನ ಪ್ರಕೃತಿಯ ಪರಿಪೂರ್ಣತೆಗೆ ವ್ಯತಿರಿಕ್ತವಾಗಿದೆ. ಸುತ್ತಲಿನ ಬೆಟ್ಟಗಳು ಸಮೃದ್ಧ ಅದಿರಿನ ನಿಕ್ಷೇಪದಿಂದ ಕೂಡಿದ್ದು, ಇದರಿಂದಾಗಿ ಗಣಿಗಾರಿಕೆಯ ಕಂಪನಿಗಳ ಭಾರೀ ಶಬ್ದದ ಯಂತ್ರಗಳು ಹಾಗೂ ಬೃಹದಾಕಾರದ ಲಾರಿಗಳು ಇತ್ತ ಬಂದಿವೆ. ಗ್ರಾಮದಲ್ಲಿ ಬಹುತೇಕ ಬುಡಕಟ್ಟು ಜನರೇ ಇದ್ದು, ಅತೀವ ಬಡತನವನ್ನು ಎದುರಿಸುತ್ತಿದ್ದಾರೆ. ಇಲ್ಲಿನ ಜನರು ವಸಾಹತುಶಾಹಿ ಆಡಳಿತಗಾರರು ಹಾಗೂ ವಸಾಹತೋತ್ತರ ಆಡಳಿತಗಾರರ ಶೋಷಣೆಯ ಜೊತೆಗೆ ಮಲೇರಿಯಾದಂತಹ ಸಾಂಕ್ರಾಮಿಕ ರೋಗಕ್ಕೆ ಸಿಲುಕಿ ನಲುಗಿದ್ದಾರೆ. ಸಾಕ್ಷರತೆಯ ಪ್ರಮಾಣವು ಅಲ್ಪವಾಗಿದ್ದು, ಸುಮಾರು ಮೂವತ್ತು ವರ್ಷಗಳ ಹಿಂದೆ ಇಲ್ಲಿ ಯಾವುದೇ ರೀತಿಯ ಶಾಲೆಗಳೇ ಇರಲಿಲ್ಲ. **ಅಗ್ರಗಾಮೀ** ಸಂಘಟನೆಯು ಈ ಗ್ರಾಮದಲ್ಲಿ ತಳಮಟ್ಟದಲ್ಲೇ ಸಕ್ರಿಯವಾಗಿದ್ದು, ಇಲ್ಲಿನ ಸಮುದಾಯಗಳೊಂದಿಗೆ ಕೈಜೋಡಿಸಿ ಅವರಿಗೆ ತಮ್ಮ ಹಕ್ಕುಗಳನ್ನು ಖಾತ್ರಿಪಡಿಸುವ ಮತ್ತು ಶೋಷಣೆಯ ವಿರುದ್ಧ ಅವರನ್ನು ಸಬಲರನ್ನಾಗಿ ಮಾಡುವ ಗುರಿಯನ್ನು ಹೊಂದಿದೆ. ಸರ್ಕಾರವು ಈ ಪ್ರದೇಶದಲ್ಲಿ ಶಾಲೆಗಳನ್ನು ಪ್ರಾರಂಭಿಸುವ ಮೊದಲೇ **ಅಗ್ರಗಾಮಿ**ಯು ಕಾಶೀಪುರದ ಸುತ್ತಮುತ್ತಲಿನ ಗ್ರಾಮಗಳ ಹಾಡಿಗಳಲ್ಲಿ ರಾತ್ರಿ ಶಾಲೆಗಳನ್ನು ತೆರೆದಿತ್ತು; ಇಂದಿಗೂ ಈ ಶಾಲೆಗಳಲ್ಲಿ ಓದಲು, ಬರೆಯಲು ಕಲಿತ ಹದಿಹರೆಯದ ಯುವಕ, ಯುವತಿಯರು ಆ ದಿನಗಳ ಅಸಾಧಾರಣ ಸಂಭ್ರಮ, ಸಡಗರಗಳನ್ನು ಮೆಲಕುಹಾಕುತ್ತಾರೆ. ಕೊನೆಗೂ ಸರ್ಕಾರವು ಇಲ್ಲಿನ ಮಕ್ಕಳಿಗೆ ಶಿಕ್ಷಣವನ್ನು ನೀಡುವ ಜವಾಬ್ದಾರಿಯನ್ನು ವಹಿಸಿಕೊಂಡ ಬಳಿಕ **ಅಗ್ರಗಾಮಿ**ಯು ಜನರ ಜೀವನೋಪಾಯ ಹಾಗೂ ಆರೋಗ್ಯ ಸಮಸ್ಯೆಗಳತ್ತ ತನ್ನ ಗಮನವನ್ನು ಕೇಂದ್ರೀಕರಿಸಲು ನಿರ್ಧರಿಸಿತು. ಇಲ್ಲಿ ಶಾಲೆಗಳಿದ್ದರೂ ಕೂಡಾ ಮಕ್ಕಳು ಬಹುಬೇಗನೆ ಶಾಲೆ ತೊರೆಯುತ್ತಿದ್ದು, ತಲೆತಲಾಂತರಗಳ ಅನಕ್ಷರತೆ ಮತ್ತು ಬಡತನದಿಂದಾಗಿ ಇಲ್ಲಿನ ಹೆಣ್ಣುಮಕ್ಕಳು ಅತ್ಯಂತ ಶೋಚನೀಯ ಸ್ಥಿತಿಯಲ್ಲಿದ್ದಾರೆ ಎಂಬ ವಿಷಾದಕರ ಸಂಗತಿಯನ್ನು ಅವರು ಕಂಡುಕೊಂಡರು. ಸುಮಾರು ಹದಿನೈದು ವರ್ಷಗಳ ಹಿಂದೆ, **ಅಗ್ರಗಾಮಿ**ಯು ಹೆಣ್ಣುಮಕ್ಕಳಿಗಾಗಿ ಮುಕ್ತಜ್ಞಾನ ಕುಟೀರ (Mukta Gyana Kutir-MGK) ಎಂಬ ಒಂದು ಪ್ರಾಥಮಿಕ ಶಾಲೆಯನ್ನು ಆರಂಭಿಸಿತು.

**ಆವಿಷ್ಕಾರದ ಅಗತ್ಯತೆ**

ಬೇರೆ ಕಡೆಗಳಂತೆ **ಅಗ್ರಗಾಮಿ** ಶಾಲೆಯಲ್ಲಿಯೂ ಶಿಕ್ಷಕರು ಸಾಂಪ್ರದಾಯಿಕ ಬೋಧನಕ್ರಮವನ್ನು ಅನುಸರಿಸುತ್ತಿದ್ದರು. ಮೊದಲು ಅಕ್ಷರಗಳ ಬಗ್ಗೆ ಗಮನಹರಿಸಿ, ಬಳಿಕ ಪಠ್ಯಪುಸ್ತಕಗಳನ್ನು ಜೋರಾಗಿ ಓದುತ್ತಿದ್ದರು, ಶಿಕ್ಷಕರನ್ನು ಅನುಸರಿಸಿ ಮಕ್ಕಳು ಅವನ್ನು ಪುನರುಚ್ಚರಿಸುತ್ತಿದ್ದರು. ಇದನ್ನು ನೋಡಿದ **ಅಗ್ರಗಾಮಿ**ಯ ಜಂಟಿ ನಿರ್ದೇಶಕಿ ವಿದ್ಯಾ ದಾಸ್ ಅವರು ಬೇಸರ ವ್ಯಕ್ತಪಡಿಸಿದರು. ಇದನ್ನು "ಶಿಕ್ಷಕರ ಬೇಸರ ತರಿಸುವ ಧ್ವನಿಯ ಮುಸುಕಿನಡಿ ಮಕ್ಕಳ ಸೃಜನಶೀಲ ಸಾಮರ್ಥ್ಯವು ಉಸಿರುಗಟ್ಟುತ್ತಿತ್ತು" ಎಂದು ಅವರು ವಿವರಿಸಿದ್ದಾರೆ. ಮುಂದುವರಿದು ಅವರು, "…ಶಾಲಾ ಶಿಕ್ಷಣದಲ್ಲಿ ಮಕ್ಕಳಿಗೆ ಅವರ ಬುದ್ಧಿಮತ್ತೆ ಹಾಗೂ ಗ್ರಹಣಶಕ್ತಿ ಸಾಮರ್ಥ್ಯಗಳನ್ನು ಸೃಜನಾತ್ಮಕ ಮತ್ತು ಆಸಕ್ತಿದಾಯಕ ರೀತಿಗಳಲ್ಲಿ ಬಳಸಿಕೊಳ್ಳಲು ಅವಕಾಶ ಮತ್ತು ಪ್ರೋತ್ಸಾಹವನ್ನು ನೀಡದೇ, ಯಾಂತ್ರಿಕ ಕಂಠಪಾಠಕ್ಕೆ ಅತಿಯಾದ ಒತ್ತು ನೀಡುತ್ತಿದ್ದರೆ, ಇದು ಮಕ್ಕಳ ಮಾನಸಿಕ ಬೆಳವಣಿಗೆಯ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ. ಇದರಿಂದ ಆಸಕ್ತಿಯು ಕಡಿಮೆಯಾಗಿ, ಕಲಿಕೆಯ ವೇಗ ಕುಂಠಿತವಾಗುತ್ತದೆ. ಹೀಗಾದಾಗ, ಮೂಲ ಸಾಕ್ಷರತಾ ಕೌಶಲಗಳನ್ನು ಗಳಿಸಲು ಮಕ್ಕಳಿಗೆ ಸಾಮಾನ್ಯಕ್ಕಿಂತ ಎರಡರಷ್ಟು ಹೆಚ್ಚು ಸಮಯ ಬೇಕಾಗುತ್ತದೆ' ಎನ್ನುತ್ತಾರೆ (**ಅಗ್ರಗಾಮೀ**, ವಾರ್ಷಿಕ ವರದಿ, 2016–17).

ವಿದ್ಯಾ ದಾಸ್ ಅವರ ಈ ಕಾಳಜಿಯು "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ" (Creative Language Development Effort) ಅಥವಾ ಸಿ.ಎಲ್.ಡಿ.ಇ. ಎಂಬ ಸಾಕ್ಷರತೆಯನ್ನು ಬೋಧಿಸುವ ಒಂದು ಹೊಸ ವಿಭಿನ್ನ ವಿಧಾನದ ಆವಿಷ್ಕಾರಕ್ಕೆ ಕಾರಣವಾಯಿತು. ಈ ವಿಧಾನದಲ್ಲಿ ಸಾಂಪ್ರದಾಯಿಕ ಪ್ರಕ್ರಿಯೆಯನ್ನು ಕೈಬಿಟ್ಟು, ಹೆಚ್ಚು ಮಗು ಕೇಂದ್ರಿತವಾದ ಮತ್ತು ಸಮಗ್ರ ಭಾಷಾವಿಧಾನವನ್ನು ಕೈಗೆತ್ತಿಕೊಳ್ಳಲಾಯಿತು. ಈ ವಿಧಾನದಲ್ಲಿ ಮಕ್ಕಳಿಗೆ ಆಗಲೇ ತಿಳಿದಿರುವ ಪದಗಳು, ವಸ್ತುಗಳು, ನಾಮಪದಗಳು, ಅವರು ಸುಲಭವಾಗಿ ನೆನಪಿನಲ್ಲಿಡಬಹುದಾದ ವಿನೋದವಾದ ಪ್ರಾಸಬದ್ಧ ಶಿಶುಗೀತೆಗಳು ಮತ್ತು ಹಾಡುಗಳ ಮೂಲಕ ಶಬ್ದೋಚ್ಚಾರಣೆಯ ಗ್ರಹಿಕೆಯನ್ನು ಮಕ್ಕಳಿಗೆ ದಾಟಿಸಲಾಗುತ್ತದೆ. ಈ ರೀತಿಯ ಕಲಿಕೆಯು ಹೆಚ್ಚು ಸಹಜವಾದ್ದರಿಂದ ಶೀಘ್ರ ಫಲಪ್ರದವೂ ಆಗಿ, ಮಗು ಹಾಗು ಶಿಕ್ಷಕರ ಮೇಲಿನ ಒತ್ತಡ ಕಡಿಮೆಯಾಗುತ್ತದೆ.

**"ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ" (ಸಿ.ಎಲ್.ಡಿ.ಇ.) ಎಂದರೇನು?**

"ಮುಕ್ತ ಜ್ಞಾನ ಕುಟೀರ" ಶಾಲೆಯಲ್ಲಿನ ಮಾದರಿಯನ್ನು ಆಧರಿಸಿ ಅಭಿವೃದ್ಧಿಗೊಳಿಸಿದ ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನವು ಬುಡಕಟ್ಟು ಜಿಲ್ಲೆಗಳ ಸರ್ಕಾರಿ ಶಾಲೆಗಳಲ್ಲಿ ಸಾಕ್ಷರತಾ ಕಾರ್ಯಕ್ರಮವನ್ನು ಬಲಪಡಿಸಲು ಮಾಡಿದ ಒಂದು ಪ್ರಯತ್ನವಾಗಿತ್ತು. ಒಡಿಶಾದ ಬುಡಕಟ್ಟು ಜಿಲ್ಲೆಗಳಲ್ಲಿ ಶಾಲೆಗೆ ತೆರಳುವ ಮೊದಲ ತಲೆಮಾರಿನ ಮಕ್ಕಳ ಓದು ಹಾಗೂ ಭಾಷಾ ಸಾಮರ್ಥ್ಯಗಳನ್ನು ಸುಧಾರಿಸುವುದೇ ಇದರ ಗುರಿಯಾಗಿತ್ತು. ಇಲ್ಲಿನ ಸಮುದಾಯಕ್ಕೆ ಶಾಲಾಶಿಕ್ಷಣ ಅಥವಾ ಸಾಕ್ಷರತೆಗಳ

ಗಂಧವೇ ಇರಲಿಲ್ಲ. ಈ ವಿಭಾಗದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ ಅರ್ಹತೆಗಳು ಕಳಪೆಯಾಗಿದ್ದು, ಅವರಿಗೆ ಕಲಿಕಾ ಪ್ರೇರಣೆಯೂ ನಿರೀಕ್ಷಿತ ಮಟ್ಟದಲ್ಲಿರಲಿಲ್ಲ. ಇದರಿಂದಾಗಿ, ಪ್ರಾಥಮಿಕ ಶಿಕ್ಷಣ ಮುಗಿಸುವ ಬಹುತೇಕ ಮಕ್ಕಳು ಓದುವ ಕೌಶಲವನ್ನೇ ಪಡೆಯದೆ ಹೋಗುತ್ತಿದ್ದರು. "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ದ ವಿಧಾನವು ಅನೇಕ ಅನನ್ಯ ಲಕ್ಷಣಗಳನ್ನು ಒಳಗೊಂಡಿದೆ. ವರ್ಣಮಾಲೆ ಕೇಂದ್ರಿತ ಕಲಿಕಾ ವಿಧಾನದ ಬದಲಾಗಿ ಅಂತರ್ಬೋಧೆಯ ಸಾಕ್ಷರತಾ ಕಲಿಕೆಯ ಮೂಲಕ ಸಹಜ ಭಾಷಾ ಕಲಿಕೆಗೆ ಈ ವಿಧಾನವು ಒತ್ತು ಕೊಡುತ್ತದೆ. ಈ ವಿಧಾನವು, ಕುಟುಂಬ ಮತ್ತು ಮನೆ, ಪರಿಚಿತ ವಸ್ತುಗಳು, ಶಿಶುಗೀತೆಗಳು ಹಾಗೂ ಕಥೆಗಳಿಂದ ಆರಂಭಿಸಿ ಅರ್ಥಪೂರ್ಣ ಪದಗಳು, ವಾಕ್ಯಗಳು, ಮತ್ತು ವಿಚಾರಗಳ ಮೂಲಕ ಮಕ್ಕಳನ್ನು ಲಿಖಿತ ಭಾಷೆಗೆ ಪರಿಚಯಿಸಿ, ಅದರಲ್ಲೇ ಮಗ್ನರಾಗುವಂತೆ ಮಾಡುವ ಮೂಲಕ ಮಕ್ಕಳು ಓದುವ ಉಚ್ಚಾರಣೆಯನ್ನು ಕಲಿಯಲು ಸಜ್ಜುಗೊಳಿಸುತ್ತದೆ. ಮಕ್ಕಳನ್ನು ಬರೆಯಲು ಪ್ರೋತ್ಸಾಹಿಸುವುದರಿಂದ ಅಕ್ಷರಗಳಿಗೂ ಪದದ ಶಬ್ದಕ್ಕೂ ನಡುವೆ ಇರುವ ಸಂಬಂಧಗಳನ್ನು ಸ್ಥಾಪಿಸಲಾಗುತ್ತದೆ. ಹೀಗೆ, ಓದುವುದು, ಬರೆಯುವುದು ಹಾಗೂ ಸಾಕ್ಷರತಾ ಬೆಳವಣಿಗೆಗಳು ಒಂದಕ್ಕೊಂದು ಪೂರಕವಾಗಿ ಸಾಗುತ್ತವೆ. ಈ ಕಾರ್ಯಕ್ರಮವು ಸಾಕ್ಷರತೆ ಹಾಗೂ ಓದುವಿಕೆ ಬೆಳವಣಿಗೆಯ ಅನನ್ಯ ರಚನಾತ್ಮಕ ಮಾದರಿಯನ್ನು ಆಧರಿಸಿದೆ.

**"ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ದ ಹಂತಗಳು**

"ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ವು ಮಕ್ಕಳ ಪ್ರಾಥಮಿಕ ಭಾಷಾ ಹಾಗೂ ಕಲಿಕಾ ಸಾಮರ್ಥ್ಯಗಳ ಆಧಾರದಲ್ಲಿ ರಚಿಸಲಾಗಿದೆ. ಮಕ್ಕಳು ತಮ್ಮ ಆರನೇ ವಯಸ್ಸಿಗೆ ಔಪಚಾರಿಕ ಶಾಲಾ ಶಿಕ್ಷಣಕ್ಕೆ ಪ್ರವೇಶಿಸುವ ಹೊತ್ತಿಗೆ ಅವರಿಗೆ, ಕಡಿಮೆ ಎಂದರೂ, ಒಂದು ಭಾಷೆಯಾದರೂ ತಿಳಿದಿರುತ್ತದೆ. ಮಕ್ಕಳು ತಮ್ಮ ಆರನೇ ವಯಸ್ಸಿಗೆ ಸುಮಾರು 2000ಕ್ಕೂ ಹೆಚ್ಚು ಪದಗಳನ್ನು ಬಳಸುವುದಲ್ಲದೇ, ಅದಕ್ಕಿಂತಲೂ ಹೆಚ್ಚು ಪದಗಳನ್ನು ಅರ್ಥಮಾಡಿಕೊಳ್ಳಬಲ್ಲರು ಎಂದು ಸಂಶೋಧನೆಗಳು ಹೇಳುತ್ತವೆ. ಅವರು ಸಂಪೂರ್ಣ ವಾಕ್ಯಗಳಲ್ಲಿ ತಮ್ಮನ್ನು ಅಭಿವ್ಯಕ್ತಿಸಬಲ್ಲರು. ಯಾವುದಾದರೂ ಒಂದು ಘಟನೆಯ ಬಗ್ಗೆ ಮಾತನಾಡಬಲ್ಲರು ಅಥವಾ ಕಥೆಗಳನ್ನು ಹೇಳಬಲ್ಲರು. ಮಾತಿನ ಪದಗಳ ಮೂಲಕ ಮಕ್ಕಳು ತಮ್ಮ ಜಗತ್ತನ್ನು ಸಕ್ರಿಯವಾಗಿ ಅರ್ಥಮಾಡಿಕೊಳ್ಳಬಲ್ಲರು ಎಂಬುದು ಸಿದ್ಧವಾದ ಬಳಿಕ "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ವು ಲಿಖಿತ ಭಾಷೆಯ ಜಗತ್ತಿಗೆ ಮಕ್ಕಳನ್ನು ಪರಿಚಯಿಸಲು ಪದಗಳೆಡೆಗೆ ಗಮನ ಕೇಂದ್ರೀಕರಿಸುತ್ತದೆ. ಅದಕ್ಕಾಗಿ ಅನುಸರಿಸುವ ಹಂತಗಳು ಇಂತಿವೆ:

- ಅರ್ಥಪೂರ್ಣ ಪದಗಳ ಮೂಲಕ ಅಕ್ಷರಜ್ಞಾನದ ಸೂಚನೆಯನ್ನು ಮೊದಲು ಪ್ರಾರಂಭಿಸುವುದು: ವರ್ಣ–ಮಾಲೆಯ ಅಕ್ಷರಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದರ ಮೂಲಕ ಆರಂಭಿಸುವ ಬದಲು "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ದಲ್ಲಿ ಮಕ್ಕಳಿಗೆ ಸಂಪೂರ್ಣ ಪದಗಳನ್ನು ನೇರವಾಗಿ ಪರಿಚಯಿಸಲಾಗುತ್ತದೆ. ಆ ಪದಗಳು ಅವರದೇ ಹೆಸರಾಗಿರಬಹುದು, ಇಲ್ಲವೇ, ಅವರಿಗೆ ಪರಿಚಯವಿರುವ ವಸ್ತುಗಳು, ಪ್ರಾಣಿಗಳು ಮತ್ತು ಪಕ್ಷಿಗಳ ಹೆಸರಾಗಿರಬಹುದು. ಮಗುವಿನ ಮನೆಭಾಷೆಯಲ್ಲಿ ಈ ವಸ್ತು ಅಥವಾ ಪ್ರಾಣಿಯನ್ನು ನಿರ್ದೇಶಿಸುವ ಪದವು ಭಿನ್ನವಾಗಿದ್ದಲ್ಲಿ, ಮಗುವು ಈ ಎರಡು ಪದಗಳೂ ಒಂದೇ ವಸ್ತುವನ್ನು ಅಥವಾ ಒಂದೇ ಅರ್ಥವನ್ನು ನಿರ್ದೇಶಿಸುತ್ತವೆ ಎಂಬುದನ್ನು ಅರ್ಥಮಾಡಿಕೊಳ್ಳಲು ಶಿಕ್ಷಕರು ನೆರವಾಗುತ್ತಾರೆ. ಬರವಣಿಗೆಯಲ್ಲಿರುವಂತೆ ಪದವನ್ನು ಉಚ್ಚರಿಸಲು ಮಗುವಿಗೆ ನೆರವಾಗುವುದರ ಜೊತೆಗೆ, ಅದು ತನ್ನ ಮನೆಯ ಆಡುಭಾಷೆಯಲ್ಲಿ ಭಿನ್ನ ಪದವನ್ನು ಬಳಸುತ್ತದೆ ಎಂಬುದನ್ನು ಗುರುತಿಸಲು ಶಿಕ್ಷಕರು ನೆರವಾಗುತ್ತಾರೆ.

- ಮಕ್ಕಳು ಸಂಪೂರ್ಣ ಪದಗಳನ್ನು ಬರೆಯುವುದನ್ನು ಅಭ್ಯಸಿಸಲು ಅವಕಾಶ ಮಾಡಿಕೊಡುವುದು: ಬರವಣಿಗೆಯಲ್ಲಿನ ಪದಗಳನ್ನು ಪರಿಚಯಿಸಿಕೊಳ್ಳುವ ಪ್ರಕ್ರಿಯೆಯ ಅಂಗವಾಗಿ ಮಕ್ಕಳು ತಾವು ಕಲಿತ ಪದಗಳನ್ನು ಬರೆದು ಅಭ್ಯಾಸ ಮಾಡುತ್ತಾರೆ.

- ಆಟ ಹಾಗೂ ಚಟುವಟಿಕೆಗಳ ಮೂಲಕ ಪದಗಳ ಗುರುತಿಸುವಿಕೆಯನ್ನು ಬೆಳೆಸುವುದು: ಮಕ್ಕಳು ಸಂಪೂರ್ಣ ಪದಗಳನ್ನು ಕಲಿಯಲು ಆರಂಭಿಸಿದಾಗ, ಚಿತ್ರಗಳನ್ನು ಪದಗಳೊಂದಿಗೆ ಹೊಂದಿಸುವ, ಖಾಲಿ ಬಿಟ್ಟ ಅಕ್ಷರವನ್ನು ತುಂಬುವ, ಪದ ಹೊಂದಿಸುವ ಹಾಗು ಬಿಂಗೋ ಆಟಗಳಂತಹ ವಿವಿಧ ಆಟಗಳು ಮತ್ತು ಚಟುವಟಿಕೆಗಳ ಮೂಲಕ ಪದಗಳ ಗುರುತಿಸುವಿಕೆಯನ್ನು ಬೆಳೆಸುವುದು.

- ಹಾಡುಗಳು ಹಾಗೂ ಪ್ರಾಸಬದ್ಧ ಶಿಶುಗೀತೆಗಳ ಕಲಿಕೆ: ಮಕ್ಕಳು ಶಿಶುಗೀತೆಗಳನ್ನು ಮತ್ತು ಹಾಡುಗಳನ್ನು ಹಾಡುವುದರಲ್ಲಿ ಖುಷಿ ಅನುಭವಿಸುತ್ತಾರೆ. ಅವರು ತಾವು ಕಲಿತ ಹಾಡುಗಳನ್ನು ಹಾಡುವಾಗ ಅಥವಾ ಪ್ರಾಸಗಳನ್ನು ಒಪ್ಪಿಸುವಾಗ ಲಿಖಿತ–ರೂಪದಲ್ಲಿರುವ ಆ ಹಾಡುಗಳು ಹಾಗು ಶಿಶುಗೀತೆಗಳ ಲಿಖಿತ ರೂಪವನ್ನು ಅವರಿಗೆ ಒದಗಿಸಲಾಗುತ್ತದೆ, ಆದ್ದರಿಂದ ಹಾಡುವಾಗ ಅವರು ಅದನ್ನು ಅನುಸರಿಸಲು ಸಾಧ್ಯವಾಗುತ್ತದೆ. ಅದೇ ಪ್ರಾಸಬದ್ಧ ಶಿಶುಗೀತೆಗಳನ್ನು ಅಥವಾ ಹಾಡನ್ನು ಬೇರೆಬೇರೆ ಭಾಷೆಗಳಿಗೆ ಅನುವಾದಿಸಿ ಕೂಡ ಹಾಡಬಹುದು. ಇದನ್ನು ಮಾಡುವುದರಿಂದ ತಮ್ಮ ಆಡುಭಾಷೆ ಬೇರೆ ಇರುವ ಮಕ್ಕಳೂ ಈ ಪ್ರಕ್ರಿಯೆಯಲ್ಲಿ ಒಳಗೊಂಡ ಭಾವನೆಯನ್ನು ಅನುಭವಿಸುವಂತಾಗುತ್ತದೆ.

- ಕಥೆ ಪುಸ್ತಕಗಳನ್ನು ಪರಿಚಯಿಸುವುದು: ಓದುವ ಹಾಗೂ ಬರವಣಿಗೆಯ ಮೂಲಕ ಮಕ್ಕಳಿಗೆ ಲಿಖಿತ ಪದಗಳ ಪರಿಚಯ ಆಗುತ್ತಿದ್ದಂತೆಯೇ, ಅವುಗಳನ್ನು ಜೋರಾಗಿ ಓದುವುದು ಹಾಗೂ ಪುಸ್ತಕ ಪರಿಚಯಕ್ಕೆ ಸಂಬಂಧಿಸಿದ ಇತರ ಚಟುವಟಿಕೆಗಳನ್ನು ನಡೆಸುವುದರ ಮೂಲಕ ಮಕ್ಕಳನ್ನು ಕಥಾಪುಸ್ತಕಗಳ ಲೋಕಕ್ಕೆ ಪರಿಚಯಿಸಲಾಗುತ್ತದೆ.

- ಮಕ್ಕಳು ಬರವಣಿಗೆಯ ಮೂಲಕ ತಮ್ಮನ್ನು ಅಭಿವ್ಯಕ್ತಿಸಲು ಉತ್ತೇಜಿಸುವುದು: "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ದ ವಿಧಾನದಲ್ಲಿ ಓದುವುದು ಮತ್ತು ಬರೆಯುವುದು ಜೊತೆ–ಜೊತೆಯಾಗಿ ಸಾಗುತ್ತದೆ. ತಾವು ಓದಿದ್ದನ್ನು ಹಾಗೂ ತಮ್ಮ ಓದಿಗೆ ಮೀರಿದ್ದನ್ನೂ ಬರೆಯುವಂತೆ ಮಕ್ಕಳನ್ನು ಹುರಿದುಂಬಿಸಲಾಗುತ್ತದೆ.

- ಈಗಾಗಲೇ ಮಕ್ಕಳು ಬಹಳಷ್ಟು ಪೂರ್ಣ ಪದಗಳನ್ನು ಓದಲು ಕಲಿತ ಬಳಿಕ ಅಕ್ಷರ ಮತ್ತು ಮಾತ್ರೆಗಳನ್ನು ಔಪಚಾರಿಕವಾಗಿ ಪರಿಚಯ ಮಾಡಿಕೊಡುವುದು.

### “ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದ ಬೋಧನಕಲೆ

“ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದಲ್ಲಿ ಕೈಜೋಡಿಸುವ ಶಿಕ್ಷಕರ ತರಬೇತಿಯ ಭಾಗವಾಗಿ ಭಾಷೆ ಹಾಗೂ ಸಾಕ್ಷರತೆಗಳ ಪರಿಕಲ್ಪನಾತ್ಮಕ ಗ್ರಹಿಕೆಯನ್ನು ಬೆಳೆಸಿಕೊಳ್ಳಲು ಶಿಕ್ಷಕರಿಗೆ ನೆರವು ನೀಡಲಾಗುವುದು. ಸಾಕ್ಷರತೆ ಎಂದರೆ ಸ್ವತಂತ್ರವಾಗಿ ವಿಚಾರಮಾಡುವ ಸಾಮರ್ಥ್ಯ, ತಾವು ಓದಿದುದನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯ ಹಾಗೂ ವಿಚಾರಗಳನ್ನು, ಆಲೋಚನೆಗಳು ಅಥವಾ ಭಾವನೆಗಳನ್ನು ಬರವಣಿಗೆಯ ಮೂಲಕ ದಾಟಿಸುವ ಸಾಮರ್ಥ್ಯವಾಗಿದೆ. “ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದ ವಿಧಾನದಲ್ಲಿ ಅರ್ಥೈಸಿಕೊಳ್ಳುವುದಕ್ಕೆ (Meaning making) ಪ್ರಾಥಮಿಕ ಪಾತ್ರವನ್ನು ನೀಡಲಾಗಿದ್ದು, ಅಕ್ಷರ–ಶಬ್ದಗಳ ಸಂಬಂಧಾತ್ಮಕ ಜ್ಞಾನದ ಪ್ರಯೋಗವನ್ನು ತದನಂತರ ಪರಿಚಯಿಸಲಾಗುತ್ತದೆ. ಭಾಷೆಯ ಸ್ವಭಾವವು ಶಬ್ದ–ಸಂಕೇತದ ವ್ಯವಸ್ಥೆಯಾಗಿದೆ ಎಂಬುದನ್ನು ಶಿಕ್ಷಕರು ಅರ್ಥ–ಮಾಡಿಕೊಳ್ಳಲು ನೆರವು ನೀಡಲಾಗುತ್ತದೆ. ಮಕ್ಕಳು ಸಹಜವಾಗಿ ತಮ್ಮ ಆಡುಭಾಷೆಯನ್ನು ಕರಗತ ಮಾಡಿಕೊಳ್ಳುವ ವಿಧಾನಗಳ ಬಗ್ಗೆ ಅವರು ಚರ್ಚಿಸುತ್ತಾರೆ. ಮಕ್ಕಳನ್ನು ಗಮನಿಸುವ ಮೂಲಕ ಶಿಕ್ಷಕರು ಮಕ್ಕಳ ಕಲಿಕೆಯಲ್ಲಿ ಆಟದ ಮಹತ್ವವನ್ನು ಅರಿಯುತ್ತಾರೆ. “ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದಲ್ಲಿ ಕೈಜೋಡಿಸುವ ಶಿಕ್ಷಕರ ಬಗ್ಗೆ ಇರುವ ನಿರೀಕ್ಷೆಗಳೆಂದರೆ:

- ಮಕ್ಕಳನ್ನು ಶಿಕ್ಷಿಸುವುದಾಗಲೀ ಅಥವಾ ನಿಂದಿಸುವುದಾಗಲೀ ಮಾಡದೆ, ಭಯರಹಿತವೂ ಮತ್ತು ಸ್ನೇಹಪೂರ್ಣವೂ ಆದ ವಾತಾವರಣವನ್ನು ನಿರ್ಮಿಸುವುದು.

- ಮಕ್ಕಳು ತಮಗೆ ಹಿತವೆನಿಸುವ ಬಯಸುವ ಭಾಷೆಯಲ್ಲಿ ಮುಕ್ತವಾಗಿ ಮಾತನಾಡುವಂತೆ ಪ್ರೋತ್ಸಾಹಿಸುವುದು. ಶಿಕ್ಷಕರು ಮಗುವಿನ ಆಡುಭಾಷೆಯನ್ನು ಮಾತನಾಡಲು ಬಲ್ಲವರಾದರೂ ಇದರಿಂದ ನೆರವಾಗುತ್ತದೆ. ಶಿಕ್ಷಕರು ಮಕ್ಕಳು ಹೇಳುವುದನ್ನು ಗಮನವಿಟ್ಟು ಕೇಳುವುದು, ಅವರೊಡನೆ ಸ್ನೇಹಪೂರ್ವಕವಾಗಿ ಸಂವಹನ ನಡೆಸುವುದು ಹಾಗೂ ಮಗುವಿನ ಭಾಷೆಯನ್ನು ಅರ್ಥ–ಮಾಡಿಕೊಳ್ಳುವ ಪ್ರಯತ್ನಗಳನ್ನು ಶಿಕ್ಷಕರಿಂದ ನಿರೀಕ್ಷಿಸಲಾಗುತ್ತದೆ.

- “ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದ ವಿಧಾನದ ಹಿಂದಿರುವ ತತ್ತ್ವಗಳು ಹಾಗೂ ಅದನ್ನು ಬೆಂಬಲಿಸುವ ಪುಸ್ತಕಗಳ ಬಗ್ಗೆ ಅರಿವಿರಲಿ. ನೀಡಲಾದ ಮಾರ್ಗಸೂಚಿಗಳಿಗೆ ಅನುಗುಣವಾಗಿ ಪುಸ್ತಕಗಳನ್ನು ಬಳಸಿ.

- ಆಟದ ಮೂಲಕ ಬೋಧನೆ, ಅಭಿನಯದೊಂದಿಗೆ ಹಾಡುಗಳನ್ನು ಕಲಿಯುವುದು ಮತ್ತು ಹಾಡುವುದು, ಚಿತ್ರಕಲೆ ಮತ್ತು ಬಣ್ಣತುಂಬುವ ಚಟುವಟಿಕೆಗಳು, ಓದನ್ನು ಅನುಕರಿಸುವಂತೆ ಮಗುವಿನ ಬೆರಳನ್ನು ಪ್ರಾಸಪದಗಳ ಸಾಲುಗಳ ಮೇಲೆ ನಡೆಸಿಕೊಂಡು ಹೋಗುವುದು (ಅವರಲ್ಲಿ ನಿಜವಾದ ಸಾಮರ್ಥ್ಯ ಇನ್ನೂ ಬೆಳವಣಿಗೆ ಹೊಂದಿಲ್ಲದಿದ್ದರೂ ಕೂಡ) ಹಾಗೂ ಚಿತ್ರಪಟಗಳೊಂದಿಗೆ ಆಟವಾಡಲು ಮಕ್ಕಳಿಗೆ ಅವಕಾಶ ಕಲ್ಪಿಸುವುದು ಸೇರಿದಂತೆ ಆಟದ ಮೂಲಕ ಕಲಿಸುವುದು ಈ ವಿಧಾನಗಳನ್ನು ಬಳಸುವ ಮೂಲಕ ಶಿಕ್ಷಕರು ಮಗುವು ಪಠ್ಯದ ಪರಿಚಯ ಪಡೆಯಲು ಮಾತ್ರವೇ ಅಲ್ಲದೆ, ಅದನ್ನು ಪ್ರಯಾಸವಿಲ್ಲದೆ ನೆನಪಿಟ್ಟುಕೊಳ್ಳಲು ನೆರವಾಗಬಹುದು. ಆಟದೊಂದಿಗೆ ಮಕ್ಕಳು ತಾವು ತಿಳಿದಿರುವುದನ್ನು ಅಭ್ಯಾಸ ಮಾಡುತ್ತಾರಷ್ಟೇ ಅಲ್ಲದೆ, ಹೊಸ ವಿಚಾರಗಳನ್ನೂ ಕಲಿಯುತ್ತಾರೆ. ಮಕ್ಕಳ ಗ್ರಹಣಶಕ್ತಿ–ಸಾಮರ್ಥ್ಯದ ಬೆಳವಣಿಗೆಗೆ ಆಟವು ನಿಜವಾಗಿಯೂ ಸಹಾಯಕಾರಿ ಎಂಬ ಅಂಶವು ಈಗ ಸಂಪೂರ್ಣವಾಗಿ ಅಂಗೀಕೃತವಾಗಿದೆ.

- ಕವನಗಳನ್ನು, ಹಾಡುಗಳನ್ನು ಅಗತ್ಯವಿದ್ದಾಗ ಮತ್ತು ಸಾಧ್ಯವಾದಾಗಲೆಲ್ಲಾ ಮಕ್ಕಳ ಆಡುಭಾಷೆಗೆ ಅನುವಾದ ಮಾಡುವುದು. ಆದರೆ ಒಡಿಶಾ ರಾಜ್ಯದ ಬುಡಕಟ್ಟು ಜನಾಂಗಗಳಲ್ಲಿ ಅನೇಕ ಆಡುಭಾಷೆಗಳು ಚಾಲ್ತಿಯಲ್ಲಿ ಇರುವುದರಿಂದ ಎಲ್ಲಾ ಸಮಯದಲ್ಲೂ ಅನುವಾದಿಸುವುದು ಶಿಕ್ಷಕರಿಗೆ ಸಾಧ್ಯವಾಗುವುದಿಲ್ಲ.

- ಮಕ್ಕಳ ಕಲಿಕೆಗೆ ಪೂರಕವಾಗಿ ಬೋಧನೆ–ಕಲಿಕಾ ಸಾಮಗ್ರಿಗಳನ್ನು ತಯಾರಿಸುವುದು ಮತ್ತು ಬಳಸುವುದು.

- ಕಥೆಗಳನ್ನು ಬಳಸುವುದು, ಜೋರಾಗಿ ಓದುವುದು, ಪಾತ್ರಾಭಿನಯವನ್ನು ಮಾಡುವುದು, ಸಾಹಿತ್ಯದ ಸನ್ನಿವೇಶಗಳಿಗೆ ನಾಟಕದ ರೂಪ ನೀಡುವುದು ಹಾಗೂ ಇದೇ ರೀತಿಯ ಇತರ ಚಟುವಟಿಕೆಗಳನ್ನು ಬಳಸಿಕೊಳ್ಳುವ ಮೂಲಕ ಮಕ್ಕಳಲ್ಲಿ ಪುಸ್ತಕಗಳ ಬಗ್ಗೆ ಹೆಚ್ಚು ಆಸಕ್ತಿ ಮೂಡಿಸುವುದು.

- ಶಾಲೆಯ ಸುತ್ತಮುತ್ತಲಿನ ಸಮುದಾಯದೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿರುವುದು.

### ಬೆಂಬಲಕ್ಕೆ ಬರುವ ಸಾಮಗ್ರಿಗಳು

“ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದ ಕಾರ್ಯಕ್ರಮದಲ್ಲಿ “ಕೌ ಡಕೇ ಕಾ” (ಕಾಗೆ ಕಾ ಎಂದು ಅನ್ನುತ್ತದೆ) ಎಂಬ ವರ್ಕ್ ಬುಕ್ ಹಾಗೂ ಪ್ರಾಥಮಿಕ ಪುಸ್ತಕವು ಮಕ್ಕಳು ಮತ್ತು ಶಿಕ್ಷಕರಿಬ್ಬರಿಗೂ ಅಚ್ಚುಮೆಚ್ಚಿನದಾಗಿದೆ. ಈ ಪುಸ್ತಕದ ಪ್ರಸ್ತಾವನೆಯಲ್ಲಿ “ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ದ ವಿಧಾನದ ಹಿಂದಿರುವ ಮೂಲಭೂತ ಪರಿಕಲ್ಪನೆಗಳನ್ನು ವಿವರಿಸಲಾಗಿದೆ. ಈ ಪುಸ್ತಕದಲ್ಲಿ ಚಿತ್ರಬಿಡಿಸುವ ಹಾಗೂ ಬಣ್ಣತುಂಬುವ ಚಟುವಟಿಕೆಗಳ ಪ್ರಾಮುಖ್ಯತೆ, ಮಕ್ಕಳು ಚಿಹ್ನೆಗಳನ್ನು ಸರಿಯಾಗಿ ನಕಲು ತೆಗೆಯುವ ಅಗತ್ಯತೆ, ವಸ್ತುಗಳನ್ನು ಎರಡು ಆಯಾಮದಲ್ಲಿ ಪ್ರತಿನಿಧಿಸುವ ಮಹತ್ವವನ್ನು ಮತ್ತು ಓದಿನ ಬೆಳವಣಿಗೆಯನ್ನು ಹಂತ–ಹಂತವಾಗಿ ವಿವರಿಸಲಾಗಿದೆ. ಇದರೊಂದಿಗೆ, ಶಿಕ್ಷಕರು ತಮ್ಮ ಪಾಠಗಳನ್ನು ಆಯೋಜಿಸಲು ಪ್ರಸ್ತಾವನೆಯು ನೆರವಾಗುತ್ತದಲ್ಲದೆ. ತರಗತಿಯಲ್ಲಿ ಮಾಡಬಹುದಾದ ಚಟುವಟಿಕೆಗಳ ಬಗ್ಗೆ ಅನೇಕ ಸಲಹೆಗಳನ್ನೂ ನೀಡುತ್ತದೆ. “ಕೌ ಡಕೇ ಕಾ” ಜೊತೆಗೆ, ಈ ಕಾರ್ಯಕ್ರಮವು ತರಗತಿಯ ಕಲಿಕೆಗೆ ಜೀವತುಂಬಬಲ್ಲ ಅನೇಕ ಬೋಧನೆ–ಕಲಿಕಾ ಸಾಮಗ್ರಿಗಳನ್ನು ಶಿಕ್ಷಕರಿಗಾಗಿ ಅಭಿವೃದ್ಧಿಗೊಳಿಸಿದೆ.

### “ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ”ವು ಪರಿಣಾಮ–ಕಾರಿಯಾಗಿದೆಯೇ?

ನೀವೇನಾದರೂ “ಮುಕ್ತ ಜ್ಞಾನ ಕುಟೀರ”ಕ್ಕೆ ಭೇಟಿಯಿತ್ತರೆ ಈ ವಿಧಾನವು ಎಷ್ಟು ಪರಿಣಾಮಕಾರಿಯಾಗಿದೆ ಎಂಬುದು ಮನದಟ್ಟಾಗುವುದು. ನಾನು ಶಾಲೆಗೆ ಭೇಟಿಯಿತ್ತ ಮೊದಲ ಸಂದರ್ಭದಲ್ಲಿ ಶಾಲೆಗೆ ಸೇರಿ ಆರು ತಿಂಗಳೂ ಆಗಿರದ, ತಮ್ಮ ಜೀವನದಲ್ಲೇ ಮೊದಲ ಬಾರಿಗೆ ಶಾಲೆಯ ಮೆಟ್ಟಿಲು ತುಳಿಯುತ್ತಿರುವ

ಒಂದನೇ ತರಗತಿಯ ಮಕ್ಕಳನ್ನು ಮನಸಾರೆ ಮೆಚ್ಚಿಕೊಂಡಿದ್ದೆ. ಜೀವಂತಿಕೆಯಿಂದ ಪುಟಿಯುತ್ತಿದ್ದ ಈ ಪುಟ್ಟ ಹುಡುಗಿಯರು ಕೇಳಿದೊಡನೆಯೇ ಯಾವುದೇ ಹಿಂಜರಿಕೆಯಿಲ್ಲದೆ ಪರಸ್ಪರರ ಹೆಸರುಗಳನ್ನು ಬರೆದುದೇ ಅಲ್ಲದೆ, ನನ್ನ ಹೆಸರನ್ನು ಸಹ ಕೇಳಿದೊಡನೆಯೇ ಬರೆದು ತೋರಿಸಿದರು. ಅವರಲ್ಲಿ ಅನೇಕ ಹುಡುಗಿಯರು ಗ್ರಂಥಾಲಯದಿಂದ ಪುಸ್ತಕಗಳನ್ನು ಆರಿಸಿ ತಂದಿದ್ದು, ಅದರಿಂದ ಓದಿ ಹೇಳಿದರು ಕೂಡ. ಅದೇ, ಬೇರೆ ಶಾಲೆಗಳಲ್ಲಿ ಕಲಿಯುವ ಅನೇಕ ಮಕ್ಕಳು ಏಳನೇ ತರಗತಿ ತಲುಪಿದರೂ ಅವರಿಗೆ ಏಕೆ ಓದಲು ಸಾಧ್ಯವಾಗುತ್ತಿಲ್ಲ ಎಂಬ ಪ್ರಶ್ನೆ ನನ್ನಲ್ಲಿ ಸುಳಿಯಿತು.

"ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ವನ್ನು ವಿವಿಧ ಬುಡಕಟ್ಟು ಜಿಲ್ಲೆಗಳ 18 ಶಾಲೆಗಳಲ್ಲಿ ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸಿದಾಗ ಅದರ ಪ್ರಭಾವವು ಎದ್ದು ಕಾಣುತ್ತಿತ್ತು. ಈ ಶಾಲೆಗಳಿಗೆ ಭೇಟಿ ನೀಡಿದರೆ ನಿಮ್ಮನ್ನು ಸುತ್ತುವರಿಯುವ ಕುತೂಹಲಭರಿತ ಕಣ್ಣಲ್ಲಿ ಭರವಸೆ ಸೂಸುವ ಮಕ್ಕಳನ್ನು ಹಾಗೂ ನಿಮ್ಮೊಡನೆ ಮಾತನಾಡಲು ತವಕಿಸುವ ಮಕ್ಕಳನ್ನು ಎದುರುಗೊಂಡರೆ, ಇದಕ್ಕೆ ವಿರುದ್ಧವಾಗಿ, ಇತರ ಶಾಲೆಗಳಲ್ಲಿ ಸಂದರ್ಶಕರ ಎದುರು ಬಾಯಿಗೆ ಬೀಗ ಜಡಿದಂತೆ ಮೌನವಾಗಿರುವ, ತಪ್ಪಿಸಿಕೊಂಡು ಓಡಿಹೋಗಲು ನೋಡುವ ಮಕ್ಕಳನ್ನು ಕಾಣುತ್ತೀರಿ. ಎಲ್ಲೆಲ್ಲಿ "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ವನ್ನು ವಾಡಿಕೆಯ ಶಾಲಾ ಶಿಕ್ಷಣಕ್ಕೆ ಪೂರಕವಾಗಿ ಪ್ರಯೋಗಿಸ-ಲಾಯಿತೋ ಅಲ್ಲೆಲ್ಲ ಮಕ್ಕಳ ಓದು ಗುರುತಿಸುವ ಮಟ್ಟಿಗೆ ಸುಧಾರಿಸಿತು. ಅಲ್ಲಿಯವರೆಗೆ ಕೆಲವು ಸರಳ ಪದಗಳನ್ನೂ ಓದಲು ಸಾಧ್ಯವಾಗದಂತಹ ದೊಡ್ಡ-ಮಕ್ಕಳಲ್ಲಿಯೂ ಕೂಡಾ ಗಮನಾರ್ಹ ಸುಧಾರಣೆ ಕಂಡು-ಬಂದಿತು. "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ" ಯೋಜನೆಯ ಶಿಕ್ಷಕರಲ್ಲಿ ಒಬ್ಬರಾದ ಈಶ್ವರ ಸೌಂತಾ ಅವರು, ವಸತಿ ಶಾಲೆಯೊಂದರಲ್ಲಿ ಓದುತ್ತಿದ್ದ, ಬಳಿಕ ಶಾಲೆ ತೊರೆದ ಇಬ್ಬರು ಮಕ್ಕಳಲ್ಲಿ ತಾವು ಗಮನಿಸಿದ ಬದಲಾವಣೆಗಳ ಬಗ್ಗೆ ತಿಳಿಸುತ್ತಾರೆ. ಈ ಇಬ್ಬರಿಗೂ ಈಶ್ವರ್ ಅವರ ಶಾಲೆ ಸೇರುವ ಮುನ್ನ ಓದಲು ಸುತಾರಾಂ ಬರುತ್ತಿರಲಿಲ್ಲ. "ಈಗ, ಒಂದು ವರ್ಷದಿಂದ ನನ್ನ ತರಗತಿಯಲ್ಲಿರುವ ಅವರು ನಿರರ್ಗಳವಾಗಿ ಓದಬಲ್ಲವರಾಗಿದ್ದು ಕಲಿಯಲು ಹಪಹಪಿಸುತ್ತಿದ್ದಾರೆ", ಎನ್ನುತ್ತಾರೆ ಈಶ್ವರ್. 18 ಶಾಲೆಗಳಲ್ಲಿ ಹಮ್ಮಿಕೊಳ್ಳಲಾಗಿದ್ದ "ಸೃಜನಾತ್ಮಕ ಭಾಷಾ ಬೆಳವಣಿಗೆಯ ಪ್ರಯತ್ನ"ದ ಪ್ರಯೋಗಾತ್ಮಕ ಯೋಜನೆಯು ಈಗ ಮುಕ್ತಾಯ-ಗೊಂಡಿದ್ದು, ಇದರ ಮೂಲಕ ಮಕ್ಕಳಲ್ಲಿ ಓದಿನ ಹಾಗೂ ಶಾಲಾ ಕಲಿಕೆಯ ಗುಣಾತ್ಮಕ ಧೋರಣೆಯ ಬಗ್ಗೆ ಬಿತ್ತಿದ ಬೀಜವು ಮರವಾಗಿ ಬೆಳೆದು ಫಲನೀಡುವುದೆಂದು ಆಶಿಸೋಣ.

"ಮುಕ್ತ ಜ್ಞಾನ ಕುಟೀರ" ಶಾಲೆಯಲ್ಲಿ ಸಾಕ್ಷರತೆ ಹಾಗೂ ಕಲಿಕೆಗಾಗಿ ಹೂಡಿದ ಭದ್ರಬುನಾದಿಯು ಅನೇಕ ಅನಿರೀಕ್ಷಿತ ಪರಿಣಾಮಗಳನ್ನು ನೀಡಿದೆ. ಅದೊಂದು ಪೂರ್ವಪ್ರಾಥಮಿಕ ಶಾಲೆಯಾಗಿದ್ದು ಅಲ್ಲಿನ ಹುಡುಗಿಯರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮುಗಿಸಲು ಸರ್ಕಾರಿ ಶಾಲೆಗೆ ಸ್ಥಳಾಂತರಗೊಳ್ಳಬೇಕಾಗುತ್ತದೆ. ಕೆಲವರಿಗೆ ಮಾತ್ರ ಪ್ರಾಥಮಿಕ ಹಂತವನ್ನು ದಾಟಿಹೋಗಲು ಸಾಧ್ಯವಾಗುತ್ತದೆ. ಆದರೆ, "ಮುಕ್ತ ಜ್ಞಾನ ಕುಟೀರ" ಶಾಲೆಯಲ್ಲಿ ಕಟ್ಟಿಕೊಟ್ಟ ಭದ್ರ ಶೈಕ್ಷಣಿಕ ಬುನಾದಿಯು ಅವರ ಸಹಾಯಕ್ಕೆ ಬೇರೆ ರೀತಿಗಳಲ್ಲಿ ಒದಗಿಬರುತ್ತದೆ. ಉದಾಹರಣೆಗೆ, ಒಂದು ಹುಡುಗಿ ಮಾಲೀಕರು ಕೊಟ್ಟ ಅಲ್ಪ ಸಂಬಳವನ್ನು ಎದುರುನೋಡದೇ ಇದ್ದ ಕಾರಣ ಅವರನ್ನು ಪ್ರಶ್ನಿಸಲು ಮುಂದಾದಾಗ, "ಓ, ನೀನು ಶಾಲೆಯ ಮೆಟ್ಟಿಲು ತುಳಿದಿದ್ದೀಯ ಎಂದಾಯಿತು; ಯಾವ ಶಾಲೆ?" ಎಂಬ ಮರುಪ್ರಶ್ನೆಯನ್ನು ಎದುರಿಸಬೇಕಾಯಿತು.

"ಮುಕ್ತ ಜ್ಞಾನ ಕುಟೀರ" ಶಾಲೆಯನ್ನು ಮೂಲತಃ ಆದಿವಾಸಿ ಹುಡುಗಿಯರಿಗಾಗಿ ತೆರೆದಿದ್ದರೂ, ಪಕ್ಕದ ಹಳ್ಳಿಯ ಕುಂಬಾರರು ತಮ್ಮ ಹೆಣ್ಣಮಕ್ಕಳನ್ನು ಈ ಶಾಲೆಗೆ ಕಳುಹಿಸಲು ಮೊದಮೊದಲು ಹಿಂಜರಿದರು. ಆದರೆ, ಆದಿವಾಸಿ ಹುಡುಗಿಯರು "ಮುಕ್ತ ಜ್ಞಾನ ಕುಟೀರ" ಶಾಲೆಯಲ್ಲಿ ಚೆನ್ನಾಗಿ ಕಲಿಯುತ್ತಿದ್ದು, ಅವರಲ್ಲಿ ಕೆಲವರು ನವೋದಯ ಶಾಲೆಗಳ ಮೆಟ್ಟಿಲು ಏರುವಂತಾದುದನ್ನು ಕಂಡ ಕುಂಬಾರರ ಹಳ್ಳಿಯೂ ತನ್ನ ಹೆಣ್ಣುಮಕ್ಕಳನ್ನು "ಮುಕ್ತ ಜ್ಞಾನ ಕುಟೀರ"ಕ್ಕೆ ಕಳುಹಿಸಲು ಮನಸ್ಸುಮಾಡಿತು. ತಲೆತಲಾಂತರದಿಂದ ಬಂದ ಮನಸ್ಥಿತಿಗಳನ್ನು ಬದಲಾಯಿಸಲು ಬಹುಶಃ ಉತ್ತಮ ಶಾಲಾಶಿಕ್ಷಣ ಕಾರಣವಾಗಬಹುದೇನೋ !

ಈ ಲೇಖನವನ್ನು ಮುಗಿಸುವ ಮುನ್ನ ನನ್ನ ಮನ ಮತ್ತೊಮ್ಮೆ ಕಾಶೀಪುರದ ಸೌಮ್ಯ ಬೆಟ್ಟಗಳತ್ತ ಓಡುತ್ತದೆ. ವಾರದ ಪ್ರತಿದಿನವೂ ನೇಸರ ನಿಸರ್ಗವನ್ನು ಬೆಚ್ಚಗಾಗಿಸುವ ಹೊತ್ತಿಗೆ ದನಕರುಗಳು ಮೇಯಲು ಹೊರಡುತ್ತವೆ, ಇದ್ದಕ್ಕಿದ್ದಂತೆ ಮಕ್ಕಳ ನಗುವು ಪರಿಸರವನ್ನು ತೀಡುತ್ತದೆ. ಶಾಲೆಯ ಕಡೆ ಮುಖಮಾಡಿ ಗದ್ದೆಗಳ ನಡುವಿನಿಂದ, ಕಾಡಿನಂಚಿನಿಂದ ಮುಖದೋರುವ ಪುಟ್ಟ ಹುಡುಗಿಯರು ಹೊತ್ತು ತರುವ ನಗು, ಹರಟೆ ಮತ್ತು ಕಲರವಗಳು ಗಾಳಿಯಲ್ಲಿ ತೇಲಿಬರುತ್ತವೆ. ಶಾಲೆಗೆ ಬರುವ ಸಂತಸ, ಕಥೆಗಳನ್ನು ಓದಿ ನಲಿಯುವ ತವಕ, ಕಥೆಗಳನ್ನು ಬರೆದು ಅವುಗಳಿಗೆ ಬಣ್ಣಗಳಿಂದ ಜೀವತುಂಬುವ ಹಿಗ್ಗು ಅವರಲ್ಲಿ ಮನೆಮಾಡಿರುತ್ತದೆ. ಗಾಳಿಯು ಈ ಧ್ವನಿಗಳಿಂದ ತುಂಬಿರುವಂತೆಯೇ, ಅವರ ಶಾಲೆಯ ಗೋಡೆಗಳೂ ಮಕ್ಕಳ ಕಲಾಕೃತಿಗಳಿಂದ, ಬರವಣಿಗೆಗಳಿಂದ ಪ್ರಕಾಶಮಾನವಾಗಿ ಶೋಭಿಸುತ್ತವೆ. "ಮುಕ್ತ ಜ್ಞಾನ ಕುಟೀರ"ಕ್ಕೆ ಭೇಟಿಯಿತ್ತು ಈ ಮಕ್ಕಳು ಅರಳುತ್ತಿರುವುದನ್ನು ನೋಡುವುದೊಂದು ಅನಿರ್ವಚನೀಯ ಅನುಭವ.

ಶಿಕ್ಷಕ ತರಬೇತಿಯ ಕುರಿತಂತೆ ಹೆಚ್ಚಿನ ಮಾಹಿತಿಗಾಗಿ ಇಲ್ಲಿ ಸಂಪರ್ಕಿಸಿ

http://ncert.nic.in/publication/journals/pdf_files/vtte_aug_2018.pdf (pg47 - 58)

ಮುಕ್ತ ಜ್ಞಾನ ಕುಟೀರದ ಕುರಿತ ಲೇಖನಕ್ಕಾಗಿ ಈ ಕೊಂಡಿಯನ್ನು ಕ್ಲಿಕ್ಕಿಸಿ:

https://thewire.in/education/in-odhisa-a-school-quietly-empowers-tribal-girls-with-its-empathetic-vision

---



**ಇಂದಿರಾ** ಅವರಿಗೆ ಮಾನವನ ಯೋಗಕ್ಷೇಮ ಮತ್ತು ಅದಕ್ಕೆ ಬೆಂಬಲವಾಗಿ ನಿಲ್ಲುವಲ್ಲಿ ಅಥವಾ ಅದಕ್ಕೆ ಕುಂದುತರುವಲ್ಲಿ ಶಿಕ್ಷಣದ ಪಾತ್ರದ ಬಗ್ಗೆ ಗಂಭೀರ ಸ್ವರೂಪದ ಕಾಳಜಿಗಳಿವೆ. ಮಾನವ, ಮಾನವೇತರ ಮತ್ತು ಭೌತಿಕ ವ್ಯವಸ್ಥೆಯಲ್ಲಿ ಎಲ್ಲ ಭಾಗಿದಾರರ ನಡುವೆ ಪರಸ್ಪರ ಬೆಂಬಲಿಸುವ ಹಾಗೂ ಪುಷ್ಟಿಕೊಡುವ ಸಂಬಂಧಗಳ ಜಾಲವಾಗಿ ಅವರು ಯೋಗಕ್ಷೇಮವನ್ನು ಅರ್ಥಮಾಡಿಕೊಂಡಿದ್ದಾರೆ. ಶಿಕ್ಷಕಿಯಾಗಿ, ಶಿಕ್ಷಕರ ತರಬೇತುದಾರರಾಗಿ ಅವರ ಕೈಂಕರ್ಯವು ಶಿಕ್ಷಣಪ್ರಕ್ರಿಯೆಯ ಬಗ್ಗೆ ಆಳವಾದ ಚಿಂತನೆಯನ್ನು ಹುಟ್ಟುಹಾಕಿ ಅವರು ಪರ್ಯಾಯ ಶಾಲೆಯೆಂದು ಗುರುತಿಸಿಕೊಂಡಿರುವ "ಪೂರ್ಣ ಕಲಿಕಾ ಕೇಂದ್ರ"ವನ್ನು ತೆರೆಯುವಂತೆ ಮಾಡಿದೆ. ಇಂದಿರಾ ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದು 2020 – ಜನವರಿಯಲ್ಲಿ ನಿವೃತ್ತರಾಗಿದ್ದಾರೆ. ಇಂದಿಗೂ ಪೂರ್ಣ ಶಾಲೆಯ ಚಟುವಟಿಕೆಗಳಲ್ಲಿ ಸಕ್ರಿಯ ಆಸಕ್ತಿ ಇಟ್ಟುಕೊಂಡಿದ್ದಾರೆ. ಇವರ ಅನೇಕ ಲೇಖನಗಳು ಶೈಕ್ಷಣಿಕ ಹಾಗೂ ಜನಪ್ರಿಯ ನಿಯತಕಾಲಿಕಗಳಲ್ಲಿ ಪ್ರಕಟವಾಗಿವೆ. ಇವರನ್ನು ಸಂಪರ್ಕಿಸಬಹುದಾದ ಇ–ಮೇಲ್ ವಿಳಾಸ: indira502@gmail.com

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ಲತಾ ಕೆ ಸಿ**

**ನಾವು ಭಾರತದ ಬಹುಭಾಷೆಯ ವಾಸ್ತವತೆಯನ್ನೂ ಅರಿತು ಒಪ್ಪಿಕೊಳ್ಳಬೇಕಿದೆ. ಪ್ರತಿಯೊಬ್ಬ ಭಾರತೀಯನು ಮೌಖಿಕ ಉಕ್ತಿಗಳ ಪ್ರಪಂಚದಲ್ಲಿ ಬಹುಭಾಷಿಕನೇ ಆಗಿರುತ್ತಾನೆ. ಬಹುತೇಕ ಮಕ್ಕಳು, ಅವರು ಬೆಳೆದು ಸುತ್ತಲಿನ ಪ್ರಪಂಚದೊಡನೆ ಸಂವಹನ ನಡೆಸುತ್ತಿರುವಾಗ, ಒಂದಲ್ಲಾ ಒಂದು ರೀತಿಯಲ್ಲಿ ವಿಶಿಷ್ಟ ಭಾಷಿಕ ಪ್ರವಾಹಕ್ಕೆ ತೆರೆದುಕೊಳ್ಳುತ್ತಾರೆ. ಮಕ್ಕಳಿಗೆ ಅಕ್ಷರಜ್ಞಾನದ ಭದ್ರಬುನಾದಿಯನ್ನು ನಿರ್ಮಿಸುವ ಸಲುವಾಗಿ ತರಗತಿಗಳಲ್ಲಿ ಮಕ್ಕಳ ಭಾಷೆ ಮತ್ತು ಮಾತುಗಳಿಗೆ ಸಾಕಷ್ಟು ಮುಕ್ತ ಅವಕಾಶವನ್ನು ಸೃಷ್ಟಿಸಬೇಕಾಗುತ್ತದೆ.**

**ಶಕ್ತಿಬ್ರತಾ ಸೇನ್ ಮತ್ತು ನಿಧಿ ವಿನಾಯಕ್, ವ್ಯಾಪಕ ಸಾಕ್ಷರ ಯೋಜನೆಯ ಅತ್ಯಗತ್ಯ ಆಧಾರ ಸ್ತಂಭಗಳು, ಪು.62**

# ಬೋಧನಾ ಕಲಿಕಾ ಸಾಮಗ್ರಿ (TLM) | ಗಣಿತದ ಕಲಿಕೆ ಮತ್ತು ಅರ್ಥೈಸುವಿಕೆಗಾಗಿ ಇರುವ ಗೆಳೆಯ

ಜನಕ್ ರಾಮ್ ಮತ್ತು ಮುನ್ನಿಲಾಲ್ ಬರ್ಸೆ

'ರಾಜು ಬೇಗ, ರೂಪಾ ಚೆಂಡನ್ನು ಎಸೆಯುತ್ತಿದ್ದಾಳೆ' ಎಂದು ಪಾರ್ವತಿಯು ರಾಜುವನ್ನು ಜೋರಾಗಿ ಕೂಗಿ ಲಗೋರಿ ಕಲ್ಲುಗಳನ್ನು ಪೇರಿಸಿಟ್ಟು ದೂರ ಓಡಿದಳು. ರಾಜು, ರೂಪಾ, ಪಾರ್ವತಿ ಮತ್ತಿತರ ಸ್ನೇಹಿತರು ಲಗೋರಿ ಆಟವನ್ನು ಆಡುತ್ತಿದ್ದಾರೆ. ಅವರಿಗೆ ಲಗೋರಿ ಕಲ್ಲುಗಳನ್ನು ಜೋಡಿಸಲು ಆಗುತ್ತಲೇ ಇಲ್ಲ. ಅಗಲದ ಮತ್ತು ಭಾರದ ಕಲ್ಲುಗಳನ್ನು ಕೆಳಗಿಟ್ಟು ಅದರ ಮೇಲೆ ಸಣ್ಣ ಕಲ್ಲುಗಳನ್ನಿಡಬೇಕೆಂದು ರೂಪ ಹೇಳುತ್ತಲೇ ಇದ್ದಳು. ಆದರೆ ರಾಜುವಿಗೆ ಲಗೋರಿ ಕಲ್ಲುಗಳನ್ನು ಜೋಡಿಸಲು ಆಗುತ್ತಿಲ್ಲ ಮತ್ತು ಅವನು ಔಟ್ ಆದನು. ಅದೇ ಸಮಯಕ್ಕೇ ಪಾರ್ವತಿಯ ತಾಯಿ, ಅವಳನ್ನು ಕರೆದು, "ಆಗಲೇ ಬಹಳ ಹೊತ್ತಾಗಿದೆ. ನೀನು ತುಂಬಾ ಹೊತ್ತು ಆಟ ಆಡಿದ್ದೀಯ, ಮನೆಗೆ ಬಾ, ಈಗ ಓದು" ಎಂದು ಕರೆದರು. "ಅಮ್ಮಾ ಇವತ್ತು ಭಾನುವಾರ, ದಯವಿಟ್ಟು ಆಡಲು ಬಿಡು" ಎಂದು ಪಾರ್ವತಿಯು ಗೋಗರೆದರೂ, ಅವಳ ಅಮ್ಮ ಕೇಳದೆ ಇತರೆಲ್ಲ ಮಕ್ಕಳಿಗೂ ಮನೆಗೆ ಹೋಗಲು ತಿಳಿಸಿದರು. ಪಾರ್ವತಿಯು ಒಲ್ಲದ ಮನಸ್ಸಿನಲ್ಲಿ ಮನೆಗೆ ತೆರಳಿದಳು.

ರಾಜು, ರೂಪಾ ಮತ್ತು ಪಾರ್ವತಿ 1ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಅವರಿಗೆ ಆಟವಾಡುವುದೆಂದರೆ ಇಷ್ಟ. ನಾನು ನನ್ನ ಮನೆಯ ಉಪ್ಪರಿಗೆಯಿಂದ ಇದನ್ನು ನೋಡುತ್ತಿದ್ದೆ. ನನ್ನ ತರಗತಿಯಲ್ಲೂ ಇದೇ ರೀತಿ ಆಗುತ್ತದೆ. ನಾವು ಮಕ್ಕಳಿಗೆ ಅವರ ದೈನಂದಿನ ಬದುಕಿನ ಅನುಭವವನ್ನು ಹಂಚಿಕೊಳ್ಳಲು ಹೇಳಿದಾಗ, ಅಥವಾ ದೊಡ್ಡದು–ಸಣ್ಣದು, ದಪ್ಪ – ತೆಳು, ಭಾರ – ಹಗುರ, ಹೆಚ್ಚು – ಕಡಿಮೆ, ಜಾರು–ಉರುಳು ಇಂತಹವುಗಳನ್ನು ವಿಂಗಡಿಸಲು ಹೇಳಿದಾಗ ಕ್ಷಣದಲ್ಲಿ ಮಾಡಿಬಿಡುತ್ತಾರೆ. ಅಲ್ಲದೆ ವಿವಿಧ ಬೋಧನಾ ಸಾಮಗ್ರಿಗಳನ್ನು ಉಪಯೋಗಿಸಿ ಅವರು ದೂರ – ಹತ್ತಿರ, ಮೇಲೆ – ಕೆಳಗೆ, ಒಳಗೆ – ಹೊರಗೆ, ಮೇಲಿನಿಂದ ಕೆಳಗೆ ಮತ್ತು ಕೆಳಗಿನಿಂದ ಮೇಲೆ ಜೋಡಿಸುವುದು, ಎಣಿಸುವುದು, ಹೊಂದಿಸುವುದು ಅಥವಾ ಕಡಿತಗೊಳಿಸುವುದು ಮುಂತಾದುವುಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಮಾಡುವುದನ್ನೂ ಆನಂದಿಸುತ್ತಾರೆ. ತಮ್ಮ ಸುತ್ತಮುತ್ತ ತರಗತಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ನೋಡಿದರೆ, ಅವರ ಕಲಿಕೆಯಲ್ಲಿನ ಆಸಕ್ತಿ ಮತ್ತು ಗಣಿತದ ಅರ್ಥಗ್ರಹಿಕೆಯೂ ಹೆಚ್ಚುತ್ತದೆ. ಅಂಕಿಗಳ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳುವುದಕ್ಕೂ ಮುನ್ನ ಇಂತಹ ತಿಳಿವು ಸಂಖ್ಯೆಗಳನ್ನು ಅರ್ಥಮಾಡಿಕೊಳ್ಳಲು ತುಂಬಾ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಘನವಸ್ತುಗಳನ್ನು ಎಣಿಸುವುದು, ಅವನ್ನು ಅನುಕ್ರಮವಾಗಿ ಜೋಡಿಸುವುದು ಮತ್ತು ಹೊಂದಿಸುವುದು ಇತ್ಯಾದಿ. ನಾವು ನಮ್ಮ ಬಾಲ್ಯದಲ್ಲಿ ಆಡಿದ್ದ, ಗೋಲಿ–ಗುಂಡು, ಚೆಂಡು, ಮರಗಳು, ಚಿನ್ನಿ ದಾಂಡು ಹೀಗೆ ಇವುಗಳೂ ತರಗತಿಯಲ್ಲಿ ಸ್ನೇಹಿತರಂತೆಯೇ ಗಣಿತವನ್ನು ಕಲಿಯಲು ನಮಗೆ ಸಹಾಯ ಮಾಡುತ್ತವೆ.

ಪ್ರಾಥಮಿಕ ತರಗತಿಗಳಲ್ಲಿ ಹೊಸ ಪರಿಕಲ್ಪನೆಗಳನ್ನು ಪರಿಚಯಿಸಲು ನಾವು ವಿವಿಧ ಬೋಧನಾ ಸಾಮಗ್ರಿಗಳನ್ನು ಬಳಸುತ್ತೇವೆ. 5ನೇ ತರಗತಿಯಲ್ಲಿ ದತ್ತಾಂಶವನ್ನು ತೋರಿಸುವ ಪರಿಕಲ್ಪನೆಯನ್ನು ಪರಿಚಯಿಸಬೇಕೆಂದರೆ, ಮಕ್ಕಳ ದೈನಂದಿನ ಬದುಕಿನ ಘಟನೆಗಳನ್ನೇ ಉಪಯೋಗಿಸಿಕೊಳ್ಳುತ್ತೇವೆ. ನಾವು ಗುಂಪುಗಳನ್ನು ಮಾಡಿ 1ರಿಂದ 10ನೇ ತರಗತಿಯವರೆಗೆ ಆ ದಿನ ಶಾಲೆಗೆ ಬಂದಿದ್ದ ಮಕ್ಕಳ ಸಂಖ್ಯೆಯನ್ನು ಸಂಗ್ರಹಿಸಿದೆವು. ಆ ಮೂಲಕ ಪ್ರಾಥಮಿಕ ದತ್ತಾಂಶವನ್ನು ತಿಳಿದುಕೊಂಡೆವು. ಅವುಗಳನ್ನು ಒಂದು ಕೋಷ್ಟಕದ ರೂಪದಲ್ಲಿ ಪ್ರದರ್ಶಿಸಿದೆವು. ಅದರ ಆಧಾರದಲ್ಲಿ ಪ್ರಶ್ನೆಗಳನ್ನು ರಚಿಸಿ ಗುಂಪುಗಳಲ್ಲಿ ಅವುಗಳಿಗೆ ಉತ್ತರ ಹುಡುಕುವಂತೆ ಮಕ್ಕಳಿಗೆ ತಿಳಿಸಿದೆವು, ಇದು ಪೂರಕ ದತ್ತಾಂಶ.

ಮೂರನೇ ತರಗತಿಯಲ್ಲಿ, ವಿವಿಧ ಬಣ್ಣ ಮತ್ತು ಆಕಾರಗಳ ಪಟ್ಟಿಗಳನ್ನು ತೆಗೆದುಕೊಂಡು ಲಂಬ ನಕ್ಷೆ (Tally Marks) ಮತ್ತು ತಾಳೆ ಗುರುತುಗಳ ಮೂಲಕ ಪ್ರತಿನಿಧಿಸುವುದನ್ನು (Bar Graph Representation) ವಿವರಿಸಿದೆವು. ಈ ಪಟ್ಟಿಗಳನ್ನು ಇವಿಎ ಹಾಳೆಗಳನ್ನು ಉಪಯೋಗಿಸಿಕೊಂಡು ಮಾಡಲಾಗಿದ್ದು ಅವನ್ನು ನೀರಿನಿಂದಲೇ ಹಲಗೆಯ ಮೇಲೆ ಅಂಟಿಸಬಹುದು. ಎಲ್ಲ ಗುಂಪುಗಳಿಗೂ ವಿವಿಧ ಬಣ್ಣಗಳ ಹಲವು ಪಟ್ಟಿಗಳನ್ನು ನೀಡಲಾಯಿತು. ಅವರಿಗೆ ಕಪ್ಪುಹಲಗೆಯ ಮೇಲೆ ಇವನ್ನು ಕೋಷ್ಟಕದಂತೆ ಪ್ರದರ್ಶಿಸಲು ಹೇಳಲಾಯಿತು. ಒಂದು ಗುಂಪಿಗೆ ನಕ್ಷೆಯನ್ನೂ ಮತ್ತೊಂದು ಗುಂಪಿಗೆ ಪ್ರಶ್ನೆಗಳನ್ನು ರಚಿಸುವಂತೆ ಹೇಳಲಾಯಿತು. ಮಕ್ಕಳು ಇದನ್ನು ಎಷ್ಟು ಆನಂದಿಸಿದರೆಂದರೆ, ಮುಂದಿನ ತರಗತಿಯಲ್ಲೂ ಇದನ್ನೇ ಮುಂದುವರೆಸಲು ಇಷ್ಟಪಟ್ಟರು. ಬೋಧನಾ ಸಾಮಗ್ರಿಗಳು ಆಸಕ್ತಿಕರವೂ ಎಲ್ಲರಿಗೆ–ದೊರಕುವಂತೆಯೂ ಇರಬೇಕೆಂದು ನಾವು ಅರಿತುಕೊಂಡೆವು. ತರಗತಿಯ ಎಲ್ಲ ಮಕ್ಕಳೂ ಚಟುವಟಿಕೆಯಲ್ಲಿ ಪಾಲ್ಗೊಳ್ಳಲು ಇಷ್ಟಪಟ್ಟರು ಮತ್ತು ಎಲ್ಲರಿಗೂ ಸಾಕಷ್ಟು ವಸ್ತುಗಳಿದ್ದವು. ಅವರಿಗೆ ಆಸಕ್ತಿಕರವಾಗಿದ್ದ ವಿಷಯದಲ್ಲೇ ತರಗತಿಯನ್ನು ನಡೆಸಲಾಯಿತು. ಮಕ್ಕಳು ಮನೆಯಲ್ಲಿಯ ವಸ್ತುಗಳಿಗೆ ತಾಳೆ ಗುರುತುಗಳನ್ನು ಮಾಡಲು ಸಾಧ್ಯ ಎಂದು ಹೇಳಿದರು. ತನ್ನ ಮನೆಯಲ್ಲಿರುವ ಹಸುಗಳು, ಮೇಕೆಗಳು ಮತ್ತು ಕೋಳಿಗಳ ಸಂಖ್ಯೆಗಳಿಂದ ತಾಳೆ ಗುರುತುಗಳ ಕೋಷ್ಟಕವನ್ನು ಮಾಡುತ್ತೇನೆಂದು ಒಬ್ಬ ಹುಡುಗ ಹೇಳಿದ. ಮುಂದಿನ ತರಗತಿಯಲ್ಲಿ ಕರಿಹಲಗೆಯ ಮೇಲೆ ತರಗತಿ ಕೊಠಡಿಯಲ್ಲಿನ ಎಲ್ಲ ಸಾಮಗ್ರಿಗಳನ್ನು ಅಂದರೆ ಮೇಜು, ಕುರ್ಚಿ, ಹಲಗೆ, ಚುಚ್ಚು–ಹಲಗೆ, ಕಪಾಟು, ಇಂಗ್ಲೀಷ್ ಪುಸ್ತಕಗಳು, ಹಿಂದಿ ಪುಸ್ತಕಗಳು, ನಿಘಂಟು, ಬಲ್ಬ್, ಫ್ಯಾನ್ ಇತ್ಯಾದಿಗಳ ಕೋಷ್ಟಕಗಳನ್ನು ಮಾಡಿ ಚರ್ಚಿಸಿದರು.

ನಾವು ಚೆಂಡುಗಳು, ಗೋಲಿಗಳು ಮತ್ತು ವಿವಿಧ ಬಣ್ಣದ ಸಾಮಗ್ರಿಗಳನ್ನು ಕೂಡಾ ಉಪಯೋಗಿಸಿದೆವು ಮತ್ತು ನಿಧಾನ ಕಲಿಕೆಯ ಮಕ್ಕಳಿಗೆ ಸಾಕಷ್ಟು ಸಮಯ ನೀಡಿದೆವು. ಅವರಿಗೆ ಸ್ಪರ್ಶಿಸಲು, ನಿಭಾಯಿಸಲು ಮತ್ತು ಆ ಸಾಮಗ್ರಿಗಳ ಜೊತೆ ಕೆಲಸ ಮಾಡಲು ಮತ್ತು ಅವರ ಆಲೋಚನೆಗಳನ್ನು ಹಂಚಿಕೊಳ್ಳಲು ನಾವು ಸಾಕಷ್ಟು ಅವಕಾಶ ನೀಡಿದೆವು. ನಾವು ಮಕ್ಕಳಿಗೆ ಕಲಿಸುವಾಗ, ಬೋಧನಾ ಸಾಮಗ್ರಿಗಳಿಂದಲೇ ಮಕ್ಕಳೊಡನೆ ಸಂವಹನ ನಡೆಸಬೇಕು ಮತ್ತು ಪ್ರತೀ ಮಗುವನ್ನೂ ತಲುಪಬೇಕು.

ಮಾರು, ಗೇಣು, ಮೊಳ, ಕೈಗಳು, ಹೆಜ್ಜೆಗಳು, ಹಗ್ಗಗಳು, ಪೆನ್ಸಿಲುಗಳು, ಮರದ ತುಂಡು ಇತ್ಯಾದಿ ಸಾಂಪ್ರದಾಯಿಕ ಮಾಪನ ಘಟಕಗಳ ಮೂಲಕ ನಾವು ಮೇಜು, ಹಲಗೆ, ಆಟದ ಮೈದಾನ, ಕಬಡ್ಡಿ ಮೈದಾನ, ಪುಸ್ತಕ ಮತ್ತು ಪೆನ್ಸಿಲುಗಳನ್ನು ಅಳತೆ ಮಾಡಿದೆವು. ನಂತರದಲ್ಲಿ ಇಂಥ ಬೋಧನಾ ಪರಿಕರಗಳ ನೆರವಿನಿಂದ ಮಿಲಿಮೀಟರ್, ಸೆಂಟಿಮೀಟರ್, ಮೀಟರ್ ಮತ್ತು ಕಿಲೋಮೀಟರ್ ಇತ್ಯಾದಿ ಪ್ರಮಾಣಿತ ಮಾನದಂಡಗಳಿಗೆ ಬಂದೆವು. ಹಗ್ಗ, ಕಡ್ಡಿಗಳು, ಹಲಗೆಗಳು ಮುಂತಾದವನ್ನು ಉಪಯೋಗಿಸಿ ವಿವಿಧ ಆಕಾರಗಳನ್ನು ರಚಿಸಿ ಸುತ್ತಳತೆ (Perimeter), ವಿಸ್ತೀರ್ಣ (Area)ವನ್ನು ಅರಿಯಬಹುದೆಂದು ತಿಳಿದುಕೊಂಡೆವು. ಈ ಚಟುವಟಿಕೆಯಿಂದ ಮಾತ್ರವೇ ಸುತ್ತಳತೆ ಮತ್ತು ವಿಸ್ತಾರವನ್ನು ಕಂಡುಹಿಡಿಯಬಹುದೆಂದು ಮಕ್ಕಳು ಅರಿತುಕೊಂಡರು. ಮಕ್ಕಳು ಹಗ್ಗದ ಮೂಲಕ ತ್ರಿಭುಜ, ಆಯತ, ಪಂಚಭುಜ, ಷಡ್‌ಭುಜ ಮತ್ತು ಅಷ್ಟಭುಜಗಳನ್ನು ರಚಿಸಿದರು. ಹಗ್ಗವನ್ನು ಬಳಸಿ ಒಂದು ವೃತ್ತವನ್ನು ಮಾಡಿ ಅದರ ವಿವಿಧ ಭಾಗಗಳಾದ ತ್ರಿಜ್ಯ, ವ್ಯಾಸ, ಸುತ್ತಳತೆ, ಕೇಂದ್ರಬಿಂದು, ಜ್ಯಾಮಿತಿಗಳನ್ನು ಅರಿತುಕೊಂಡರು. ಅವರು ವೃತ್ತಖಂಡ ಮತ್ತು ತ್ರಿಜ್ಯಾಂತರ ಖಂಡಗಳ ನಡುವಿನ ವ್ಯತ್ಯಾಸವನ್ನು ಅರಿತುಕೊಂಡರು. ಒಂದು ವೃತ್ತದಲ್ಲಿ ಎಷ್ಟು ತ್ರಿಜ್ಯ ಎಳೆಯಬಹುದು? ಎಂದು ನಾವು ಕೇಳಿದಾಗ, "ಹಲವು! ಇಡೀ ವೃತ್ತ ತುಂಬಿ ಹೋಗುತ್ತದೆ, ನಾವು ಎಷ್ಟು ತ್ರಿಜ್ಯ ಬರೆದೆವು ಎಂದು ಎಣಿಸುವುದೂ ಅಸಾಧ್ಯ" ಎಂದು ಮಕ್ಕಳು ತಕ್ಷಣವೇ ಪ್ರತಿಕ್ರಿಯಿಸಿದರು. ಮಕ್ಕಳು ತಾವೇ ವಿವರಗಳನ್ನು ಅರ್ಥಮಾಡಿಕೊಂಡಾಗ, ಅವರ ಗ್ರಹಿಕೆ ಅವರೊಡನೆ ಸದಾಕಾಲ ಇರುತ್ತದೆ ಎನ್ನುವುದು ನಮ್ಮ ನಂಬಿಕೆ.

ಮಕ್ಕಳಿಗೆ ನಾವು 2 ಆಯಾಮದ ಮತ್ತು 3 ಆಯಾಮದ (2D and 3D shapes) ಆಕೃತಿಗಳನ್ನು ಅವುಗಳ ನಡುವಿನ ವ್ಯತ್ಯಾಸವನ್ನು ಅರಿಯಲು ನೀಡಿದೆವು. 3 ಆಯಾಮದ ಆಕೃತಿಗಳನ್ನು ಬಿಡಿಸಿ ನೋಡಿ ಅವುಗಳನ್ನು ಹೇಗೆ ಮಾಡಲಾಗಿದೆ ಎಂದು ಗಮನಿಸಲೂ ಅನುವು ಮಾಡಿಕೊಟ್ಟೆವು. ಮಕ್ಕಳು ಈ ಚಟುವಟಿಕೆಯನ್ನು ಬಹಳ ಇಷ್ಟಪಟ್ಟರು. ಆರಂಭದಲ್ಲಿ ಅವರಿಗೆ ವರ್ಗ ಘನ, ಆಯತ ಘನಾಕೃತಿ (Cube, cuboid)ಗಳಲ್ಲಿ ಎಷ್ಟು ಮುಖಗಳಿವೆ ಎಂದು ಹೇಳಲು ಕಷ್ಟವಾಯಿತು. 3 ಆಯಾಮದ ಆಕೃತಿಯನ್ನು ತೆರೆದಂತೆಯೇ ಎಷ್ಟು ಮುಖಗಳಿವೆ ಎಂದು ಸುಲಭವಾಗಿ ಹೇಳಲು ಅವರಿಗೆ ಸಾಧ್ಯವಾಯಿತು. ಅವನು ಅಥವಾ ಅವಳಿಗೆ ಅವಕಾಶಗಳು



ದೊರಕಿದರೆ ಪ್ರತೀ ಮಗುವೂ ಕಲಿಯಬಲ್ಲುದೆಂಬುದು ನಮ್ಮ ನಂಬಿಕೆ. ಕೆಲವು ಮಕ್ಕಳು ಕಲಿಯುವುದರಲ್ಲಿ ನಿಧಾನವಿರಬಹುದು, ಆದರೆ ತಮ್ಮ ಗ್ರಹಿಕೆಯ ಸಾಮರ್ಥ್ಯದ ಆಧಾರದಲ್ಲೇ ಅವರು ಕೂಡಾ ಕಲಿಯಬಲ್ಲರು. ಪ್ರಾಥಮಿಕ ತರಗತಿಗಳಲ್ಲಿ ಮಕ್ಕಳು ನಿಶ್ಚಿತ (ಮೂರ್ತ) ಸಾಮಗ್ರಿಗಳೊಂದಿಗೆ ಕಲಿತಾಗ ಅವುಗಳನ್ನು ಅವರು ಅರ್ಥಮಾಡಿಕೊಳ್ಳುವುದು ಸುಲಭವಾಗುತ್ತದೆ ಮತ್ತು ತಮ್ಮ ದೈನಂದಿನ ಬದುಕಿಗೆ ಹೊಂದಿಸಿಕೊಳ್ಳುವುದೂ ಸುಲಭ. ಕ್ರಮೇಣ ಅವರು ಅಮೂರ್ತ ಕಲ್ಪನೆಗಳ ಜೊತೆಗೆ ಕೆಲಸ ಮಾಡುತ್ತಾ ಬೋಧನಾ ಸಾಮಗ್ರಿಗಳಿಲ್ಲದೆಯೇ ಅದನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ ಮತ್ತು ಅದರಲ್ಲಿ ಖುಷಿಯನ್ನೂ ಅನುಭವಿಸುತ್ತಾರೆ. ಬಾಲ ಶೋಧ ಮೇಳದಲ್ಲಿ ನಮ್ಮೊಡನೆ ಸ್ವ ಇಚ್ಛೆಯಿಂದ ಕೈಜೋಡಿಸಿದ 4ನೇ ತರಗತಿಯ ಆರು ಸ್ನೇಹಿತರೊಡನೆ (ನಾವು ಮಕ್ಕಳನ್ನು ಸ್ನೇಹಿತರೆಂದೇ ಭಾವಿಸುತ್ತೇವೆ) ಮತ್ತು 6ನೇ ತರಗತಿಯ ಒಬ್ಬ ಸ್ನೇಹಿತೆಯೊಡನೆ ಬೋಧನಾ ಪರಿಕರಗಳ ಬಗ್ಗೆ ಅಧ್ಯಯನ ಮಾಡಿದೆವು. ಈ ಅಧ್ಯಯನದ ಮೂಲಕ ನಾವು ಗಣಿತದ ಎಲ್ಲ ಬೋಧನಾ ಸಾಮಗ್ರಿಗಳನ್ನು ಶಾಲೆಯಲ್ಲಿ ಅಥವಾ ತರಗತಿಯಲ್ಲಿ ಹೇಗೆ ಬಳಸಲಾಗುತ್ತಿದೆ ಮತ್ತು ಅದಕ್ಕೆ ಸಂಬಂಧಿಸಿದ ಗಣಿತದ ಪರಿಕಲ್ಪನೆಗಳನ್ನು ಹೇಗೆ ವಿವರಿಸಲಾಗುತ್ತಿದೆಯೆಂದು ಅವರ ಸಹಾಯದಿಂದ ಅರಿತುಕೊಳ್ಳಲು ಬಯಸಿದೆವು. ಈ ಅಧ್ಯಯನಕ್ಕೆ ಕಾರಣಗಳೆಂದರೆ:

1. ನಾನು ನನ್ನ ಫೆಲೋಶಿಪ್ ಕಾರ್ಯಕ್ರಮದ ಅವಧಿಯಲ್ಲಿ ಸರ್ಕಾರಿ ಶಾಲೆಗಳಿಗೆ ಭೇಟಿ ನೀಡುತ್ತಿದ್ದಾಗ, ಶಾಲೆ/ತರಗತಿ ಕೊಠಡಿಗಳಲ್ಲಿ ಸರ್ಕಾರ ಅಥವಾ ಇತರ ಸಂಸ್ಥೆಗಳು ನೀಡಿದ ಬಹಳಷ್ಟು ಬೋಧನಾ ಸಾಮಗ್ರಿಗಳು ಇದ್ದರೂ ಶಿಕ್ಷಕರಾಗಲೀ ಮಕ್ಕಳಾಗಲೀ ಇವುಗಳನ್ನು ಹೇಗೆ ಉಪಯೋಗಿಸಬೇಕು ಎಂದು ತಿಳಿಯದೆ, ಯಾವುದೋ ಮೂಲೆಯಲ್ಲಿ ಅವು ಧೂಳು ಹಿಡಿದು ಬಿದ್ದಿರುವುದನ್ನು ನೋಡಿದ್ದೆವು.

2. ನಾವು ಆರಿಸಿಕೊಂಡ 4ನೇ ತರಗತಿಯ ಸ್ನೇಹಿತರಿಗೆ ತರಗತಿಯಲ್ಲಿ ವಿಶೇಷ ಗಮನದ ಅಗತ್ಯವಿದ್ದಿತು. ಅವರು ತರಗತಿಯಲ್ಲಿ ಏನನ್ನೂ ಮಾಡಲು ಇಷ್ಟಪಡುತ್ತಿರಲಿಲ್ಲ–ವಾದ್ದರಿಂದ ನಾವು ಅವರನ್ನು ಆರಿಸಿಕೊಂಡಿದ್ದೆವು. ಅವರು ಎಲ್ಲ ಬೋಧನಾ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ಗಣಿತೀಯ ಪರಿಕಲ್ಪನೆಗಳನ್ನು ಅರಿತುಕೊಳ್ಳಲು ನಾವು ಅವಕಾಶ ನೀಡಿದೆವು. ಬಾಲ ಶೋಧ ಮೇಳದಲ್ಲಿ ಮಾತನಾಡಲು ಮತ್ತು ಸಭಿಕರ ಪ್ರಶ್ನೆಗಳಿಗೆ ಉತ್ತರಿಸಲು ನಾವು ಅವರನ್ನು ಹುರಿದುಂಬಿಸಿದೆವು, ಅದು ಅವರ ಆತ್ಮಸ್ಥೈರ್ಯ ಮತ್ತು ತರಗತಿಯಲ್ಲಿನ ಪಾಲ್ಗೊಳ್ಳುವಿಕೆಯನ್ನು ಹೆಚ್ಚಿಸಿತು.

2. ತರಗತಿಯಲ್ಲಿ ಶಿಕ್ಷಕರು ಬಳಸುವ ಬೋಧನಾ ಸಾಮಗ್ರಿಗಳು



ಮನೆಯಲ್ಲಿ ಇಲ್ಲದ್ದರಿಂದ ಅವು ಮಕ್ಕಳಿಗೆ ಹೇಗೆ ಸಹಾಯ ಮಾಡುವುದು ಎಂದು ಬಹುತೇಕ ಪೋಷಕರು ದೂರಿದರು. ಆದರೆ ಮನೆಯೊಳಗೆ ಮತ್ತು ಮನೆಯ ಸುತ್ತಮುತ್ತಲೂ ಇರುವ ಲಟ್ಟಣಿಗೆ, ಸ್ಟೂಲುಗಳು, ಹಗ್ಗಗಳು, ಕನ್ನಡಿಗಳು, ಮೊಳೆಗಳು, ಕಲ್ಲುಗಳು, ಮರ, ಬೇಳೆ, ಧಾನ್ಯ, ಎಲೆಗಳು ಮೊದಲಾದ ಸಾಕಷ್ಟು ವಸ್ತುಗಳನ್ನು ಬೋಧನಾ ಸಾಮಗ್ರಿಗಳಾಗಿ

ಬಳಸಬಹುದು. ಇವುಗಳನ್ನು ಬಳಸಿ ಮಕ್ಕಳಿಗೆ ಅವರು ಹೇಗೆ ಸಹಾಯ ಮಾಡಬಹುದೆಂದು ನಾವು ಹೇಳಿದೆವು. ಬಾಲ ಶೋಧ ಮೇಳದ ನಂತರ ಮಕ್ಕಳಿಗೆ ಮನೆಯಲ್ಲಿ ಹೇಗೆ ಸಹಾಯ ಮಾಡಬಹುದೆಂದು ತಾವು ಅರಿತೆವೆಂದು ಪೋಷಕರು ಹೇಳಿದರು. ಅವರು ತಮ್ಮ ಮಕ್ಕಳಿಗೆ ಕೂಡುವುದು, ಕಳೆಯುವುದು, ಹೋಲಿಸುವುದು, ಅಭ್ಯಾಸ ಮಾಡಿಸುವುದರ ಮೂಲಕ ಮಕ್ಕಳ ಗಣಿತೀಯ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ತುಂಬಾ ಮುಖ್ಯವಾದ ಪಾತ್ರವನ್ನು ವಹಿಸಬಹುದು.

ಬೋಧನಾ ಸಾಮಗ್ರಿಗಳು ಮಕ್ಕಳಿಗೆ ಸುಲಭವಾಗಿ ದಕ್ಕುವಂತಿದ್ದರೆ ಮತ್ತು ಸರಳವಾಗಿ ಬಳಸುವಂತಿದ್ದರೆ ಕಲಿಕೆಯಲ್ಲಿ ಮತ್ತು ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಅವು ಪ್ರಮುಖ ಪಾತ್ರ ವಹಿಸುತ್ತವೆ ಎಂಬುದಾಗಿ ನಮ್ಮ ಇಷ್ಟು ದಿನದ ಅನುಭವದಲ್ಲಿ ಅರಿತಿದ್ದೇವೆ. ಇವೆಲ್ಲದರ ಹೊರತಾಗಿಯೂ ಕೆಲವು ಮಕ್ಕಳು ಮತ್ತೂ ಕೂಡಾ ತರಗತಿಯಲ್ಲಿ ಕಲಿಕೆ ಅರ್ಥೈಸುವಿಕೆಯಲ್ಲಿ ಸವಾಲನ್ನೆದುರಿಸುತ್ತಾರೆ. ಕೆಲವರು ಅಭ್ಯಾಸ ಮಾಡುವುದಿಲ್ಲ–ವಾದ್ದರಿಂದ ಅವರು ತರಗತಿಯ ಮಟ್ಟದಲ್ಲಿಲ್ಲ. ಹಾಗಿದ್ದರೂ ನಾವು ಅವರೊಡನೆ ಕೆಲಸ ಮಾಡುತ್ತಿದ್ದೇವೆ. ಸಂಯಮ ಕಳೆದುಕೊಳ್ಳದೇ ನಾವು ಅವರಲ್ಲಿ ಎಲ್ಲ ರೀತಿಯಲ್ಲೂ ಸಾಧ್ಯವಾದ ಅರಿವು ಬೆಳೆಸಲು ಪ್ರಯತ್ನಿಸುತ್ತಿದ್ದೇವೆ. ಕೆಲವು ವೇಳೆ ಕೆಲ ಪೋಷಕರ ಪ್ರತಿಕ್ರಿಯೆ ಧನಾತ್ಮಕವಾಗಿರಲಿಲ್ಲ. ಅವರು ಮಕ್ಕಳು ಉರುಹೊಡೆದರೆ ಸಾಕು ಮತ್ತು ಇಷ್ಟು ಕಠಿಣ ಪರಿಶ್ರಮದ ಅಗತ್ಯವಿಲ್ಲ, ಮಕ್ಕಳು ಸರಿಯಾಗಿ ಕೆಲಸ ಮಾಡದಿದ್ದರೆ ಅವರಿಗೆ ಹೊಡೆಯಬೇಕೆಂದು ಕೂಡಾ ಭಾವಿಸುತ್ತಿದ್ದರು. ಈ ಬಗ್ಗೆ ನಾವು ಅವರೊಡನೆ ನಿರಂತರ ಸಂವಾದವನ್ನು ನಡೆಸುತ್ತಿದ್ದೆವು ಮತ್ತು ಮಕ್ಕಳೊಡನೆ ನಾವು ಅವರ ಅರ್ಥಗ್ರಹಿಕೆಯ ಕಡೆಗೇ ಗಮನ ವಹಿಸುತ್ತಿದ್ದೇವೆ ಹಾಗೂ ಮಕ್ಕಳು ದೈನಂದಿನ ವಸ್ತುಗಳೊಡನೆ ಸಮೀಕರಿಸಿಕೊಂಡು ಅರ್ಥ ಮಾಡಿಕೊಳ್ಳಬಲ್ಲರು ಎಂದು ಹೇಳುತ್ತಿದ್ದೆವು. ಶಿಕ್ಷಕರು, ಪೋಷಕರು ಮತ್ತು ಮಕ್ಕಳು ಎಲ್ಲರೂ ಒಟ್ಟಾಗಿ ಕಲಿಕೆ ಮತ್ತು ಅರ್ಥಗ್ರಹಿಕೆಯೆಡೆಗೆ ಕೆಲಸ ಮಾಡಿದಾಗ ಮಾತ್ರ ಶಾಲೆಯು ಕಲಿಕೆಗೆ ಒಂದು ಉತ್ತಮ ಸ್ಥಳವಾಗಿರುತ್ತದೆ.



**ಜನಕ್ ರಾಮ್** ಅವರು ವಿಜ್ಞಾನದಲ್ಲಿ ಪದವಿ ಮತ್ತು ಸಮಾಜಶಾಸ್ತ್ರ ಹಾಗೂ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನೂ ಹೊಂದಿದ್ದಾರೆ. ಅಜೀಂ ಪ್ರೇಮ್‌ಜಿ ಸಂಸ್ಥೆಯಲ್ಲಿ ಎರಡು ವರ್ಷದ ಫೆಲೋಶಿಪ್‌ನ ನಂತರ 2016ರ ಡಿಸೆಂಬರ್‌ನಿಂದ ಧಾಮ್‌ತರಿಯಲ್ಲಿನ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಗಣಿತ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಶಿಕ್ಷಕರಾಗಿ ಅವರು ಮಕ್ಕಳೊಡನೆ ಸ್ನೇಹಿತನಂತೆ ಇರುವುದನ್ನು ಬಯಸುತ್ತಾರೆ ಮತ್ತು ಅವರ ಜೊತೆಜೊತೆಗೆ ಗಣಿತದ ಪ್ರಕ್ರಿಯೆಗಳನ್ನು ಕಲಿತು ಅರ್ಥ ಮಾಡಿಕೊಳ್ಳಲು ಆಸಕ್ತರಾಗಿದ್ದಾರೆ. ಅವರನ್ನು janak.ram@azimpremjifoundation.org ಇಲ್ಲಿ ಸಂಪರ್ಕಿಸಬಹುದು.



**ಮುನ್ಷಿಲಾಲ್ ಬರ್ಸೆ** ಅವರು ಧಾಮ್‌ತರಿಯಲ್ಲಿನ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಫೆಬ್ರವರಿ 2012ರಿಂದ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕಲಾ ವಿಭಾಗದಲ್ಲಿ ಪದವೀಧರರಾದ ಇವರು ಹಿಂದಿ ಮತ್ತು ಸಮಾಜಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನೂ ಹೊಂದಿದ್ದಾರೆ. ಶಿಕ್ಷಕರಾಗಿ ಅವರು ಪ್ರಾಥಮಿಕ ತರಗತಿಗಳಲ್ಲಿ ಭಾಷೆ ಮತ್ತು ಗಣಿತದ ಕಲಿಕಾ ಪ್ರಕ್ರಿಯೆಯನ್ನು ಮಕ್ಕಳೊಡನೆ ಸೇರಿ ಅನ್ವೇಷಿಸಲು ಆಸಕ್ತರಾಗಿದ್ದಾರೆ. ಅವರನ್ನು munshi.barse@azimpremjifoundation.org ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ಜನಾರ್ದನ ಚನ್ನಗಿರಿ** । ಪರಿಶೀಲನೆ: **ನಾಗಮಣಿ ಎಸ್ ಎನ್**

ಪ್ರತಿಯೊಂದು ಮಗುವೂ ವಿಶಿಷ್ಟ ಮತ್ತು ಪ್ರತಿಯೊಬ್ಬರು ವಿವಿಧ ರೀತಿಯಲ್ಲಿ, ವಿವಿಧ ಸಮಯ ಮತ್ತು ಸ್ಥಳಗಳಲ್ಲಿ ಕಲಿಯುತ್ತಾರೆ. ಮಕ್ಕಳು ಅನುಭವಿಸಲು, ಪ್ರಯೋಗಿಸಲು ಮತ್ತು ತಮ್ಮ ಸುತ್ತಲಿನ ಸಂಗತಿಗಳ ಬಗ್ಗೆ ಪ್ರಶ್ನಿಸಲು ಸೂಕ್ತವಾದಂತಹ ಯೋಚನೆಯನ್ನು ಉತ್ತೇಜಿಸುವ ಅವಕಾಶವನ್ನು ಶಿಕ್ಷಕರು ಸೃಷ್ಟಿಸಿಕೊಡಬೇಕು, ಬೆಂಬಲಿಸಬೇಕು. ಆಗ ಪ್ರತಿಯೊಂದು ಮಗುವೂ ಕಲಿಯುತ್ತದೆ.

ಇಸಿಇ ಟೀಂ, ಮಕ್ಕಳು ವಿಭಿನ್ನ ರೀತಿಯಲ್ಲಿ ಕಲಿಯುತ್ತವೆ, ಪು.27

# ಭಾಷಾ ಬೋಧನೆ | ವಿಷಯವನ್ನು ಸಂದರ್ಭದೊಡನೆ ಬೆಸೆಯುವುದು

ಕಮಲಾ ಭಂಡಾರಿ

ಇಂದಿನ ಸನ್ನಿವೇಶದಲ್ಲಿ, ಮಕ್ಕಳು ಭಾಷೆಯ ಬಗೆಗಿನ ತಮ್ಮ ತಿಳುವಳಿಕೆಯನ್ನು ಬೆಳೆಸಿಕೊಳ್ಳುವುದರಲ್ಲಿ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ ಎನ್ನುವುದು ಸರ್ವೇಸಾಮಾನ್ಯವಾದ ಸಂಗತಿಯಾಗಿದೆ ಹಾಗೂ ಬಹಳಷ್ಟು ಶಿಕ್ಷಕರೂ ಆಗಿಂದಾಗ್ಗೆ ಇದನ್ನೇ ಹೇಳುತ್ತಿದ್ದಾರೆ. ಭಾಷೆಯನ್ನು ಬೋಧಿಸುವ ಪ್ರಕ್ರಿಯೆಯಲ್ಲಿ ಹಲವಾರು ಹಂತಗಳಿವೆ ಎನ್ನುವುದನ್ನು ನಾನು ತರಗತಿಯಲ್ಲಿ ಅಧ್ಯಾಪನದ ಬಳಿಕ ಅರಿತುಕೊಂಡೆ. ಕೃಷ್ಣಕುಮಾರ್ ಅವರ 'ದಿ ಚೈಲ್ಡ್ಸ್ ಲ್ಯಾಂಗ್ವೇಜ್ ಆಂಡ್ ದಿ ಟೀಚರ್' (The Child's Language and The Teacher) ಎಂಬ ಪುಸ್ತಕದಲ್ಲಿ ಈ ಪ್ರಕ್ರಿಯೆಗಳ ಬಗ್ಗೆ ಪುರಾವೆಗಳನ್ನು ಕಾಣಬಹುದು. ಮಕ್ಕಳ ಪರಿಸರದೊಂದಿಗೆ ಶಾಲೆಯ ಜ್ಞಾನವೂ ಸಮೀಕರಿಸಬೇಕು ಎನ್ನುವುದನ್ನು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (National Curriculum Framework- NCF, 2005) ಸಹ ಸಮರ್ಥಿಸುತ್ತದೆ. ಇದು ಸಾಧ್ಯವಾದಾಗಲಷ್ಟೇ ಅವರ ಆಲೋಚನೆಗೆ ಮತ್ತು ವಿವೇಚನಾಶಕ್ತಿಗೆ ಸಾಕಷ್ಟು ಅವಕಾಶಗಳು ಒದಗಿದಂತಾಗಿ ಮಕ್ಕಳ ಕಲಿಕೆ ಆರಂಭವಾಗುತ್ತದೆ.

ಸಾಧಾರಣವಾಗಿ ಮಕ್ಕಳು 3ನೇ ತರಗತಿಗೆ ಬರುವ ಹೊತ್ತಿಗಾಗಲೇ ತಮ್ಮ ಮಾತೃಭಾಷೆಯ ಸಮೃದ್ಧ ಜ್ಞಾನವನ್ನು ಅವರು ಹೊಂದಿರುತ್ತಾರೆ. ಜೊತೆಗೆ ತಮ್ಮ ಭಾವನೆಗಳ ಅಭಿವ್ಯಕ್ತಿಗೆ ಬೇಕಾದ ಪದಗಳು ಹಾಗೂ ವಾಕ್ಯಗಳ ಬಗೆಗಿನ ತಿಳುವಳಿಕೆಯು ಲಭಿಸಿರುತ್ತದೆ. ತಮ್ಮ ಅಗತ್ಯಗಳ ಕುರಿತು, ಚೆನ್ನಾಗಿ ತಿಳಿದಿರುತ್ತಾರೆ ಮತ್ತು ಅದನ್ನು ಮಾತಿನಲ್ಲಿಯೂ ವ್ಯಕ್ತಪಡಿಸಬಲ್ಲರು. ಈ ಪದಸಂಪತ್ತನ್ನು ಯಾರೂ ಅವರಿಗೆ ಹೇಳಿಕೊಡದಿದ್ದರೂ ಮನೆಯ ಹಿರಿಯರ ಮನವೊಲಿಸುವ ವಿಧಾನಗಳನ್ನು ಚೆನ್ನಾಗಿ ಅರಿತಿರುತ್ತಾರೆ. ಮಕ್ಕಳು ತಮ್ಮ ಮನೆಯ ಪರಿಸರ, ಸಂವಾದಗಳು ಹಾಗೂ ಅವಕಾಶಗಳನ್ನು ಗಮನಿಸಿ ಎಲ್ಲವನ್ನೂ ಸ್ವತಃ ತಾವೇ ಕಲಿತಿರುತ್ತಾರೆ. ಹಿರಿಯರ ಮುಖ-ಭಾವಗಳನ್ನು ನೋಡಿಯೇ ಅವರನ್ನು ಯಾವಾಗ ಮತ್ತು ಹೇಗೆ ಒಪ್ಪಿಸಬೇಕೆಂಬುದನ್ನು ತಿಳಿದಿರುತ್ತಾರೆ. ಒಂದು ನಿರ್ದಿಷ್ಟ ಸಮಯದಲ್ಲಿ ಮಾತನಾಡಬೇಕೇ ಬೇಡವೇ ಹಾಗೂ ಯಾವಾಗ ಮಾತನಾಡಿದರೆ ತಮ್ಮ ಮಾತುಗಳನ್ನು ಕೇಳಿಸಿಕೊಳ್ಳುತ್ತಾರೆ ಎಂಬುದನ್ನೂ ತಿಳಿದಿರುತ್ತಾರೆ.

ಮನೆಯಲ್ಲಿ ಮಾತನಾಡಲು ಹಾಗೂ ಪದಗಳು ಮತ್ತು ವಾಕ್ಯಗಳನ್ನು ಪುನರಾವರ್ತಿಸಲು ಅವಕಾಶಗಳು ಸಿಗುತ್ತವೆ ಹಾಗೂ ಅಂತಹ ಪರಿಸರದಲ್ಲಿ ಅವರು ಪದಗಳ ಬಳಕೆ, ವಾಕ್ಯಗಳ ರಚನೆ ಹಾಗೂ ತಾವೇ ಮಾತನಾಡಲು ಕಲಿಯುತ್ತಾರೆ. ಭಾಷೆಗೆ ತನ್ನದೇ ಆದ ನಿಯಮಗಳಿವೆ ಹಾಗೂ ತನ್ನದೇ ಆದ ಕ್ರಮಗಳನ್ನೂ ಹೊಂದಿದೆ. ಮಕ್ಕಳು ಅವುಗಳನ್ನು ಸಮರ್ಥವಾಗಿ ಬಳಸುತ್ತಾರೆ. ಮನೆಯಲ್ಲಿ ಸಮೃದ್ಧ ಭಾಷಾ ಪರಿಸರವಿದ್ದಲ್ಲಿ ಅವರು ಮನೆಯ ಭಾಷೆಯನ್ನು ಉತ್ತಮವಾಗಿ ಮಾತನಾಡಲು ಹಾಗೂ ಓದಲು ಕಲಿಯುತ್ತಾರೆ. ಶಾಲೆಯಲ್ಲಿ ಭಾಷಾ ಕಲಿಕೆಯ ಸನ್ನಿವೇಶವನ್ನು ನಿರ್ಮಿಸಿದರೆ ಹಾಗೂ ಒಂದು ಸಮೃದ್ಧ ಭಾಷಾ ಪರಿಸರವನ್ನು ಒದಗಿಸಿದಲ್ಲಿ ಓದುವ ಹಾಗೂ ಬರೆಯುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳುತ್ತಾರೆ.

ಎನ್‌ಸಿಎಫ್ 2005ರಲ್ಲಿ ಸೂಚಿಸಿರುವ ಪ್ರಕಾರ, ಉರುಹೊಡೆದು ಕಲಿಯುವ ಪದ್ಧತಿಗಿಂತ ಮಕ್ಕಳು ಅಗತ್ಯವಾದ ಜ್ಞಾನವನ್ನು ಅರ್ಥೈಸಿಕೊಂಡು ಕಲಿಯುವುದಕ್ಕೆ ಬೇಕಾದ ಹಾಗೆ 1ರಿಂದ 12ನೇ ತರಗತಿಯ ಪಠ್ಯಗಳನ್ನು ಅಭಿವೃದ್ಧಿಪಡಿಸಲಾಗಿದೆ. ಜೊತೆಯಲ್ಲಿ ಅವರು ತಮ್ಮ ಪುಸ್ತಕದ ಜ್ಞಾನವನ್ನು ಸಮಾಜದ ಸನ್ನಿವೇಶಗಳಿಗೆ ಹೊಂದಿಕೆಯಾಗುವಂತೆ ಬಳಸುತ್ತ ದೇಶ ಕಟ್ಟುವ ಕಾರ್ಯದಲ್ಲಿ ಮುಖ್ಯವಾದ ಭೂಮಿಕೆಯನ್ನು ನಿರ್ವಹಿಸಬಹುದು. ಮಕ್ಕಳ ಶಾಲಾ ಜೀವನವು ಅವರ ನಿತ್ಯ ಜೀವನದೊಂದಿಗೂ ಸಮೀಕರಿಸುವಂತಿರ-ಬೇಕೆಂದು ಎನ್‌ಸಿಎಫ್ 2005 ಸೂಚಿಸುತ್ತದೆ. ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ (National Education Policy -NEP, 1986) ವಿವರಿಸಿರುವಂತೆ ಮಗು-ಕೇಂದ್ರಿತ ವ್ಯವಸ್ಥೆಯತ್ತ ಸಾಗುವ ದೀರ್ಘ ಪಯಣದಲ್ಲಿ ಈ ಸಮೀಕರಣ ಸಹಾಯ ಮಾಡುತ್ತದೆ. ಆನಂತರ ಬಂದುದೇ ಕಪ್ಪುಹಲಗೆಯ ಕಾರ್ಯಾಚರಣೆ (Operation Blackboard). ಇದರಲ್ಲಿ ಪ್ರಾಥಮಿಕ ಶಾಲೆಗಳ ಮಕ್ಕಳಿಗೆ ಶೈಕ್ಷಣಿಕ ಸಂಪನ್ಮೂಲಗಳನ್ನು ಒದಗಿಸುವುದು ಹಾಗೂ ಶಿಕ್ಷಕರನ್ನು ಸಜ್ಜುಗೊಳಿಸುವುದು ಇತ್ಯಾದಿಗಳು ಮುಖ್ಯ ಉದ್ದೇಶವಾಗಿತ್ತು. ಇದಕ್ಕಾಗಿ 3 ಅಡಿ ಉದ್ದದ ಕಪ್ಪು ಪಟ್ಟಿಯನ್ನು ಮಕ್ಕಳು ಚಿತ್ರ ಬಿಡಿಸಲು ಹಾಗೂ ತಮ್ಮ ಕೆಲಸವನ್ನು ಮಾಡಲು ಅನುಕೂಲವಾಗುವಂತೆ ತರಗತಿ ಕೊಠಡಿಗಳ ಗೋಡೆಯ ಮೇಲೆ ಕಪ್ಪುಹಲಗೆಯಂತೆ ನೇತುಹಾಕಲಾಯಿತು.

ಭಾಷೆಯನ್ನು ಕಲಿಸಲು ಈ ವಿಧಾನವನ್ನು ನಾನು 1ನೇ ತರಗತಿಯಿಂದಲೇ ಅಳವಡಿಸಿಕೊಂಡಿದ್ದೇನೆ. ಮಕ್ಕಳ ಮನೆವಾರ್ತೆ, ಅವರ ಪರಿಸರದಿಂದ ಅಥವಾ ಆಯಾ ಸಂದರ್ಭದಲ್ಲಿ ಬಳಸುವ ಸ್ಥಳೀಯ ಪದಗಳನ್ನು ಅಥವಾ ಹಣ್ಣುಗಳು, ಮರಗಳು, ತರಕಾರಿಗಳ ಹೆಸರನ್ನು ನಾನು ಆರಿಸಿಕೊಳ್ಳುತ್ತೇನೆ. ಮಕ್ಕಳು ಇವುಗಳೊಂದಿಗೆ ಪರಿಚಿತರಾಗಿರುತ್ತಾರೆ. ನಂತರ ಅವುಗಳ ಚಿತ್ರವನ್ನು ಕಪ್ಪುಹಲಗೆಯ ಮೇಲೆ ಬಿಡಿಸುತ್ತೇನೆ. ಮಕ್ಕಳು ಚಿತ್ರವನ್ನು ನೋಡಿ ಗುರುತು ಹಿಡಿದು ಅವುಗಳ ಬಗ್ಗೆ ಒಂದೆರಡು ವಾಕ್ಯಗಳನ್ನು ಹೇಳುತ್ತಾರೆ. ಮಕ್ಕಳು ತಮ್ಮ ಪುಸ್ತಕಗಳಲ್ಲಿ ಚಿತ್ರಗಳನ್ನು ಬಿಡಿಸಿ ಅವುಗಳ ಹೆಸರನ್ನು ಬರೆಯಲು ಪ್ರಯತ್ನಿಸುತ್ತಾರೆ. ಈ ಪದಗಳು ಮತ್ತೆಮತ್ತೆ ಪುನರಾವರ್ತನೆಯಾದಾಗ ಅವರು ಬರೆಯಲು ಕಲಿಯುತ್ತಾರೆ. ನಾನು ಈ ಪ್ರಕ್ರಿಯೆಯನ್ನು ಮುಂದುವರೆಸುತ್ತಲೇ ಇದ್ದಾಗ ಮಕ್ಕಳು ಓದಲು ಹಾಗೂ ಚಿತ್ರ ಬಿಡಿಸಲು ಸಹಜವಾಗಿ ಹೊಂದಿಕೊಳ್ಳ-ತೊಡಗುತ್ತಾರೆ.

ಹೀಗೆಯೇ ಪಯಣ ಸಾಗುತ್ತದೆ ಹಾಗೂ ನಾನು ಕೆಲವೊಮ್ಮೆ ಹೆಸರುಗಳಿಂದ ಮತ್ತೊಮ್ಮೆ ಸಣ್ಣ ಪದ್ಯಗಳಿಂದ ಆರಂಭಿಸುತ್ತೇನೆ. ಮಕ್ಕಳು ಚಿಕ್ಕ ಹಾಗೂ ಸರಳ ಪದಗಳಿರುವ ಕವನವನ್ನು ಬೇಗ ಕಲಿಯುತ್ತಾರೆ. ಉದಾಹರಣೆಗೆ ಈ ನಾಲ್ಕು ಸಾಲಿನ ಪದ್ಯ:

ಮಜಾ ಆಗಯಾ ಖೇಲ್ ಮೇಂ,
ಭಾಲು ಭಾಗಾ ರೇಲ್ ಮೇಂ,
ಹಸ್ಸ್ ಕರ್ ಬೋಲಾ ಅಚ್ಛಾ ಟಾಟಾ,
ಮೇಂ ಕರ್ ಆವೂಂ ಸೇರ್ ಸಪಾಟಾ.

ಮಕ್ಕಳು ಈ ಪದ್ಯದ ಮೂಲಕ ಪ್ರಾಸ ಪದಗಳನ್ನು ಹೇಳುತ್ತ ಸುಲಭವಾಗಿ ನೆನಪಿಟ್ಟುಕೊಳ್ಳುತ್ತಾರೆ. ಈ ರೀತಿಯಲ್ಲಿ ಸಣ್ಣ ಪದ್ಯಗಳ ಮೂಲಕ ಕೇಳುವ, ಮಾತನಾಡುವ ಹಾಗೂ ಚಟುವಟಿಕೆಗಳನ್ನು ಕೈಗೊಳ್ಳುವ ಸಾಮರ್ಥ್ಯವನ್ನು ಬೆಳೆಸಬಹುದು. ನಾನು ಪ್ರಾಣಿಗಳ ಹೆಸರನ್ನು ಹೇಳಲು ಕೇಳಿದಾಗ, ಮಕ್ಕಳು ಹಲವಾರು ಸಾಕುಪ್ರಾಣಿಗಳ ಹಾಗೂ ಕಾಡುಪ್ರಾಣಿಗಳ ಹೆಸರುಗಳನ್ನು ಹೇಳಿದರು. ಈ ಪ್ರಾಣಿಗಳ ಕುರಿತು ಮಾತನಾಡಿ, ಅವುಗಳಿಗೆ ಸಂಬಂಧಿಸಿದ ಕೆಲವು ಪ್ರಶ್ನೆಗಳನ್ನು ಕೇಳಿದಾಗ ಒಂದಿಬ್ಬರು ಮಕ್ಕಳನ್ನು ಹೊರತುಪಡಿಸಿ, ಉಳಿದೆಲ್ಲರೂ ಏನೋ ಒಂದನ್ನಾದರೂ ಹೇಳಿದರು. ಉದಾಹರಣೆಗೆ: ಹುಲಿ ಕಾಡಿನಲ್ಲಿ ವಾಸಿಸುತ್ತದೆ, ಹಸು ಮನೆಯಲ್ಲಿ ವಾಸಿಸುತ್ತದೆ. ಒಂದು ಪ್ರಾಣಿಯ ಹೆಸರನ್ನು ಹೇಳಿ ಅದರ ಬಗ್ಗೆ ಏನಾದರೂ ಬರೆಯಲು ಹೇಳಿದಾಗ, ಮಕ್ಕಳು ಸಣ್ಣ ವಾಕ್ಯಗಳನ್ನು ಬರೆದರು. ಕಾಗುಣಿತಗಳನ್ನು ಬರೆಯುವಾಗ ಕೆಲವು ತಪ್ಪುಗಳನ್ನು ಮಾಡಿದರೂ ನಾನು ಬರೆಯುವುದನ್ನು ತಡೆಯುವುದಿಲ್ಲ. ಏನೇ ಆದರೂ ಅವಸರದಲ್ಲಿ ಬರೆಯುವಾಗ ಮಕ್ಕಳು ತಪ್ಪು ಮಾಡುತ್ತಾರೆ.

**ಇತರ ಚಟುವಟಿಕೆಗಳು**

ಈ ವಯಸ್ಸಿನಲ್ಲಿ ಮಕ್ಕಳು ಕುತೂಹಲಿಗಳಾಗಿರುತ್ತಾರೆ ಹಾಗೂ ಕಲಿಯಲು ಉತ್ಸುಕರಾಗಿರುತ್ತಾರೆ. ಅವರು ನೋಟ್ ಪುಸ್ತಕದಲ್ಲಿ ಬರೆಯುವುದಕ್ಕೆ ಬದಲಾಗಿ ಬೇರೆ ಕಡೆ ಬರೆಯಲು ಬಯಸುತ್ತಾರೆ. ಹಾಗಾಗಿ ನಾನು ಅವರೊಡನೆ ಈ ಮುಂದಿನಂತೆ ಪ್ರಕ್ರಿಯೆಗಳನ್ನು ಕೈಗೊಂಡೆನು:

**ಸಂದರ್ಭಕ್ಕೆ ಸಂಬಂಧಿಸಿದ ಸಂವಾದಗಳು**

3ನೇ ತರಗತಿಯ ಮಕ್ಕಳ ಜೊತೆಗಿದ್ದಾಗ ಆದ ಅನುಭವವಿದು. ಮೊದಲಿಗೆ ಅವರ ಬದುಕಿನ ಸಂದರ್ಭಗಳನ್ನು ಕುರಿತು ಅವರೊಡನೆ ಮಾತನಾಡಿದೆ. ತರಗತಿಯಲ್ಲಿ ಆ ಸಂದರ್ಭಕ್ಕೆ ಸಂಬಂಧಿತ ಕೆಲವು ಚಿತ್ರಗಳನ್ನೂ ಬಿಡಿಸಿದೆ. ಆ ಚಿತ್ರಗಳ ಕುರಿತು ಮಕ್ಕಳೊಡನೆ ಚರ್ಚಿಸಿದಾಗ ಅವರು ತಮ್ಮ ಅನಿಸಿಕೆಗಳನ್ನು ಮುಕ್ತವಾಗಿ ಹಂಚಿಕೊಂಡರು. ಮಕ್ಕಳಿಗೆ ಸುಪರಿಚಿತವಾದ ಸಂದರ್ಭಗಳಿಗೆ ಸಂಬಂಧಿಸಿದಂತೆ ಅಥವಾ ಅವರ ಸುತ್ತಮುತ್ತಲಿನ ಘಟನೆಗಳ ಕುರಿತು ನಾವು ಕೇಳಿದಾಗ ಅವರು ಮುಕ್ತವಾಗಿ ಮಾತನಾಡುತ್ತಾರೆ ಎಂಬುವುದು ಸಂವಾದದ ಸಮಯದಲ್ಲಿ ಕಂಡುಬಂದಿತು.

**ಪದ್ಯಗಳು ಹಾಗೂ ಕಥೆಗಳು**

ಹಾಗೂ 2ನೇ ತರಗತಿಯ ಮಕ್ಕಳಿಗೆ ಸಣ್ಣ ಪದ್ಯಗಳನ್ನು ಕಂಠಪಾಠ ಮಾಡಲು ಹೇಳಲಾಯಿತು. ಮಕ್ಕಳು ಪದ್ಯಗಳನ್ನು ಬಹಳ ಇಷ್ಟಪಡುತ್ತಾರೆ ಹಾಗೂ ಬೇಗನೆ ಕಲಿತು ನೆನಪಿಟ್ಟುಕೊಳ್ಳುತ್ತಾರೆ. ಈ ಪದ್ಯಗಳನ್ನು ಗುನುಗುತ್ತಾ ಪುನರಾವರ್ತಿಸುತ್ತಿರುತ್ತಾರೆ. ಮುಖ್ಯವಾಗಿ ಪಂಚತಂತ್ರ, ಜನಪದ ಕಥೆಗಳು, ಲಾಲು ಔರ್ ಪೀಲು, ಗಿಜುಭಾಯ್‌ನ ಕಥೆಗಳು, ಕಜರಿ ಗಾಯ್ ಹಾಗೂ ಬರ್ಖಾ ಸರಣಿಗಳಿಂದ ನಾನು ಕೆಲವು ಕತೆಗಳನ್ನು ಆಯ್ಕೆ ಮಾಡಿದೆ. ಕತೆ ಕೇಳಿದ ನಂತರ ಮಕ್ಕಳು ಅದೇ ತರಹದ ತಮ್ಮದೇ ಆದ ಕತೆಗಳನ್ನು ಹೇಳಲು ಪ್ರಾರಂಭಿಸುತ್ತಾರೆ ಎಂಬುದನ್ನು ನಾನು ಗಮನಿಸಿದೆ. ಈ ಹಂತದಲ್ಲಿ ಶಿಕ್ಷಕರು ಮಕ್ಕಳನ್ನು ಅರ್ಥಮಾಡಿಕೊಂಡು ಬಹಳ ತಾಳ್ಮೆಯಿಂದ ವರ್ತಿಸಬೇಕು. ಕಥೆಗಳ ಬಗ್ಗೆ ಚರ್ಚಿಸಿದ ನಂತರ ಮಕ್ಕಳಿಗೆ ತಮ್ಮ ಅನುಭವದ ಆಧಾರದ ಮೇಲೆ ಚಿತ್ರ ಬಿಡಿಸಲು ಅಥವಾ ಬರೆಯಲು ಪ್ರೋತ್ಸಾಹಿಸಲಾಯಿತು. ಈ ರೀತಿಯ ಪ್ರೋತ್ಸಾಹದಿಂದ ಮಕ್ಕಳ ಬರವಣಿಗೆಗೆ ಒಳ್ಳೆಯ ಆರಂಭ ದೊರಕಿದಂತಾಗುತ್ತದೆ.

**ಚಿತ್ರಗಳು**

ತರಗತಿಯ ಪರಿಸರವನ್ನು ಆಕರ್ಷಕವಾಗಿಸಲು ನಾನು ಹಣ್ಣು ಹಾಗೂ ತರಕಾರಿಗಳ ಚಿತ್ರಗಳನ್ನು ಕಪ್ಪುಹಲಗೆಯ ಮೇಲೆ ಚಿತ್ರಿಸಿ, ಆನಂತರ ಅವರಿಗೆ ಬಿಡಿಸಲು ಹೇಳಿದೆ. ಅವರು ತಮಗೆ ಇಷ್ಟವಾದುದನ್ನೇ ಮೊದಲು ಬಿಡಿಸುತ್ತಾರೆ. ಈ ಚಟುವಟಿಕೆಯ ಸಹಾಯದಿಂದ ಮಕ್ಕಳು ಪದಗಳನ್ನು ಗುರುತಿಸಲು ಕಲಿಯುತ್ತಾರೆ,



ಅವುಗಳ ಬಗ್ಗೆ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಾರೆ. ಅವರು ತಮ್ಮ ಇಷ್ಟಾನಿಷ್ಟಗಳನ್ನು ಹಂಚಿಕೊಳ್ಳುತ್ತಾರೆ. ಚಿತ್ರಗಳನ್ನು ಬಿಡಿಸುವ ಅಭ್ಯಾಸದಿಂದ ಮಕ್ಕಳ ಕೈಬರಹ ಹಾಗೂ ಬರವಣಿಗೆಯ ಕೌಶಲಗಳೂ ಹೆಚ್ಚುತ್ತವೆ.

**ಮಕ್ಕಳ ಸಾಹಿತ್ಯ**

ನಾಲ್ಕನೆಯ ಹಂತ, ಮಕ್ಕಳು ಓದಲು ಹಾಗೂ ಬರವಣಿಗೆ ಕಲಿಯಲು ವಿಶೇಷ ಮಹತ್ವ ಹೊಂದಿರುವ ಮಕ್ಕಳ ಸಾಹಿತ್ಯ. ನನ್ನ ಬೋಧನೆಯಲ್ಲಿ ಇದನ್ನು ವ್ಯಾಪಕವಾಗಿ ಬಳಸಿಕೊಂಡಿದ್ದೇನೆ. ಮಕ್ಕಳಿಗೆ ಓದುವುದಕ್ಕೆ ಬಹಳಷ್ಟು ಅವಕಾಶಗಳನ್ನು ಕೊಟ್ಟಿದ್ದೇನೆ. ಬರ್ಖಾ ಸರಣಿಯ ಪುಸ್ತಕಗಳು ಮಕ್ಕಳ ಹಂತಕ್ಕೆ ಹೊಂದಿಕೆಯಾಗುತ್ತಿದ್ದು, ಅವರ ಕಲಿಕೆಗೆ ಇದರಿಂದ ಸಹಾಯವಾಗುತ್ತದೆ. ನನ್ನ ಶಾಲೆಯ 3ನೇ ತರಗತಿಯ ಮಕ್ಕಳೇ ಇದಕ್ಕೆ ಸ್ಪಷ್ಟ ನಿದರ್ಶನವಾಗಿದ್ದಾರೆ. ಅವರು ಸಣ್ಣ ಕಥೆಗಳಿರುವ ಬರ್ಖಾ ಸರಣಿಯ ಹಲವು ಪುಸ್ತಕಗಳನ್ನು ಓದುತ್ತಾರೆ. ಇಲ್ಲಿ ಹೆಸರುಗಳು ಹಾಗೂ ಪದಗಳು ಪುನರಾವರ್ತನೆಯಾಗುವುದರಿಂದ ಮಕ್ಕಳು ವೇಗವಾಗಿ ಕಲಿಯುತ್ತಾರೆ.




**ಕಥೆಯ ರಚನೆ**

ಕಥೆಯನ್ನು ರಚಿಸುವ ಕ್ರಿಯೆಯಲ್ಲಿ, ಮಕ್ಕಳ ಸಾಹಿತ್ಯದ ಓದುವಿಕೆಯಿಂದ, ಓದಿನಲ್ಲಿ ಆಸಕ್ತಿ ಉಂಟಾಗುವುದಲ್ಲದೇ ಬರವಣಿಗೆಯಲ್ಲೂ ಆಸಕ್ತಿ ಬೆಳೆಯುತ್ತದೆ. ಮಕ್ಕಳು ತಮ್ಮ ಓದುವಿಕೆಯಿಂದ ಹಾಗೂ ತಮಗಾದ ಅನುಭವದ ಆಧಾರದ ಮೇಲೆ ಹೊಸ ಕಥೆಯನ್ನು ರಚಿಸುತ್ತಾರೆ. ಅವರು ಎರಡನ್ನೂ ಸಮೀಕರಿಸಿ ತಮ್ಮದೇ ಆದ ಹೊಸ ಕಥೆಯನ್ನೂ ಕಟ್ಟುತ್ತಾರೆ.

ಕಳೆದ ಎರಡು ವರ್ಷಗಳಿಂದ ಮಕ್ಕಳ ಕಲಿಕೆಯೆಡೆಗಿನ ನನ್ನ ಪ್ರಯತ್ನಗಳ ಫಲಿತಾಂಶವು ಅರ್ಥಪೂರ್ಣ ರೀತಿಯಲ್ಲಿ ಇಂದು ನನ್ನ ಮುಂದಿದೆ ಎಂದು ಹೆಮ್ಮೆಯಿಂದ ಹೇಳಬಯಸುತ್ತೇನೆ. ಮಕ್ಕಳು ಒಂದು ವಿಷಯದ ಬಗ್ಗೆ ಸ್ವಂತ ವಾಕ್ಯಗಳನ್ನು ರಚಿಸಿ ಬರೆಯುವುದಲ್ಲದೆ ಒಂದು ಸ್ವಂತ ಸಣ್ಣ ಕತೆಯನ್ನೂ ಬರೆಯುತ್ತಾರೆ. ಇದಲ್ಲದೇ ಪಠ್ಯಪುಸ್ತಕದಲ್ಲಿ ಕೊಟ್ಟಿರುವ ಅಭ್ಯಾಸಗಳನ್ನೂ ಚೆನ್ನಾಗಿ ಮಾಡುತ್ತಾರೆ. ಒಂದು ಕಥೆಯ ಬಗ್ಗೆ ಅವರ ಆಲೋಚನೆಗಳನ್ನು ಬರೆಯಲು ಹೇಳಿದಾಗ ಬಹಳಷ್ಟು ಮಕ್ಕಳು ಸೊಗಸಾದ ಕತೆಗಳನ್ನು ಬರೆದರು. ಈ ಅಭ್ಯಾಸದ ಇನ್ನೊಂದು ವೈಶಿಷ್ಟ್ಯವೆಂದರೆ ಮಕ್ಕಳು ತಮ್ಮನ್ನು ತಾವೇ ಮೌಲ್ಯಮಾಪನ ಮಾಡಿಕೊಳ್ಳುತ್ತಿದ್ದರು. ತಾವೇ ಬರೆದ ಕತೆಗಳನ್ನು ಪರಸ್ಪರ ಕೇಳುವಾಗ ನಗುತ್ತ ತಮ್ಮ ಅಭಿಪ್ರಾಯಗಳನ್ನೂ ಮುಂದಿಡುತ್ತಿದ್ದರು. 3ನೇ ತರಗತಿಯ 'ರಿಮ್‌ಝಿಮ್' ಹೆಸರಿನ ಪಠ್ಯಪುಸ್ತಕದಿಂದ 'ಕಬ್ ಆವೂಂ' ಎಂಬ ಪಾಠವನ್ನು ಬೋಧಿಸಿದಾಗ ಮಕ್ಕಳು ಹಲವಾರು ಪ್ರಶ್ನೆಗಳನ್ನು ಕೇಳಿದರು. ಬಹಳ ಎಚ್ಚರಿಕೆಯಿಂದ ಆಲೋಚಿಸಿ ಆ ಪಾಠಕ್ಕೆ ಬೇರೆ ಶೀರ್ಷಿಕೆಗಳನ್ನು ಸುಲಭವಾಗಿ ಸೂಚಿಸಿದರು. ಎಲ್ಲ ಮಕ್ಕಳೂ

ಬೇರೆಬೇರೆ ಶೀರ್ಷಿಕೆಗಳನ್ನು ಹೇಳಿದರು. ಮಕ್ಕಳು ಚುರುಕಾಗಿ ಆಲೋಚಿಸುವ ಶಕ್ತಿಯನ್ನು ಹೊಂದಿರುತ್ತಾರೆ. ಒಂದು ಮಗುವು ಪಾಠದ ಹೆಸರು 'ದುಕಾನ್‌ದಾರ್ ಔರ್ ಸೇಠ್' ಎಂದಿತು, ಎರಡನೆಯದು 'ಮೂರ್ಖ್ ಸೇಠ್' ಇರಬಹುದು ಎಂದಿತು, ಇತರ ಮಕ್ಕಳು 'ಜೈಸಿ ಕರ್‌ನಿ ವೈಸಿ ಭರ್‌ನಿ', 'ಜೈಸೆ ಕೊ ತೈಸಾ' ಇರಬಹುದು ಎಂದರು. ಪಾಠದ ಉದ್ದೇಶ ಅರ್ಥವಾಯಿತೊ ಇಲ್ಲವೋ, ಪಾಠ ಹಾಗೂ ಚಟುವಟಿಕೆಗಳನ್ನು ಬಹಳ ಉತ್ತಮವಾಗಿ ಅಭ್ಯಸಿಸಲು ಸಮರ್ಥರಾದರು ಹಾಗೂ ತಮ್ಮ ಅನುಭವವನ್ನು ಕಟ್ಟಿ ಮುಂದುವರೆಯಲು ತಯಾರಾದರು.

**ಭಾಷಾ ಕಲಿಕೆಯ ಉದ್ದೇಶಗಳು**

ಭಾಷೆ ಎಂಬುದು ಸಂವಹನದ ಮಾಧ್ಯಮವಷ್ಟೇ ಅಲ್ಲ ಅದು ಆಲೋಚಿಸಲು, ಅರ್ಥೈಸಲು ಹಾಗೂ ತನ್ನನ್ನು ತಾನು ಅಭಿವ್ಯಕ್ತಿಸಲು ಸಹಾಯ ಮಾಡುತ್ತದೆ. ನನ್ನ ಪ್ರಕಾರ ಭಾಷಾ ಕಲಿಕೆಯಿಂದ ಆಗಬೇಕಾದ ಕೆಲವು ಅಂಶಗಳು:

- ಆಲೋಚನೆಗಳನ್ನು ಹಂಚಿಕೊಳ್ಳುವುದು
- ಶಾಲಾ ಪರಿಸರವನ್ನು ಆರಾಮದಾಯಕವಾಗಿಸುವುದು
- ನಮ್ಮದು ಎನ್ನುವ ಭಾವನೆಯನ್ನು ಹಾಗೂ ಕಾರ್ಯ–ತತ್ಪರತೆಯನ್ನು ಬೆಳೆಸುವುದು
- ಮಾತೃಭಾಷೆಯನ್ನು ಸ್ಥಳೀಯ ಭಾಷೆಯೊಂದಿಗೆ ಸಮೀಕರಿಸಿ ಜ್ಞಾನ ವೃದ್ಧಿಸುವುದು
- ಸ್ವಂತ ಅಭಿವ್ಯಕ್ತಿಗೆ ಅವಕಾಶಗಳನ್ನು ಹುಟ್ಟುಹಾಕುವುದು
- ಮಕ್ಕಳು ಹೇಳುವುದನ್ನು ಕೇಳಿಸಿಕೊಳ್ಳುವುದು
- ಗ್ರಹಿಕೆಯುಕ್ತ ಓದಿನ ಹವ್ಯಾಸವನ್ನು ಬೆಳೆಸುವುದು
- ಸುತ್ತಮುತ್ತಲಿನ ಪರಿಸರದಲ್ಲಿ ಕಾಣಸಿಗುವ ಉಲ್ಲೇಖಗಳು ಹಾಗೂ ದೃಶ್ಯಗಳ ಆಧಾರದ ಜ್ಞಾನವನ್ನು ಪ್ರೋತ್ಸಾಹಿಸುವುದು ಹಾಗೂ ನಿರ್ಣಯಿಸಲು ಸಮರ್ಥರನ್ನಾಗಿಸುವುದು
- ಶಾಲೆಯಲ್ಲಿ ದೊರಕುವ ಜ್ಞಾನವನ್ನು ಹೊರಗಿನ ಜ್ಞಾನದೊಂದಿಗೆ ಸಮೀಕರಿಸಿ ಬೋಧಿಸುವುದು
- ಒಬ್ಬರ ಅನುಭವವನ್ನು ಕವನ ಹಾಗೂ ಕತೆಯೊಂದಿಗೆ ಸಂಬಂಧ ಕಲ್ಪಿಸಿಕೊಳ್ಳಲು ಸಮರ್ಥರಾಗುವುದು
- ಒಬ್ಬರ ಆಲೋಚನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸಲು ಹಾಗೂ ಆ ಕತೆಯನ್ನು ಒಬ್ಬರ ಪರಿಸರ ಮತ್ತು ಅನುಭವದೊಂದಿಗೆ ಸಂಬಂಧಿಸಲು ಸಮರ್ಥರಾಗುವುದು
- ಭಾಷಾವಿಜ್ಞಾನದ ಕೌಶಲಗಳನ್ನು ಬೆಳೆಸುವುದು
- ಸ್ವ–ಕಲಿಕೆ ಹಾಗೂ ಸ್ವ–ಬರವಣಿಗೆಯ ಅಭ್ಯಾಸವನ್ನು ಪೋಷಿಸುವುದು
- ಆತ್ಮವಿಶ್ವಾಸವನ್ನು ಹೆಚ್ಚಿಸುವುದು
- ವಸ್ತುವಿಷಯವನ್ನು ಅರ್ಥೈಸಿಕೊಂಡು ಚೆನ್ನಾಗಿ ಬರೆಯುವುದು
- ಸದಭಿರುಚಿಯನ್ನು, ಕಲ್ಪನಾಶಕ್ತಿ ಹಾಗೂ ಸೃಜನಶೀಲತೆಯನ್ನು ಬೆಳೆಸಿಕೊಳ್ಳುವುದು

ಮಕ್ಕಳು ಈಗಾಗಲೇ ಹೊಂದಿರುವ ಜ್ಞಾನವನ್ನು ಇನ್ನಷ್ಟು ವೃದ್ಧಿಸುವುದೇ ಶಿಕ್ಷಕಿಯಾದ ನನ್ನ ಕರ್ತವ್ಯ. ಭಾಷಾ ಸಮೃದ್ಧತೆಯನ್ನು ಶ್ರೀಮಂತಗೊಳಿಸಲು, ವಿವೇಚನಾ ಶಕ್ತಿಯನ್ನು ಬೆಳೆಸಲು, ಅಭಿವ್ಯಕ್ತಿಸಲು, ವಿಶ್ಲೇಷಿಸಲು, ಕಲ್ಪನಾಶಕ್ತಿಯನ್ನು ಬೆಳೆಸಲು ನಾನು ನಿರಂತರವಾಗಿ ನನ್ನನ್ನು ಹಾಗೂ ನನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲೇಬೇಕು. ಮಗುವಿನ ಬೆಳವಣಿಗೆಯಲ್ಲಿ ಶಿಕ್ಷಕಿಯ ಪಾತ್ರ ಅತ್ಯಂತ ಮಹತ್ವದ್ದಾಗಿದೆ, ಆದರೆ ಇದರೊಂದಿಗೆ ಪೋಷಕರ ಬೆಂಬಲವೂ ಅಷ್ಟೇ ಅವಶ್ಯಕವಾಗಿರುತ್ತದೆ.

ಪರಾಮರ್ಶನ:
ಕುಮಾರ ಕೃಷ್ಣ, 'ದಿ ಚೈಲ್ಡ್ಸ್ ಲ್ಯಾಂಗ್ವೇಜ್ ಆಂಡ್ ದಿ ಟೀಚರ್', ನ್ಯಾಷನಲ್ ಬುಕ್ ಟ್ರಸ್ಟ್, ದೆಹಲಿ.
ಎನ್‌ಸಿಇಆರ್‌ಟಿ, ರಿಮ್‌ಝಿಮ್, 3ನೇ ತರಗತಿ.



**ಕಮಲಾ ಭಂಡಾರಿ** ಕಳೆದ 26 ವರ್ಷಗಳಿಂದ ಅಧ್ಯಾಪನ ವೃತ್ತಿಯಲ್ಲಿದ್ದಾರೆ. ಖತಿಮಾದಲ್ಲಿರುವ ಆಚಾರ್ಯ ನರೇಂದ್ರ ದೇವ್ ಎಂಬ ಖಾಸಗಿ ಶಾಲೆಯಲ್ಲಿ ಅವರು ಸುಮಾರು ಹನ್ನೊಂದು ವರ್ಷಗಳ ಕಾಲ ಶಿಕ್ಷಕಿಯಾಗಿದ್ದರು. ಪ್ರಸ್ತುತ, 2005ರಿಂದ ಸರಸದಿಯಾ ನವೀನ್‌ನಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಸಹ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾರೆ. ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಹೊಂದಿರುವ ಅವರು ಬಿ.ಎಡ್ ಹಾಗೂ ಬಿಟಿಸಿ ಪದವಿಗಳನ್ನು ಪೂರೈಸಿದ್ದಾರೆ. ಮಕ್ಕಳ ಸಾಹಿತ್ಯ ಹಾಗೂ ಸಾಮಾನ್ಯ ಜ್ಞಾನದ ಪುಸ್ತಕಗಳ ಓದುವಿಕೆ ಅವರ ಹವ್ಯಾಸಗಳಲ್ಲೊಂದು. ಅವರನ್ನು bhandarikamla10@gmail.com ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ವಿನಯ ವಿಠ್ಠಲ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಓದಲು ಕಷ್ಟಪಡುವ ಮಕ್ಕಳು

ಕಮಲೇಶ್ ಚಂದ್ರ ಜೋಶಿ

ಶಾಲೆಗಳಲ್ಲಿ, ಇತರ ಎಲ್ಲಾ ವಿಷಯಗಳ ಅಧ್ಯಯನಕ್ಕೆ, ಓದುವುದರ ಕಲಿಕೆಯೇ ಅಡಿಪಾಯವೆಂದು ಪರಿಗಣಿಸಲಾಗುತ್ತದೆ. ಬಹಳಷ್ಟು ಬಾರಿ ಕೆಲವು ಮಕ್ಕಳು ಓದುವ ಕೌಶಲವನ್ನು ಪಡೆಯದೆಯೇ ಹಿರಿಯ ಪ್ರಾಥಮಿಕ ತರಗತಿಗಳ ಹಂತವನ್ನು ತಲುಪುತ್ತಾರೆ ಮತ್ತು ಇದರ ಪರಿಣಾಮವಾಗಿ ಅವರು ಕಲಿಕೆಯಲ್ಲಿ ಹಿಂದುಳಿಯುತ್ತಾರೆ. ನಮ್ಮ ಶಾಲಾ ಭೇಟಿಯ ಸಮಯಗಳಲ್ಲಿ ಮಕ್ಕಳು ಓದಲು ಅಸಮರ್ಥರಾಗಿರುವುದನ್ನು ಕಳವಳದಿಂದಲೇ ಶಿಕ್ಷಕರು ಹಂಚಿಕೊಳ್ಳುತ್ತಾರೆ. “ದಯವಿಟ್ಟು ನಾವು ಏನು ಮಾಡಬಹುದೆಂದು ಹೇಳಿ” ಎನ್ನುವುದು ಅವರ ಅಳಲು. ಮಕ್ಕಳು ವೇಗವಾಗಿ ಓದುವಂತೆ ಮಾಡುವ ಒಂದು ಕಾರ್ಯತಂತ್ರವನ್ನು ಶಿಕ್ಷಕರು ಬಯಸುತ್ತಾರೆ. ವಾಸ್ತವದಲ್ಲಿ ಇದಕ್ಕೆ ವ್ಯವಸ್ಥಿತವಾದ ಯೋಜನೆ, ಸಮಯ ಮತ್ತು ನಿರಂತರ ಪರಿಶ್ರಮದ ಅಗತ್ಯವಿದೆ.

ಈ ಹಿನ್ನೆಲೆಯಲ್ಲಿ, ಒಂದು ಹಿರಿಯ ಪ್ರಾಥಮಿಕ ಶಾಲೆಯ, ಓದುವುದಕ್ಕೆ ಕಷ್ಟಪಡುತ್ತಿದ್ದ ಮಕ್ಕಳ ಒಂದು ಗುಂಪಿನೊಡನೆ ಕಾರ್ಯನಿರ್ವಹಿಸುವ ಶಿಕ್ಷಕರಿಗೆ ಬೆಂಬಲ ನೀಡುವ ಅವಕಾಶ ಕಳೆದ ವರ್ಷ ನಮಗೆ ದೊರೆಯಿತು. ಈ ಗುಂಪಿನ ಬಹಳಷ್ಟು ಮಕ್ಕಳು ಆಗಲೇ ಆರು ಮತ್ತು ಏಳನೇ ತರಗತಿಗಳನ್ನು ತಲುಪಿದ್ದರೂ ಓದುವ ಮೂಲ ಕೌಶಲಗಳಿಲ್ಲದೆಯೇ ಕಷ್ಟಪಡುತ್ತಿದ್ದರು. ಅವರಲ್ಲಿ ಇಬ್ಬರು ಬಹಳ ಹಿಂದುಳಿದಿದ್ದರು. ಅವರಿಗೆ ಅಕ್ಷರಗಳನ್ನು ಮತ್ತು ಕಾಗುಣಿತಗಳನ್ನು ಗುರುತಿಸಲು ಕೂಡಾ ಆಗುತ್ತಿರಲಿಲ್ಲ. ಅವರಿಬ್ಬರಲ್ಲಿ, ಒಂದು ಹುಡುಗಿಗೆ ಮಾತನಾಡಲು ಬರುತ್ತಿರಲಿಲ್ಲ ಮತ್ತು ಆಕೆ ನಿಯಮಿತವಾಗಿ ಶಾಲೆಗೂ ಬರುತ್ತಿರಲಿಲ್ಲ. ಅವಳು ತನ್ನ ಪಠ್ಯಪುಸ್ತಕದಿಂದ ಒಂದು ಅಧ್ಯಾಯವನ್ನು ನಕಲು ಮಾಡುತ್ತಿದ್ದಳು ಮತ್ತು ಅದೇ ಕಲಿಕೆ ಅಥವಾ ಶಾಲೆಯಲ್ಲಿನ ಕೆಲಸ ಎಂದು ಭಾವಿಸಲಾಗಿತ್ತು. ಆದರೆ ಅವಳಿಗೆ ಪುಸ್ತಕದ ಯಾವುದೇ ಪದಗಳನ್ನು ಓದಲು ಸಾಧ್ಯವಾಗುತ್ತಿರಲಿಲ್ಲ ಮತ್ತು ಅಕ್ಷರ, ಕಾಗುಣಿತಗಳನ್ನು ಸಮರ್ಪಕವಾಗಿ ಗುರುತಿಸಲು ಬರುತ್ತಿರಲಿಲ್ಲ. ಮತ್ತೊಬ್ಬ ಹುಡುಗನಿಗೆ ಕೇವಲ ತನ್ನ ಮತ್ತು ತನ್ನ ಮನೆಯವರ ಹೆಸರುಗಳು ಮಾತ್ರ ಪರಿಚಿತವಾಗಿದ್ದವು. ಅವನಿಗೂ ಅಕ್ಷರ, ಕಾಗುಣಿತಗಳ ಪರಿಚಯವಿರಲಿಲ್ಲ. ಅವನಿಗೆ ಇಂದು ಏನನ್ನಾದರೂ ಕಲಿಸಿದ್ದರೆ–ಮಾರನೆಯ ದಿನ ಮರೆಯುವಂಥ ಮತ್ತೊಂದು ತೊಂದರೆಯನ್ನು ಆತ ಎದುರಿಸುತ್ತಿದ್ದ. ಈ ಬಗೆಯಲ್ಲಿ ಈ ಎರಡೂ ಮಕ್ಕಳು ಓದುವ ವಿಷಯದಲ್ಲಿ ನಿಜವಾಗಿಯೂ ಕಷ್ಟಪಡುತ್ತಿದ್ದರು. ಉಳಿದ ಮಕ್ಕಳು ಬೇರೆಬೇರೆಯ ಹಂತಗಳಲ್ಲಿದ್ದರು.

ನಾವು ಅವರೊಡನೆ ಕೆಲಸ ಮಾಡಲು ಪೂರ್ಣಪ್ರಮಾಣದ ಯೋಜನೆಯೊಂದನ್ನು ತಯಾರಿಸಿದೆವು. ಅಕ್ಷರ ಮತ್ತು ಕಾಗುಣಿತಗಳನ್ನು ಕಲಿಯುವುದರ ಜೊತೆಗೆ ಮಕ್ಕಳು, ಮಕ್ಕಳ ಸಾಹಿತ್ಯದ ಕೆಲವು ಸಣ್ಣ ಪುಸ್ತಕಗಳ ಓದಿಗೂ ತೆರೆದುಕೊಳ್ಳಬೇಕು ಎಂದು ನಿರ್ಧರಿಸಲಾಯಿತು. ಅವರಿಗೆ ನಾವು ಈ ಪುಸ್ತಕಗಳನ್ನು ಓದಿ ಹೇಳುವುದು ಮತ್ತು ಓದುವಾಗಲೇ ಅದರ ಬಗ್ಗೆ ಚರ್ಚೆಯನ್ನು ನಡೆಸುವುದೆಂದು ನಿರ್ಧರಿಸಲಾಯಿತು. ಅಕ್ಷರಗಳು, ಕಾಗುಣಿತ ಮತ್ತು ಪದಗಳನ್ನು ಗುರುತಿಸುವ ಅಭ್ಯಾಸಕ್ಕಾಗಿಯೂ ಈ ಪುಸ್ತಕಗಳನ್ನು ಉಪಯೋಗಿಸಲಾಯಿತು. ಎನ್‌ಸಿಇಆರ್‌ಟಿ ಅವರು ಪ್ರಕಟಿಸಿರುವ ಬರ್ಕಾ ಸರಣಿಯ ಪುಸ್ತಕಗಳು ಮತ್ತು ಇಂತಹ ಇತರ ಮಕ್ಕಳ ಪುಸ್ತಕಗಳು ಮಕ್ಕಳ ದೈನಂದಿನ ಅನುಭವಕ್ಕೆ ಹತ್ತಿರವಾಗಿರುವುದರಿಂದ ಸಮಂಜಸವೆಂದು ಕಂಡುಕೊಂಡೆವು. ಈ ಪುಸ್ತಕಗಳನ್ನು ಮಕ್ಕಳಿಗೆ ಜೋರಾಗಿ ಓದಿ ಹೇಳಲಾಯಿತು ಮತ್ತು ಆ ಬಳಿಕ ಪುಸ್ತಕದ ಬಗ್ಗೆ ಚರ್ಚೆಯನ್ನು ನಡೆಸಲಾಯಿತು. ಈ ಸಂವಾದದಲ್ಲಿ ಮಕ್ಕಳು ತಮ್ಮ ದೈನಂದಿನ ಅನುಭವಗಳನ್ನು ಹಂಚಿಕೊಂಡರು. ಕಥೆಗಳನ್ನು ಮತ್ತು ಪದ್ಯಗಳನ್ನು ಕರಿಹಲಗೆಯ ಮೇಲೆ ಬರೆಯಲಾಯಿತು ಮತ್ತು ಮಕ್ಕಳಿಗೆ ಅವನ್ನು ಓದಲು ಹೇಳಲಾಯಿತು. ಇದನ್ನು ಪದ ಮತ್ತು ಕಾಗುಣಿತಗಳನ್ನು ಗುರುತಿಸಲು ಬಳಸಲಾಯಿತು. ಅವರು ಗುರುತಿಸಲು ಸಾಧ್ಯವಾಗುವಂಥ ಪದಗಳಿಂದ ಆರಂಭಿಸಿ ಅದೇ ರೀತಿಯ, ಉದಾಹರಣೆಗೆ ರೋಟಿ ಪದದಿಂದ ಧೋಟಿ ಮತ್ತು ಮೋಟಿ ಪದಗಳಂತೆ ಸಮಾನಾಂತರ ಪದಗಳನ್ನು ರಚಿಸುವಂತೆ






ಹೇಳಲಾಯಿತು. ಜೊತೆಗೆ ಅವರ ಅನುಭವಗಳನ್ನು ಬರೆಯಲು ಮತ್ತು ಅವರಿಗೆ ಇಷ್ಟವಾದುದನ್ನು ಆಲೋಚಿಸಿ ವಾಕ್ಯಗಳಲ್ಲಿ ಬರೆಯಲು ಹೇಳಲಾಯಿತು.

ಈ ಪ್ರಕ್ರಿಯೆಯಲ್ಲಿ ಮಕ್ಕಳು ಅಕ್ಷರ, ಕಾಗುಣಿತಗಳನ್ನು ಕಲಿಯಲು ತುಸು ಹೆಚ್ಚು ಸಮಯ ತೆಗೆದುಕೊಂಡರೂ ಈಗ ಓದಲು ಪ್ರಾರಂಭಿಸಿದರು. ಅವರೀಗ ಮುಂದಿನ ಹಂತವನ್ನು ತಲುಪಿದ್ದಾರೆ. ಇನ್ನು ಸ್ವಲ್ಪ ದಿನಗಳಲ್ಲಿ ಸರಾಗವಾಗಿ ಓದಲು ಕಲಿಯುತ್ತಾರೆ ಎಂಬ ಭರವಸೆ ಮೂಡಿತು. ಇದೇ ರೀತಿ ಈ ಗುಂಪಿನ ಇತರ ಮಕ್ಕಳೂ, ಯಾರು ತಡೆದು ತಡೆದು ಓದುತ್ತಾರೋ ಅವರೂ ಕೂಡ ಮಕ್ಕಳ ಪುಸ್ತಕಗಳ ಸಹಾಯದಿಂದ ಚೆನ್ನಾಗಿ ಓದುವ ವೇಗವನ್ನು ಸುಧಾರಿಸುತ್ತಿದ್ದಾರೆ. ಜೊತೆಗೆ ಅವರು ಬರೆಯುವುದನ್ನೂ ಅಭ್ಯಾಸ ಮಾಡುತ್ತಿದ್ದಾರೆ. ಈಗ ಈ ಎಲ್ಲಾ ಮಕ್ಕಳು ತರಗತಿಯ ಮುಖ್ಯವಾಹಿನಿಯೊಂದಿಗೆ ಸೇರಬಲ್ಲರು ಮತ್ತು ಇತರ ವಿಷಯಗಳನ್ನು ಕಲಿಯಲು ಕೂಡ ಸಮರ್ಥರಾಗುತ್ತಾರೆ ಎಂದು ತೋರುತ್ತದೆ.

ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ, ಪ್ರತಿ ಶಾಲೆಯಲ್ಲಿ ಓದಲು ಬರೆಯಲು ಕಷ್ಟಪಡುವ ಇಂತಹ ಹಲವಾರು ಮಕ್ಕಳಿದ್ದು, ಅದರಿಂದಾಗಿಯೇ ವ್ಯವಸ್ಥೆಯ ಮುಖ್ಯವಾಹಿನಿಯಿಂದ ಅವರು ಹೊರಗುಳಿಯುತ್ತಾರೆ ಎಂಬುದು ಓದಲು ಕಷ್ಟಪಡುತ್ತಿರುವ ಮಕ್ಕಳೊಡನೆ ಕೆಲಸ ಮಾಡುತ್ತಾ ನಮಗೆ ಅರಿವಾಯಿತು. ಬಹಳಷ್ಟು ಶಾಲೆಗಳಲ್ಲಿ ಶಿಕ್ಷಕರು ಯಾವ ಮಕ್ಕಳು ಓದಲು ಕಷ್ಟಪಡುತ್ತಾರೆ ಎಂದು ಕಂಡುಹಿಡಿದರೂ, ಅದಕ್ಕೆ ಅಗತ್ಯ ಬೆಂಬಲ ನೀಡುವ ವ್ಯವಸ್ಥಿತ ಮಧ್ಯಪ್ರವೇಶ ಯೋಜನೆಗಳನ್ನು (Systematic intervention plan) ರೂಪಿಸಲು ಸಾಧ್ಯವಾಗುತ್ತಿಲ್ಲ. ಹಾಗಾಗಿಯೇ ಸಮಸ್ಯೆ ಮುಂದುವರೆಯುತ್ತದೆ. ಇಂತಹ ಮಕ್ಕಳೊಡನೆ ಕೆಲಸ ಮಾಡಲು ನಾವು ವ್ಯವಸ್ಥಿತವಾದ ಒಂದು ಯೋಜನೆಯನ್ನು ರೂಪಿಸಬೇಕಾದ ಅಗತ್ಯವಿದೆ. ಇದಕ್ಕೆ ಮಕ್ಕಳು ತಮ್ಮ ಬದುಕಿನ ಅನುಭವಗಳೊಡನೆ ಸಮೀಕರಿಸಿಕೊಳ್ಳಲು ಸಾಧ್ಯವಾಗುವಂಥ ಸೂಕ್ತ ಸಂಪನ್ಮೂಲ ಪರಿಕರಗಳ ಅಗತ್ಯವಿದೆ. ಪದಗಳು ಮತ್ತು ಅಕ್ಷರಗಳನ್ನು ಗುರುತಿಸಲು ಕೂಡ ಈ ರೀತಿಯ ಪರಿಕರಗಳನ್ನು ಉಪಯೋಗಿಸ-ಬಹುದು. ಈ ಮಧ್ಯಪ್ರವೇಶ ಯೋಜನೆಯಲ್ಲಿ ಮಕ್ಕಳಿಗೆ ಅರ್ಥಪೂರ್ಣವಾದ ಓದುವ ಅನುಭವವನ್ನು ನೀಡುವುದು ಅತ್ಯಗತ್ಯವಾಗಿದೆ. ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರೆ ಎಲ್ಲ ಮಕ್ಕಳೂ ಓದಲು ಶಕ್ತರಾಗುತ್ತಾರೆ ಮತ್ತು ಜ್ಞಾನಪ್ರಪಂಚದಲ್ಲಿ ಭಾಗವಹಿಸಲು ಸಮರ್ಥರಾಗುತ್ತಾರೆ.



**ಕಮಲೇಶ್ ಚಂದ್ರ ಜೋಶಿ** ಅವರು ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಸಕ್ರಿಯರಾಗಿದ್ದಾರೆ. ಪ್ರಾಥಮಿಕ ಸಾಕ್ಷರತೆ, ಶಿಕ್ಷಕ ಶಿಕ್ಷಣ ಮತ್ತು ಮಕ್ಕಳ ಸಾಹಿತ್ಯದಂಥ ಶಿಕ್ಷಣ ಸಂಬಂಧಿ ಕ್ಷೇತ್ರದಲ್ಲಿ ಆಸಕ್ತರಾಗಿದ್ದಾರೆ. ಪ್ರಸ್ತುತ ಅವರು ಉತ್ತರಾಖಂಡದ ಉಧಾಮ್ ಸಿಂಗ್ ನಗರದ ಅಜೀಂ ಪ್ರೇಮ್‌ಜಿ ಜಿಲ್ಲಾ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರನ್ನು kamlesh@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಜನಾರ್ದನ ಚನ್ನಗಿರಿ** । ಪರಿಶೀಲನೆ: **ನಾಗಮಣಿ ಎಸ್ ಎನ್**

> ಒಂದು ಮಗುವು ಶಾಲೆಯ ಹೊಸ್ತಿಲನ್ನು ದಾಟಿದಾಗ, ಕೇವಲ ಪಾಟಿಚೀಲ, ಸ್ಲೇಟ್-ಬಳಪ, ಪುಸ್ತಕ, ನೋಟ್ ಪುಸ್ತಕ ಇವುಗಳನ್ನಷ್ಟೇ ಶಾಲೆಗೆ ಹೊತ್ತು ತರುವುದಿಲ್ಲ, ಜೊತೆಗೆ ಅದರ ಸಂಪೂರ್ಣ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಅದರ ತುಂಬಿದ ಇಲ್ಲವೇ ಖಾಲಿ ಹೊಟ್ಟೆ, ಅದರ ಕುತೂಹಲಗಳು, ಅದರ ಆತಂಕಗಳು, ಹಿಂಜರಿಕೆಗಳು, ತಾಯ್ನುಡಿ ಮತ್ತು ಇತರೆಲ್ಲ ಮುಖಗಳನ್ನೂ ಹೊತ್ತು ತರುತ್ತದೆ ಮತ್ತು ಈ ಮಗು ಶಿಕ್ಷಣ ವ್ಯವಸ್ಥೆಗೆ ಯಾವುದೇ ರೀತಿಯಲ್ಲಿ ತೆರೆದುಕೊಂಡಿರದ ಅಥವಾ ಸಂಬಂಧ ಹೊಂದಿರದ ಕುಟುಂಬದಿಂದ ಬಂದರೆ ಶಾಲೆ ಮತ್ತು ಶಿಕ್ಷಕರು ಅಂತಹ ಮಗುವಿನೊಡನೆ ಹೆಚ್ಚಿನ ನಮ್ಯತೆಯನ್ನು ತೋರಬೇಕಾಗುತ್ತದೆ.
>
> ಅನಂತ್ ಗಂಗೋಲಿ, ಎಲ್ಲರಿಗೂ ಶಿಕ್ಷಣ, ಪು. 7

# ವಿರುದ್ಧಾರ್ಥಕ ಪದಗಳ ಬೋಧನೆ | ನನ್ನ ತರಗತಿಯ ಕಾರ್ಯತಂತ್ರ

ಮೊಂಪಾ ಘೋಷಾಲ್

ನಾನು ಮೂರನೇ ತರಗತಿಯಲ್ಲಿದ್ದಾಗ ಶಿಕ್ಷಕರು ನಮಗೆ ವಿರುದ್ಧಾರ್ಥಕ ಪದಗಳ ಪಟ್ಟಿಯನ್ನು ಕೊಟ್ಟು ಅವುಗಳ ಅರ್ಥಗಳನ್ನು ತಿಳಿಸಿ, ನೆನಪಿಟ್ಟುಕೊಳ್ಳುವಂತೆ ಹೇಳುತ್ತಿದ್ದುದು ನೆನಪಿದೆ. ಮರುದಿನ ವಿದ್ಯಾರ್ಥಿಗಳು ಅವುಗಳನ್ನು ಕಲಿತಿದ್ದಾರೋ ಇಲ್ಲವೋ ಎಂದು ಅವರು ಪ್ರಶ್ನೆ ಕೇಳುತ್ತಿದ್ದರು. ಯಾವುದೇ ಉದಾಹರಣೆ ಅಥವಾ ಚಿತ್ರ ಮನಸ್ಸಿನಲ್ಲಿ ಇಲ್ಲದಿದ್ದರೆ ಅದನ್ನು ಕಲಿಯುವುದು ಎಷ್ಟು ಕಷ್ಟವಾಗುತ್ತಿತ್ತು ಎಂಬುದನ್ನು ನಾನು ನೆನಪಿಸಿಕೊಳ್ಳುತ್ತೇನೆ. ಹಾಗಾಗಿ ಈ ವಿರುದ್ಧಾರ್ಥ ಪದಗಳನ್ನು ಕಲಿಯುವ ಸಂದರ್ಭದಲ್ಲಿ ನನ್ನ ತರಗತಿಯಲ್ಲಿ ಆದ ಒಂದು ಅನುಭವವನ್ನು ನಿಮ್ಮೊಂದಿಗೆ ಹಂಚಿಕೊಳ್ಳಲು ಬಯಸುತ್ತೇನೆ. ಈ ಹಿಂದೆ ಮಾತೃಭಾಷೆಯನ್ನು ಹೊರತುಪಡಿಸಿ ಇನ್ನೊಂದು ಭಾಷೆಯನ್ನು ಕಲಿಯುವ ಅವಕಾಶ ಮಕ್ಕಳಿಗೆ ಸಿಗದೇ ಹೋಗಿದ್ದರೂ ಕೂಡ, ಅದನ್ನು ಕಲಿಯಲು ಸಾಧ್ಯವಿದೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಹೊಸದನ್ನು ಕಲಿಸಲು ಶಿಕ್ಷಕರಾದ ನಾವು ಈಗಾಗಲೇ ನಮ್ಮಲ್ಲಿರುವ ಜ್ಞಾನವನ್ನು ಬಳಸಿಕೊಂಡರೆ, ಪ್ರತಿಯೊಂದು ಮಗುವೂ ಕೂಡ ಕಲಿಯುವ ಸಾಮರ್ಥ್ಯ ಹೊಂದಿರುತ್ತದೆ.

ಉದಾಹರಣೆಗೆ, ನಾನು ಎರಡನೇ ತರಗತಿಗೆ ವಿರುದ್ಧಾರ್ಥಕ (Opposites) ಪದಗಳನ್ನು ಹೇಳಿಕೊಡುತ್ತಿದ್ದೆ. 'ವಿರುದ್ಧಾರ್ಥಕ ಪದಗಳು ಎಂದರೆ ಏನು?' ಎಂದು ಕೇಳುವ ಮೂಲಕ ನನ್ನ ತರಗತಿಯನ್ನು ಆರಂಭಿಸಿದೆ. ಇದರ ಅರ್ಥ ನಮಗೆ ತಿಳಿದಿಲ್ಲ ಎಂದು ವಿದ್ಯಾರ್ಥಿಗಳು ಹೇಳಿದರು. ನಾನು ಅವರಿಗೆ ಆನೆ ಮತ್ತು ಇಲಿಯ ಚಿತ್ರಗಳನ್ನು ತೋರಿಸಿ ದೊಡ್ಡದು ಹಾಗೂ ಚಿಕ್ಕದು ಎಂಬುದಕ್ಕೆ ಉದಾಹರಣೆ ಕೊಟ್ಟೆ. 'ಇವೆರಡೂ ಗಾತ್ರದಲ್ಲಿ ಒಂದೇ ರೀತಿಯಿವೆಯಾ?' ಎಂದು ನಾನು ಅವರಿಗೆ ಕೇಳಿದೆ. 'ಇಲ್ಲ, ಆನೆ ದೊಡ್ಡದು ಮತ್ತು ಇಲಿ ಚಿಕ್ಕದು' ಎಂದರು.

"ಹೌದು, ಆನೆ ದೊಡ್ಡದು, ಇಲಿ ಚಿಕ್ಕದು. ಈ ದೊಡ್ಡದು ಮತ್ತು ಚಿಕ್ಕದಕ್ಕೆ ಇನ್ನೂ ಕೆಲವು ಉದಾಹರಣೆಗಳನ್ನು ಕೊಡುವಿರಾ?" ಎಂದು ನಾನು ಮಕ್ಕಳನ್ನು ಕೇಳಿದೆ. ಅವರು ಅದಕ್ಕೆ ಹಸು-ನಾಯಿ, ನಾಯಿ-ಬೆಕ್ಕು, ಕುದುರೆ-ನಾಯಿ ಇತ್ಯಾದಿ ಉದಾಹರಣೆಗಳನ್ನು ಕೊಟ್ಟರು.

ಆ ಬಳಿಕ ನಾನು ಒಂದು ತೆಂಗಿನ ಮರ ಮತ್ತು ಗುಲಾಬಿ ಹೂವಿನ ಗಿಡದ ಚಿತ್ರಗಳನ್ನು ತೋರಿಸಿ ಎತ್ತರ ಮತ್ತು ಗಿಡ್ಡ ಪದಗಳಿಗೆ ವಿವರಣೆಗಳನ್ನು ನೀಡಿದೆ ಮತ್ತು ಅವರ ಅನುಭವದಿಂದ ಇನ್ನಷ್ಟು ಇಂಥ ಉದಾಹರಣೆಗಳನ್ನು ಕೊಡುವಂತೆ ಅವರಿಗೆ ಹೇಳಿದೆ. ಆಗ ಮಕ್ಕಳು ಎತ್ತರ ಹಾಗೂ ಗಿಡ್ಡವಿರುವ ತಮ್ಮ ಸಹಪಾಠಿಗಳು ಮತ್ತು ಶಿಕ್ಷಕರನ್ನು ಗುರುತಿಸುವ ಮೂಲಕ ಎತ್ತರ ಮತ್ತು ಗಿಡ್ಡ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳಲು ಶುರು ಮಾಡಿದರು.

ಮರುದಿನ ನಾನು ತರಗತಿಯನ್ನು ಪ್ರವೇಶಿಸಿದಾಗ, ದೊಡ್ಡದು ಮತ್ತು ಚಿಕ್ಕದು, ಉದ್ದ ಮತ್ತು ಗಿಡ್ಡ ಪದಗಳಿಗೆ ಅಪ್ಪ-ಅಮ್ಮ, ಟೀಚರ್ ಮತ್ತು ನಾನು ಹಾಗೂ ದೊಡ್ಡದು ಮತ್ತು ಸಣ್ಣದಕ್ಕೆ ಕೊಠಡಿ ಮತ್ತು ಗೊಂಬೆ, ಶಾಲಾ ಕಟ್ಟಡ ಮತ್ತು ಗೊಂಬೆ-ಹೀಗೆ ಅನೇಕ ಉದಾಹರಣೆಗಳನ್ನು ಕೊಡಲಾರಂಭಿಸಿದರು. ನಿನ್ನೆ ತರಗತಿಯಲ್ಲಿ ನಾನು ಹೇಳಿದ ಪದಗಳ ಬಗೆಗೆ ಮಕ್ಕಳು ಇನ್ನೂ ಹೆಚ್ಚಿನ ಉದಾಹರಣೆಗಳನ್ನು ಯೋಚಿಸಿದ್ದಾರೆ ಎಂಬುದು ನನಗೆ ಅರಿವಾಯಿತು. ನಾವು ಗಟ್ಟಿ ಮತ್ತು ಮೃದು (ಮರ ಮತ್ತು ಹತ್ತಿ) ಪದಗಳೊಂದಿಗೆ ಇದನ್ನು ಮುಂದುವರಿಸಿದೆವು. ಮಕ್ಕಳು ಹತ್ತಿಯನ್ನು ಮುಟ್ಟಿ ಇದು ಮೃದು ಮತ್ತು ಮರದ ತುಂಡನ್ನು ಸ್ಪರ್ಶಿಸಿ ಇದು ಗಟ್ಟಿ ಎಂದರು. ಆ ಬಳಿಕ ಮಕ್ಕಳು ಚಾಕ್ ಮತ್ತು ಡಸ್ಟರ್ ಸೇರಿದಂತೆ ಅನೇಕ ಉದಾಹರಣೆಗಳನ್ನು ನೀಡಿದರು. 'ಡಸ್ಟರ್ ಗಟ್ಟಿ, ಚಾಕ್ ಮೃದು' ಎಂಬುದಾಗಿ ಅವರು ವಿವರಿಸಿದರು.

ನಾವು ಈ ಚಟುವಟಿಕೆಗಳನ್ನು ಸಣ್ಣಸಣ್ಣ ಗುಂಪುಗಳಲ್ಲಿ ಮುಂದುವರಿಸಿದೆವು. ಇದರಿಂದಾಗಿ ತರಗತಿಯಲ್ಲಿ ಸಾಮಾನ್ಯವಾಗಿ ಸಕ್ರಿಯವಾಗಿರದ ಮಕ್ಕಳೂ ಕೂಡ ಈ ಚಟುವಟಿಕೆಯಲ್ಲಿ ಆಸಕ್ತರಾಗಿ ತಮಗೆ ಕೊಟ್ಟ ಶೀಟ್‌ನಲ್ಲಿ ಬರೆಯಲು ಶುರು ಮಾಡಿದರು ಮತ್ತು ಉತ್ತಮ ಉದಾಹರಣೆಗಳನ್ನು ಕೊಡಲು ಸಾಕಷ್ಟು ಪ್ರಯತ್ನಿಸಿದರು. ಅವರಿಂದ ಅತ್ಯುತ್ತಮ ಉದಾಹರಣೆಗಳು ಬಂದವು. ಇಂತಹ ಒಂದು ಪ್ರಯೋಗ ಮಕ್ಕಳು ಇಡೀ ಪರಿಕಲ್ಪನೆಯನ್ನು ದೃಢವಾಗಿ ಅರ್ಥ ಮಾಡಿಕೊಳ್ಳುವಂತೆ ಹಾಗೂ ಅದು ಅವರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುವಂತೆ ಮಾಡಿತು.

ಈಗ ಮೂರನೇ ತರಗತಿಯಲ್ಲಿರುವ ಈ ಮಕ್ಕಳು ವಿರುದ್ಧಾರ್ಥಕ ಪದಗಳನ್ನು ಈಗಲೂ ನೆನಪಿನಲ್ಲಿಟ್ಟುಕೊಂಡಿದ್ದಾರೆ ಮತ್ತು ಯಾವಾಗ ಕೇಳಿದರೂ ಯೋಚನೆ ಮಾಡದೇ ತಕ್ಷಣ ಸರಿಯಾದ ಉತ್ತರವನ್ನೇ ಹೇಳುತ್ತಾರೆ.

ಹಾಗಾಗಿ, ಯಾವುದೇ ವಿಷಯವನ್ನು ನಾವು ನಿರ್ವಹಿಸುವ ಸಂದರ್ಭದಲ್ಲಿ, ಅದರಲ್ಲೂ ವಿಶೇಷವಾಗಿ ಪರಿಕಲ್ಪನಾತ್ಮಕ ತಿಳುವಳಿಕೆಗೆ ಸಂಬಂಧಿಸಿದ ವಿಷಯಗಳಲ್ಲಿ ನಾವು ವಿದ್ಯಾರ್ಥಿಗಳನ್ನು ತೊಡಗಿಸಿಕೊಳ್ಳುವ ಕೆಲಸವನ್ನು ಮಾಡಬೇಕಾಗುತ್ತದೆ. ಇದರಿಂದ ಅವರು ವಿಷಯದ ಬಗೆಗೆ ತೀವ್ರವಾದ ಆಸಕ್ತಿಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ ಮತ್ತು ಕಂಠಪಾಠದ (Mugging) ದಾರಿಯನ್ನು ಬಿಟ್ಟು ಆಳವಾಗಿ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುತ್ತಾರೆ ಎಂಬುದು ನನ್ನ ಭಾವನೆ.



**ಪೊಂಪಾ** ಅವರು 2016ರ ಏಪ್ರಿಲ್‌ನಿಂದ ಧಮ್‌ತರಿಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾರೆ. ಅವರು ಗಣಿತದಲ್ಲಿ ತಮ್ಮ ಪದವಿಯನ್ನು ಪೂರ್ಣಗೊಳಿಸಿದ್ದು, ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಎ. ಮತ್ತು ರಾಯ್‌ಪುರದ ರವಿಶಂಕರ್ ವಿಶ್ವವಿದ್ಯಾಲಯದಿಂದ ಬಿಎಡ್ ಪೂರ್ಣಗೊಳಿಸಿದ್ದಾರೆ. ಇದರ ಜೊತೆಗೆ ಅವರು ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಓಪನ್ ಸ್ಕೂಲಿಂಗ್‌ನಿಂದ D.El.Ed ಪಡೆದಿದ್ದಾರೆ. 1997ರಲ್ಲಿ ಖಾಸಗಿ ಶಾಲೆಯಲ್ಲಿ ಶಿಕ್ಷಕ ವೃತ್ತಿಯನ್ನು ಆರಂಭಿಸಿದ ಅವರು ಗಣಿತ, ವಿಜ್ಞಾನ ಮತ್ತು ಇಂಗ್ಲಿಷ್ ಶಿಕ್ಷಕಿಯಾಗಿ ಅನೇಕ ಶಾಲೆಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಅವರಿಗೆ ಹೆಚ್ಚಿನ ಆಸಕ್ತಿ. ಅವರನ್ನು ಈ–ಮೇಲ್ ಮೂಲಕ ಸಂಪರ್ಕಿಸಬಹುದು: pompa.ghoshal@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ತರಗತಿಯಲ್ಲಿ ನನ್ನ ಪ್ರಯೋಗಗಳು

ಪೂರ್ವಾ ಅಗರ್‌ವಾಲ್

ಶಾಲಾ ವ್ಯವಸ್ಥೆಯಲ್ಲಿ ಬಹಳಷ್ಟು ಸಲ ಪ್ರಕ್ರಿಯೆ (Process) ಗಿಂತಲೂ ಹೆಚ್ಚು ಉತ್ಪನ್ನ (Product)ಕ್ಕೆ ಮಾನ್ಯತೆ ಸಿಗುತ್ತದೆ. ಆಗ ಅಂತಿಮ ಪರೀಕ್ಷಾ ಪತ್ರಿಕೆಯು ಪ್ರಗತಿ (Progress)ಯ ದಾಖಲೆಯಾಗುವುದರ ಬದಲಿಗೆ ಸಾಮರ್ಥ್ಯ (Capability)ದ ದಾಖಲೆಯಾಗುತ್ತದೆ. ಕೆಲವೊಮ್ಮೆ ಸಾಧ್ಯತೆಗಳನ್ನು ತಪ್ಪಾಗಿ ಪ್ರಭಾವಿಸಬಹುದು ಮತ್ತು ಮಂಕಾಗಿಸಬಹುದು. ಒಂದು ಮಗು ಸರಿಯಾಗಿ ಓದದಿದ್ದರೆ, ನಾವು ಮಗುವಿಗೆ ಓದಲು ಆಗುತ್ತಿಲ್ಲ ಎಂದು ಹೇಳುತ್ತೇವೆ. ಸಾಮರ್ಥ್ಯದ ಕುರಿತ ಪೋಷಕರು ಮತ್ತು ಶಿಕ್ಷಕರ ನಂಬಿಕೆಯನ್ನು ಆಧರಿಸಿ ಬಹುತೇಕ ಬಾರಿ ಈ ರೀತಿಯ ತಪ್ಪು ನಿರ್ಧಾರವನ್ನು ತಾಳಲಾಗುತ್ತದೆ. ಕೆಲವು ಮಕ್ಕಳಿಗೆ ಓದಲು ಬರುವುದಿಲ್ಲ ಎಂಬ ನಂಬಿಕೆ ಇರಬಹುದು ಅಥವಾ ಕೆಲವು ಮಕ್ಕಳಿಗೆ ಒಂದು ನಿರ್ದಿಷ್ಟ ವಿಷಯವನ್ನು ನಿರ್ದಿಷ್ಟ ರೀತಿಯಲ್ಲಿ ಕಲಿಯಲು ಆಗದಿರಬಹುದು ಅಥವಾ ಕೆಲವು ಮಕ್ಕಳಿಗೆ ಕಲಿಯಲು ಇಷ್ಟ ಇರದೇ ಇರಬಹುದು ಎಂಬ ರೀತಿಯ ನಂಬಿಕೆಗಳನ್ನು ಅವರು ಹೊಂದಿರಬಹುದು.

ಅಂತಹ ಯಾವುದೇ ನಂಬಿಕೆಗಳಿಗೆ ನಾನು ಜೋತುಬಿದ್ದಿಲ್ಲ. ಕನಿಷ್ಠ ಆ ನಂಬಿಕೆಗಳೂ ನನ್ನಲ್ಲಿಲ್ಲ. ನಾನು ಅಜೀಂ ಪ್ರೇಮ್‌ಜಿ ವಿಶ್ವ-ವಿದ್ಯಾಲಯದಲ್ಲಿ ಶಿಕ್ಷಣ ವಿಷಯದಲ್ಲಿ ಎಂಎ ಓದುತ್ತಿದ್ದಾಗ ಹೊಂದಿದ್ದ ಮಕ್ಕಳ ಕಲಿಕಾ ಅಸಾಮರ್ಥ್ಯದ ಕುರಿತ ನಂಬಿಕೆಗಳನ್ನು ನಾನು ನಿರಂತರವಾಗಿ ಪ್ರಶ್ನಿಸಿಕೊಂಡೇ ಬಂದಿದ್ದೇನೆ. ಎರಡು ವರ್ಷಗಳ ಕಾಲ ಮಕ್ಕಳ ಬೆಳವಣಿಗೆಯ ಬಗ್ಗೆ-ಅದರಲ್ಲಿಯೂ ಮಕ್ಕಳು ಏಕೆ ಕಲಿಯುವುದಿಲ್ಲ ಅಥವಾ ಕಲಿಯಲು ಹಿಂಜರಿಯುತ್ತಾರೆ ಎಂಬ ಬಗೆಗೆ ಇರುವ ವಿವಿಧ ದೃಷ್ಟಿಕೋನಗಳನ್ನು ನಾನು ಕಲಿತೆ. ಇತ್ತೀಚೆಗಂತೂ ಮಕ್ಕಳು ಏಕೆ ಕಲಿಯುವುದಿಲ್ಲ ಅಥವಾ ಕಲಿಯಲು ವಿಫಲರಾಗುತ್ತಾರೆ ಎಂಬುದರ ಬಗ್ಗೆಯೇ ಹೆಚ್ಚಿನ ಗಮನ ನೀಡಲಾಗುತ್ತಿದೆ. ಆದರೆ ಮಕ್ಕಳಿಗೆ ಕಲಿಯಲು ಆಗುವುದಿಲ್ಲ ಎಂಬುದನ್ನು ಮಾತ್ರ ನಾನು ನಂಬುವುದಿಲ್ಲ.

ಆದರೂ, ಪ್ರತಿಯೊಬ್ಬ ಮಕ್ಕಳು ಕಲಿಯಬಲ್ಲರು ಎಂಬ ದೃಢವಾದ ನಂಬಿಕೆ ಹೊಂದಿದ ಸದುದ್ದೇಶವುಳ್ಳ ಶಿಕ್ಷಣ ವ್ಯವಸ್ಥೆಯ ಭಾಗಿದಾರರಿಗೂ ಕೂಡಾ ಕೆಲವೊಮ್ಮೆ ಈ ನಂಬಿಕೆಯನ್ನು ಅನುಷ್ಠಾನಗೊಳಿಸಲು ಕಷ್ಟವಾಗುವುದುಂಟು. ಕೆಲವೊಮ್ಮೆ ಯಾವುದನ್ನು ಮಾಡುವುದು 'ಸಾಧ್ಯವಿಲ್ಲ'ವೋ ಅದನ್ನು 'ಸಾಧ್ಯ' ಮಾಡಲು ನಮ್ಮಲ್ಲಿ ಅಗತ್ಯ ಸಾಧನಗಳು ಇರುವುದಿಲ್ಲ. ಕೆಲವೊಮ್ಮೆ ಮಕ್ಕಳ ಪರಿಸ್ಥಿತಿಯ ಬಗ್ಗೆ ನಮ್ಮಲ್ಲಿ ಸಾಕಷ್ಟು ಒಳನೋಟಗಳು ಇರುವುದಿಲ್ಲ. ಆದ್ದರಿಂದ ನಾವು ಮಕ್ಕಳ ಕಲಿಕೆಗೆ ಸಂಬಂಧಪಟ್ಟ ಸಮಸ್ಯೆಯ ತಳಮಟ್ಟಕ್ಕೆ ಹೋಗಿ ಅದನ್ನು ಪರಿಹರಿಸಲು ಸಾಧ್ಯವಾಗದೇ ಇರಬಹುದು. ಹೀಗಾಗಿ ಮಕ್ಕಳಿಗೆ ಹೇಳಿಕೊಟ್ಟ ವಿಷಯವನ್ನು ಕಲಿಯಲು ಬರುವುದಿಲ್ಲ ಎಂದು ತಪ್ಪು ನಿರ್ಧಾರಕ್ಕೆ ಬಂದುಬಿಡುತ್ತೇವೆ. ಕಲಿಕೆಗೆ ಸಂಬಂಧಪಟ್ಟಂತೆ ಮಕ್ಕಳೊಡನೆ ಶಾಲೆಯ ಒಳಗೆ ಮತ್ತು ಹೊರಗೆ ನಾನು ಅನೇಕ ಪದ್ಧತಿಗಳನ್ನು ಅಳವಡಿಸಿದ್ದೇನೆ, ಅವುಗಳಲ್ಲಿ ಕೆಲವನ್ನು ತರಗತಿಯಲ್ಲಿಯೂ ಅಳವಡಿಸಿಕೊಂಡಿದ್ದೇನೆ.

ಈ ಲೇಖನದಲ್ಲಿ ಅಂತಹ ಕೆಲವು ಪದ್ಧತಿಗಳ ಬಗ್ಗೆ ತಿಳಿಸಲಿದ್ದೇನೆ. ಪ್ರತಿ ಮಗುವನ್ನು ಕಲಿಕೆಯ ಪ್ರಕ್ರಿಯೆಯಲ್ಲಿ ಒಳಗೊಡಿಸಿಕೊಳ್ಳುವುದು ಮತ್ತು ಪ್ರತಿ ಮಗುವೂ ಕಲಿಯುವ ಸಾಮರ್ಥ್ಯ ಹೊಂದಿದೆ ಎಂಬುದನ್ನು ಖಾತರಿಪಡಿಸಿ-ಕೊಳ್ಳುವುದೇ ಇದರ ಉದ್ದೇಶ.

**ಗುಂಪು ರಚನೆ ಮತ್ತು ವಿಭಿನ್ನ ಕಲಿಕೆ**

ವಿಭಿನ್ನ ಹಾಗೂ ಕ್ರಿಯಾಶೀಲ ಮಾರ್ಗಗಳ ಮೂಲಕ ಮಕ್ಕಳ ಗುಂಪು ರಚಿಸಿ ಕಲಿಸುವುದು, 'ಎಲ್ಲರಿಗೂ ಒಂದೇ ಶೈಲಿ' ಎಂಬ ಸಿದ್ಧ-ಸೂತ್ರಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ. ಎಲ್ಲರಿಗೂ ಒಂದು ಶೈಲಿಯನ್ನು ಪಾಲಿಸುವುದರಿಂದ ಯಾವುದೋ ಮಗುವಿಗೆ ನಷ್ಟವಾದೀತು. ಗುಂಪಿನಲ್ಲಿ ಕೆಲಸ ಕೊಡುವಾಗ ಪ್ರತಿ ಗುಂಪೂ ಬೇರೆಬೇರೆ ರೀತಿಯಲ್ಲಿ ತೊಡಗಿಸಿಕೊಳ್ಳುವ ಆಯ್ಕೆಯನ್ನು ಕೊಟ್ಟಿರುತ್ತೇನೆ.

ತಮಿಳುನಾಡಿನ ಶಾಲೆಯೊಂದರಲ್ಲಿ ಮಾಡಿದ ಅಂತಹ ಒಂದು ಪ್ರಯತ್ನದಲ್ಲಿ ನಾಲ್ಕನೇ ತರಗತಿಯ ಮಕ್ಕಳು ಆಹಾರ ಮತ್ತು ಪೌಷ್ಟಿಕತೆ ಕುರಿತು ಪದ್ಯಗಳನ್ನು ಬರೆದು ಶಾಲೆಯ ಕ್ಯಾಂಟೀನ್‌ನಲ್ಲಿ ಪ್ರದರ್ಶಿಸಿದರು. ಒಬ್ಬ ಹೊಳಹುಗಳನ್ನು ಕೊಟ್ಟರೆ ಮತ್ತೊಬ್ಬ ಚಿತ್ರ ಬರೆದ, ಮೂರನೆಯವನು ಪದ್ಯ ರಚಿಸಿದರೆ, ಮಗದೊಬ್ಬ ಆ ಪದ್ಯವನ್ನು ಬರೆದ. ಹೀಗೆ ಒಂದು ಗುಂಪಿನಲ್ಲಿ ಅವರೆಲ್ಲರೂ ಸಕ್ರಿಯರಾದರು. ಪ್ರತಿಯೊಬ್ಬರ ಕಾರ್ಯವೂ ಪ್ರತಿ ಚಟುವಟಿಕೆಯಲ್ಲೂ ಬದಲಾಗುತ್ತಿರುತ್ತದೆ. ಉದಾಹರಣೆಗೆ, ಪ್ರವೇಶದ್ವಾರಕ್ಕೆ ಸ್ವಾಗತ ಸಂದೇಶ ಬರೆಯುವ ಚಟುವಟಿಕೆ. ಈ ಪ್ರಕ್ರಿಯೆಯ ಮೂಲಕ, ಅವಧಿ ಮುಗಿಯುವ ಹೊತ್ತಿಗೆ ಎಲ್ಲಾ ಮಕ್ಕಳೂ ಶಾಲಾ ಕ್ಯಾಂಟೀನ್‌ಗೋ, ಉದ್ಯಾನಕ್ಕೋ, ಪ್ರವೇಶದ್ವಾರಕ್ಕೋ ಒಟ್ಟಿನಲ್ಲಿ ಒಂದು ಪದ್ಯ ಬರೆದಿದ್ದರು.

ನಾಲ್ಕನೇ ತರಗತಿಯಲ್ಲಿ ನಾವು ಸೌರ ವ್ಯವಸ್ಥೆಯ (All about the Solar System) ಬಗ್ಗೆ ಸಮಗ್ರ ಪುಸ್ತಕವೊಂದನ್ನು ರಚಿಸಿದೆವು. ಪ್ರತಿ ಮಗುವೂ ತನಗಿಷ್ಟದ ಬರಹ ವಿಷಯವನ್ನು ಆರಿಸಿಕೊಳ್ಳ-ಬಹುದಾಗಿತ್ತು. ಕೆಲವು ಮಕ್ಕಳು ವಾಸ್ತವಾಂಶಗಳನ್ನು ಆರಿಸಿದರೆ, ಇನ್ನು ಕೆಲವರು ನಿರೂಪಣೆ, ಮತ್ತೆ ಕೆಲವರು ಕಾಲ್ಪನಿಕ ಕತೆಯನ್ನು ಬರೆದರು. ಒಂದು ಮಗು ಪೀಠಿಕೆಯನ್ನು ಬರೆಯಿತು, ಬರೆಯಲು ನಿರಾಕರಿಸುತ್ತಿದ್ದ ಕೆಲ ಮಕ್ಕಳು ಚಿತ್ರಗಳನ್ನು ರಚಿಸಿದರು, ಇನ್ನು ಕೆಲವರು ಅವನ್ನು ಅಂಟಿಸಿದರು. ಒಬ್ಬಾತ ಶೀರ್ಷಿಕೆ ಮತ್ತು ಸಾರಾಂಶ ಬರೆದನು. ಹೀಗೆ, ಪ್ರತಿ ಮಗುವೂ ಕಲಿಕೆಯ ಪ್ರಕ್ರಿಯೆಯಲ್ಲಿ ತನ್ನನ್ನು ತೊಡಗಿಸಿಕೊಂಡು, ತನ್ನದೇ ಮಟ್ಟದಲ್ಲಿ ಅವನ/ಅವಳ ಬರವಣಿಗೆಯ ಕೆಲವು ಕೌಶಲವನ್ನೂ ತೋರಿಸಿಕೊಟ್ಟಿತು. ಆದರೆ, ಸಂಘಟಿತ ಪ್ರಯತ್ನದ ಫಲವಾಗಿ ಬಂದ ಅಂತಿಮ ಫಲಿತಾಂಶವು (ಉತ್ಪನ್ನ) ಕಲಿಕಾ ಪ್ರಕ್ರಿಯೆಯಲ್ಲಿ ಪ್ರತಿ ಮಗುವಿನ ಪಾಲ್ಗೊಳ್ಳುವಿಕೆಯನ್ನು ಖಚಿತಪಡಿಸಿತು. ಅಲ್ಲದೆ, ಅವನಿಗೆ/ಅವಳಿಗೆ 'ಅಸಾಧ್ಯ' ಎನ್ನುವುದರ ಬದಲಿಗೆ 'ಸಾಧ್ಯ' ಎಂಬುದನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟಿತು.

**ಸುಲಭ ಆಸನ ವ್ಯವಸ್ಥೆ**

ಕೆಲವೊಮ್ಮೆ ತರಗತಿ ಕೊಠಡಿಯಲ್ಲಿ ಮಕ್ಕಳು ಕುಳಿತುಕೊಳ್ಳುವ ವ್ಯವಸ್ಥೆಯಲ್ಲಿ ಬದಲಾವಣೆ ಮಾಡುವುದರಿಂದ ಪ್ರತಿ ಮಕ್ಕಳೂ ಕಲಿಯುತ್ತಿದ್ದಾರೆ ಎಂಬುದನ್ನು ಶಿಕ್ಷಕರು ದೃಢ–ಪಡಿಸಿಕೊಳ್ಳಲು ಸಾಧ್ಯವಾಗುತ್ತದೆ. ವೃತ್ತಾಕಾರದಲ್ಲಿ ಕುಳಿತು–ಕೊಳ್ಳುವುದರಿಂದ ಎಲ್ಲಾ ಮಕ್ಕಳು ಶಿಕ್ಷಕರನ್ನಷ್ಟೇ ಅಲ್ಲದೆ ಪರಸ್ಪರ ತಮ್ಮನ್ನೂ ನೋಡಿಕೊಳ್ಳಲೂ ಸಾಧ್ಯವಾಗುತ್ತದೆ. ಹೀಗೆ ಒಬ್ಬರನ್ನೊಬ್ಬರು ನೋಡಿಕೊಳ್ಳುವ ಸರಳ ಕ್ರಿಯೆಯಿಂದ ಮುಂದಿನ ದಿನಗಳಲ್ಲಿ ಪರಸ್ಪರ ಸಮನ್ವಯ ಮತ್ತು ಪಾಲ್ಗೊಳ್ಳುವಿಕೆಯೂ ಸಾಧ್ಯವಾಗುತ್ತದೆ. ಕತೆ ಹೇಳುವ ಅವಧಿಯಲ್ಲಿ ನಾನು ಮಕ್ಕಳನ್ನು ಒಂದೆಡೆ ಕಲೆಹಾಕಿ ಕೂರಿಸುವ ಪ್ರಯತ್ನ ಮಾಡಿದ್ದಿದೆ. ಹೀಗೆ ಒಟ್ಟುಗೂಡಿ ಕೂರುವುದರಿಂದ ಮಕ್ಕಳ ಮನಸ್ಸಿನಲ್ಲಿ ತಾವು ಯಾವುದೋ ಮುಖ್ಯವಾದ ಕೆಲಸದ ಭಾಗವಾಗಿದ್ದೇವೆ, ರಹಸ್ಯ ಚಟುವಟಿಕೆ ಮಾಡುತ್ತಿದ್ದೇವೆ ಎಂಬ ಭಾವನೆ ಬರುತ್ತದೆ. ಮುಖ್ಯವಾಗಿ, ತಂಟೆಕೋರ ಮತ್ತು ಅಲ್ಲಿ ಇಲ್ಲಿ ಅಲೆದಾಡುವ ಮಕ್ಕಳನ್ನೂ ಹಿಡಿದಿಡಲು ಇದು ನೆರವಾಗುತ್ತದೆ. ಗುಂಪಾಗಿ ಕೂರುವುದರಿಂದ ಮಕ್ಕಳಲ್ಲಿ ಯಜಮಾನಿಕೆ ಮತ್ತು ತಂಡದ ಉತ್ಸಾಹ ಬರುವುದನ್ನು ನಾನು ಗಮನಿಸಿದ್ದೇನೆ. ಇದರಿಂದ, ಕಡಿಮೆ ಪ್ರೇರೇಪಣೆ ಇರುವ ಮಕ್ಕಳೂ ಕ್ರಿಯಾಶೀಲರಾಗಿ ಕಲಿಕೆಯ ಪ್ರಕ್ರಿಯೆಯಲ್ಲಿ ಭಾಗಿಯಾಗಲು ಅವಕಾಶ ಸಿಗುತ್ತದೆ. ಪಾಲ್ಗೊಳ್ಳುವಿಕೆಯ ನೆಲೆಯನ್ನು ಹೊರತುಪಡಿಸಿಯೂ, ಗುಂಪಾಗಿ ಕುಳಿತುಕೊಳ್ಳುವ ಅಭ್ಯಾಸದಿಂದಾಗಿ ತರಗತಿಯ ಅವಧಿಯಲ್ಲಿ ಮಾಡಬೇಕಾಗಿದ್ದ ಕೆಲವು ವಿನ್ಯಾಸ ಮತ್ತು ಹಣೆಪಟ್ಟಿಗಳಿಂದ ನಾನು ತಪ್ಪಿಸಿಕೊಂಡೆ. ನಿಗದಿತ ಆಸನ ಮತ್ತು ಶೈಲಿಯಲ್ಲಿ ಬದಲಾವಣೆ ಮಾಡಿದ್ದರಿಂದ ಮಕ್ಕಳ ಮುಖದಲ್ಲಿ ಸಂಪೂರ್ಣವಾಗಿ ಹೊಸ ಬೆಳಕನ್ನು ನಾನು ಕಂಡೆ. ಇದು ಸಿದ್ಧಮಾದರಿಯ ಸರಪಳಿಯೊಂದನ್ನು ತುಂಡರಿಸಿತು ಎಂದುಕೊಂಡಿದ್ದೇನೆ. ಅಚ್ಚರಿಯ ಸಂಗತಿ ಎಂದರೆ, ಲಿಂಗ, ಕೊನೆಯ ಬೆಂಚಿನ ಗುಂಪು ಎಂಬಿತ್ಯಾದಿ ಗಡಿರೇಖೆಗಳನ್ನೂ ಇದು ಮುರಿದಿತ್ತು.

**ಪಠ್ಯದ ಜೊತೆಗೆ ವೈಯಕ್ತಿಕ ನಂಟು ಸ್ಥಾಪನೆ**

‘ಪ್ರತಿ ಮಗುವೂ ಒಂದು ಸನ್ನಿವೇಶ’ವೆಂಬಂತೆ (Every child is a context) ಪರಿಗಣಿಸಬೇಕು ಎಂದು ನಾನು ಪ್ರಸ್ತುತ ಕೆಲಸ ಮಾಡುತ್ತಿರುವ ಶಾಲೆಯ ಸಂಸ್ಥಾಪಕರು ಇತ್ತೀಚೆಗೆ ನೆನಪಿಸಿದ್ದರು. ಈ ಮಾತು ಸಂಪೂರ್ಣ ನಿಜ ಎಂದು ನಾನೂ ಅಂದುಕೊಳ್ಳುತ್ತೇನೆ. ಶಿಕ್ಷಣ ವ್ಯವಸ್ಥೆಯು ಪ್ರತಿಯೊಂದು ಸನ್ನಿವೇಶಕ್ಕೂ ಜವಾಬ್ದಾರಿ ವಹಿಸಲು ಸಾಧ್ಯವಿಲ್ಲ ಎಂಬುದು ಅಷ್ಟೇ ನಿಜ. ಸ್ಥಳೀಯ ಸನ್ನಿವೇಶಗಳ ಹೊಣೆ ಹೊರುವುದು, ಪಠ್ಯ ಮತ್ತು ಸಂಪನ್ಮೂಲ ಸಿದ್ಧಪಡಿಸುವಲ್ಲಿ ಪರಿಹರಿಸಲಾಗದ ಸವಾಲುಗಳೂ ದೊಡ್ಡದಾಗಿ ಪರಿಣಮಿಸುತ್ತದೆ. ಅಂತಹ ಸಂದರ್ಭದಲ್ಲಿ, ಒಂದು ವ್ಯವಸ್ಥೆಯು ಪ್ರತಿ ಮಗುವಿಗೂ ಹೊಣೆ ಹೊರುತ್ತದೆ ಎಂದಾದರೆ ಅದು ಶಿಕ್ಷಣ ವ್ಯವಸ್ಥೆಯಲ್ಲಿನ ದೊಡ್ಡ ದಂತಕತೆಯಾಗುತ್ತದೆ!

ಆದರೂ, ಬೋಧನೆಯ ದೈನಂದಿನ ಕೆಲಸದಲ್ಲಿ ಇದೆಲ್ಲ ಅಷ್ಟು ಅಸಾಧ್ಯವಾದವು ಎಂಬಂತೆ ಕಾಣುವುದಿಲ್ಲ. ವೈಯಕ್ತಿಕ ಕತೆಗಳು, ಇತಿಹಾಸ, ಒಗಟುಗಳು, ಆಸಕ್ತಿಗಳು ಮುಂತಾದ ತರಗತಿ ಕೊಠಡಿಯಲ್ಲಿ ಯಾವುದನ್ನಾದರೂ ಒಳಗೊಳ್ಳುವಂಥ ಮಾರ್ಗಗಳ ನೆಲೆಯಲ್ಲಿ ಯೋಚಿಸಲು ಪ್ರಯತ್ನಿಸುವುದು ಮತ್ತು ಪ್ರತಿ ಮಗುವೂ ಕಲಿಯುತ್ತಿದೆ ಎಂಬುದನ್ನು ಖಾತರಿಪಡಿಸಿಕೊಳ್ಳಲು ದೀರ್ಘ ಕಾಲ ಬೇಕಾಗುತ್ತದೆ. ಹಾಗಾಗಿ ಇದೊಂದು ದೊಡ್ಡ ಸವಾಲು. ಈ ನಿಟ್ಟಿನಲ್ಲಿ ನಾನು ಪ್ರಯತ್ನಿಸಿದಾಗಿನ ಕೆಲವೊಂದು ಸ್ವಾರಸ್ಯಕರ ಅನುಭವಗಳು ನನಗೆ ಇನ್ನೂ ನೆನಪಿನಲ್ಲಿವೆ.

ಶಾಲೆಯ ಹೊರಗೆ ಹಮ್ಮಿಕೊಂಡ ಶೈಕ್ಷಣಿಕ ನಾಟಕ (Edu-drama) ಅವುಗಳಲ್ಲಿ ಒಂದು. ಒಂದು ಮಗು (ಕೆ ಎಂದುಕೊಳ್ಳಿ) ನಾಟಕದಲ್ಲಿ ಭಾಗವಹಿಸುವುದೇ ಇಲ್ಲ ಎಂದು ಗೋಡೆಗೆ ಮುಖ ಮಾಡಿಕೊಂಡು ನಿಲ್ಲುತ್ತಿತ್ತು.

ನಾವು, ಪ್ರತಿ ಮಗುವೂ ಗೋಡೆಗೆ ಎದುರಾಗಿ ನಿಂತು, ಅವನ/ಅವಳ ದಿನನಿತ್ಯ ಗೋಡೆಯ ಜೊತೆಗೆ ಮಾತನಾಡುವಂಥ ಉತ್ತೇಜಕ ಚಟುವಟಿಕೆಯನ್ನು ಮಾಡಿದೆವು. ಆ ನಂತರ ಎಲ್ಲರೂ ವೃತ್ತಾಕಾರವಾಗಿ ಕುಳಿತುಕೊಂಡ ಬಳಿಕವೇ ನಾವು ತರಗತಿ ಆರಂಭಿಸುತ್ತೇವೆ. ಆದ್ದರಿಂದ ‘ಕೆ’ಯ ವರ್ತನೆ ಎಲ್ಲರಂತೆ ಸಾಮಾನ್ಯವಾಗಿದ್ದು, ಸ್ವೀಕಾರಾರ್ಹವಾಗಿ, ಎಲ್ಲರೊಂದಿಗೆ ಬೆರೆತು ಖುಷಿಯಾಗಿರತೊಡಗಿದನು. ಇದು ಮೊದಲ ಹಂತವಾಗಿತ್ತು. ಎರಡನೆಯ ಹಂತವಾಗಿ, ನಾನು ಈ ಕೆಲಸದಲ್ಲಿ ಆ ಮಗುವಿಗೆ ಯಾವುದೇ ಬಲವಂತ ಮಾಡಲಿಲ್ಲ, ಅವನನ್ನು ಅವಮಾನಿಸಲಿಲ್ಲ ಅಥವಾ ನಿರ್ಲಕ್ಷಿಸಲಿಲ್ಲ ಅಥವಾ ಕಡೆಗಣಿಸಲಿಲ್ಲ.

ಕ್ರಮೇಣ ನಾವು ಅವನನ್ನು ನಂಬುತ್ತೇವೆ ಎಂದು ಅರ್ಥವಾಗಿ ಅವನೂ ಆ ವಾತಾವರಣವನ್ನು ಮೆಚ್ಚಿಕೊಳ್ಳತೊಡಗಿದ. ನಿಧಾನವಾಗಿ ಮುಖ್ಯ ಪಾತ್ರದ ಭಾಗವಾಗಲು ಅವನು ಇಚ್ಛಿಸಿದ. ಇದೇ ಸಂದರ್ಭದಲ್ಲಿ ಗೋಡೆಯ ಜೊತೆ ಮಾತನಾಡುವ ಚಟುವಟಿಕೆಯನ್ನು ನಾವು ಕೈಬಿಟ್ಟು ಇತರ ಚಟುವಟಿಕೆ / ಕಾರ್ಯತಂತ್ರಗಳನ್ನು ಕೈಗೆತ್ತಿಕೊಂಡೆವು.

ಮತ್ತೊಂದು ಅನುಭವ ಆರನೇ ತರಗತಿಯಲ್ಲಿ ಸಮಾಜವಿಜ್ಞಾನ ತರಗತಿಯಲ್ಲಿ ಪಾಲ್ಗೊಳ್ಳಲು ನಿರಾಕರಿಸುತ್ತಿದ್ದ ಹುಡುಗನೊಬ್ಬನ ಬಗೆಗಿನದು. ತರಗತಿ ಮುಗಿದ ಬಳಿಕ, ಅವನ ಆಸಕ್ತಿಗಳು ಮತ್ತು ಬದುಕಿನ ಬಗ್ಗೆ ಅವನ ಜೊತೆ ಮಾತನಾಡಲಾರಂಭಿಸಿದೆ. ಅವನಿಗೆ ಕಲ್ಲುಗಳನ್ನು ಸಂಗ್ರಹಿಸುವುದೆಂದರೆ ಇಷ್ಟ ಎಂದು ಗೊತ್ತಾಯಿತು. ಹಾಗಾಗಿ ಶಿಲಾಯುಗದ ಬಗ್ಗೆ ಮಾತನಾಡಲು ನಾವು ಶುರು ಮಾಡಿದೆವು, ಅಲ್ಲದೆ, ಶಿಲಾಯುಗದವನೆಂದು ಕಲ್ಪಿಸಿಕೊಳ್ಳಲು ಹೇಳಿ, ಅವನ ಸಂಗ್ರಹದಲ್ಲಿರುವ ಕಲ್ಲುಗಳಿಂದ ಯಾವ ಬಗೆಯ ಆಯುಧಗಳನ್ನು ತಯಾರಿಸಬಹುದು ಎಂದು ಅಂದಾಜಿಸಿದೆವು. ಅವನನ್ನು ಉತ್ತೇಜಿಸಲು ಒಂದು ಆರಂಭಿಕ ಅಂಶವಾಗಿ ಈ ಚಟುವಟಿಕೆ ಬಳಕೆಯಾಯಿತು. ಪಠ್ಯವಿಷಯವನ್ನು ಆತನ ಖಾಸಗಿ ಬದುಕಿನ ಜೊತೆಗೆ ಹೇಗೆ ಸಮೀಕರಿಸಬಹುದು ಎಂಬುದನ್ನು ನೀಡಲು ಕೂಡಾ ಇದು ನೆರವಾಯಿತು.

ಹಾಗಂತ, ಇಂತಹ ನಡೆಗಳು ಅವುಗಳದ್ದೇ ಆದ ಸಮಸ್ಯೆಗಳಿಂದ ಮುಕ್ತವಾಗಿರುತ್ತವೆ ಎಂದೇನೂ ಅಲ್ಲ. ಅಲ್ಲದೆ, ಸಾಮಾನ್ಯವಾಗಿ ಪ್ರತಿಯೊಂದು ಮಗುವಿನೊಂದಿಗೆ ಹೀಗೆ ಕಳೆಯಲು ಸಮಯ ಮತ್ತು ಅವಕಾಶ ಇರುವುದಿಲ್ಲ. ಬಹುತೇಕ ಸಂದರ್ಭಗಳಲ್ಲಿ, ಹೀಗೆ ಒಳಗೊಳ್ಳುವುದಕ್ಕೆ ಬೇಕಾದ ಹೊಂದಾಣಿಕೆ ಮತ್ತು ಸ್ವಾಯತ್ತತೆ ಇರುವುದಿಲ್ಲ.

ಮಕ್ಕಳೊಂದಿಗೆ ಆಟದ ವೇಳೆ, ಬಸ್‌ಗೆ ಕಾಯುವಾಗ, ಬಸ್‌ನೊಳಗೆ ಹೀಗೆ ಅವಕಾಶ ಸಿಕ್ಕಾಗಲೆಲ್ಲಾ ಅವರ ಬದುಕು ಮತ್ತು ಸನ್ನಿವೇಶದ ಬಗ್ಗೆ ತಿಳಿದುಕೊಳ್ಳುವುದು, ಆ ಮೂಲಕ ಬೋಧನೆ, ಅಭ್ಯಾಸದ ಬಗ್ಗೆ ಮಾರ್ಗದರ್ಶನ ಕೊಡಬಹುದು, ಅಲ್ಲದೆ ಮಕ್ಕಳ ಜೊತೆಗೆ ಶಿಕ್ಷಕರು

ಹೆಚ್ಚು ಮಾತನಾಡಬಹುದು. ಇದು ಜಟಿಲವಾದರೂ, ಮಕ್ಕಳ ಬದುಕಿನ ವಾಸ್ತವಗಳು ಅವರನ್ನು ಕಲಿಕೆ ಮತ್ತು ಪಠ್ಯದಲ್ಲಿ ಒಳಗೊಳ್ಳುವಂತೆ ಮಾಡುವ ಪ್ರಕಿಯೆಯಲ್ಲಿ ನೆರವಾಗುತ್ತದೆ. ನಾನು ಮಕ್ಕಳ ಬದುಕಿನ ಸ್ವಾರಸ್ಯ ಮತ್ತು ಅನುಭವಗಳನ್ನೇ ಉದಾಹರಣೆಯಾಗಿ ತರಗತಿಯಲ್ಲಿ ಪ್ರಸ್ತಾಪಿಸುತ್ತೇನೆ. ಪಠ್ಯ ಓದುವ ಅವಧಿಯಲ್ಲಿನ ವರ್ಕ್‌ಶೀಟ್ ಮತ್ತು ಮೌಲ್ಯಮಾಪನಕ್ಕೆ ಮಕ್ಕಳ ಜೀವನಾನುಭವಗಳ ವಿವರಗಳನ್ನು ನಾನು ಬಳಸಿಕೊಳ್ಳುತ್ತಿದ್ದೆ.

ನಾನು ಜಾರಿಗೊಳಿಸಿದ್ದ, ಪಾಲಿಸಿದ್ದ ಕೆಲವು ಪರಿಣಾಮಕಾರಿ ಅಭ್ಯಾಸಗಳ ಮೇಲಷ್ಟೇ ಬೆಳಕು ಚೆಲ್ಲಿದ್ದೇನೆ. ಅವುಗಳಲ್ಲಿಯೂ ತಮ್ಮದೇ ಆದ ಸವಾಲುಗಳು ಹಾಗೂ ಕಾರ್ಯಗತಗೊಳಿಸಲಾಗದ ಸಮಸ್ಯೆಗಳಿರುತ್ತವೆ. ಆದರೆ ಅಂತಿಮವಾಗಿ, ಪ್ರತಿ ಮಗುವೂ ಕಲಿಯಬಲ್ಲುದೋ ಇಲ್ಲವೋ ಎಂಬುದು ಹಿರಿಯರು ಹೊಂದಿರುವ (ಪೋಷಕರು, ಶಿಕ್ಷಕರು, ಶಾಲಾ ಪ್ರಾಂಶುಪಾಲರು, ಪಠ್ಯಪುಸ್ತಕದ ಲೇಖಕರು ಅಥವಾ ಇತರ ಯಾವುದೇ ಭಾಗೀದಾರರು) ಅವನ/ಅವಳ ಮಗು ಕಲಿಯಬಲ್ಲುದು ಎಂಬ ನಂಬಿಕೆಯನ್ನು ಅವಲಂಬಿಸಿರುತ್ತದೆ. ಇದು ವೈಯಕ್ತಿಕ ಅಥವಾ ಭಾವನಾತ್ಮಕ ನಂಬಿಕೆ ಎಂದೇನೂ ನಾನು ಹೇಳುತ್ತಿಲ್ಲ. ಆದರೆ ಪ್ರತಿ ಮಗುವೂ ಕಲಿಯಬಲ್ಲದು ಮತ್ತು ಪ್ರತಿಯೊಂದನ್ನೂ ಕಲಿಯಬಲ್ಲದು ಎಂಬ ಮಾಹಿತಿಪೂರ್ಣ, ಪರೀಕ್ಷಿಸಿದ ನಂಬಿಕೆಯ ವಿಚಾರದ ಅನ್ವಯ ಹೇಳಿದ್ದೇನೆ. ಕಲಿಕೆಯ ತಿರುವು ಭಿನ್ನವಾದೀತಾದರೂ ಕಲಿಕೆ ಮಾತ್ರ ಸಾಧ್ಯವಾಗುತ್ತದೆ.

ನಾನು ಪ್ರಸ್ತಾಪಿಸಿದಂತೆ, ಹಲವು ರೀತಿಯಲ್ಲಿ ಕೆಲವು ಮಕ್ಕಳ ವಿಚಾರದಲ್ಲಿ ವ್ಯವಸ್ಥೆ ಸೋಲುತ್ತದೆ ಮತ್ತು ಆ ಮಕ್ಕಳು ಕಲಿಯುವುದಿಲ್ಲ. ಈ ಸೋಲನ್ನು ಕಲಿಕೆಯಲ್ಲಿನ ಅಸಾಮರ್ಥ್ಯದ ಜೊತೆ ಸುಲಭವಾಗಿ ಸಮೀಕರಿಸಬಹುದು. ಎಲ್ಲಿಯವರೆಗೆ ಈ ರೀತಿಯ ತಪ್ಪು ನಿರ್ಣಯವನ್ನು ನಾವು ಗಮನಿಸಲು ಸಾಧ್ಯವೋ ಮತ್ತು ಸೂಕ್ತ ಸನ್ನಿವೇಶ, ಪರಿಸ್ಥಿತಿ ಮತ್ತು ಪ್ರಕ್ರಿಯೆಯನ್ನು ಒದಗಿಸಿದಲ್ಲಿ ಪ್ರತಿ ಮಗುವೂ ಕಲಿಯುಬಲ್ಲದು ಎಂದು ನಂಬುತ್ತೇವೋ ಅಲ್ಲಿಯವರೆಗೂ ಪ್ರತಿ ಮಗುವಿಗೂ ಕಲಿಕೆಯನ್ನು ಖಾತರಿಪಡಿಸುವಂತಹ ತರಗತಿಯುನ್ನು ನಿರ್ಮಿಸುವ ಮಾರ್ಗಗಳನ್ನು ನಾವು ಕಂಡುಕೊಳ್ಳುತ್ತಲೇ ಇರುತ್ತೇವೆ.



**ಪೂರ್ವಾ ಅಗರ್‌ವಾಲ್,** ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಹಳೆ ವಿದ್ಯಾರ್ಥಿನಿ ಮತ್ತು ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿ ಪಡೆದವರು. ಶಿಕ್ಷಣದ ಕುರಿತ ಅವರ ಶಿಕ್ಷಣದಿಂದಾಗಿ ಶಿಕ್ಷಣಶಾಸ್ತ್ರಜ್ಞೆಯಾಗುವ ಆಸೆಯ ಬೇರುಗಳನ್ನು ಗಟ್ಟಿಗೊಳಿಸಿತು. ಪ್ರಸ್ತುತ ಅವರು ಬೆಂಗಳೂರಿನ ಸ್ಪಾರ್ಕಿಂಗ್ ಮೈಂಡ್ಸ್ ಗ್ಲೋಬಲ್ ಸ್ಕೂಲ್‌ನಲ್ಲಿ (Sparkling Mindz Global School) ಕಾರ್ಯನಿರ್ವಹಿಸುತ್ತಿದ್ದು, ಇಬ್ಬರು ಮಕ್ಕಳ ಜೊತೆಗೆ ಜೀವನ ಸಾಗಿಸುತ್ತಿದ್ದಾರೆ. ಸ್ವತಂತ್ರವಾಗಿ ಓದುಗರು ಮತ್ತು ಬರಹಗಾರರು ಹೊರಹೊಮ್ಮುವಂತಹ ಪ್ರಕ್ರಿಯೆಗೆ ಅವಕಾಶ ನೀಡುವುದು ಅವರಿಗೆ ಇಷ್ಟ. ಅವರು ಮಕ್ಕಳ ಪುಸ್ತಕಗಳನ್ನೂ ಬರೆದಿದ್ದಾರೆ. ಅವರ ಮೊದಲ ಕೃತಿ 'ವ್ಹಾಟ್ ಮೇಕ್ಸ್ ಮಿ' (What Makes Me) ಯನ್ನು ತುಲಿಕಾ ಬುಕ್ಸ್ ಇತ್ತೀಚೆಗೆ ಪ್ರಕಟಿಸಿದೆ. ಪೂರ್ವಾ ಅಗರ್‌ವಾಲ್ ಅವರನ್ನು poorva.agarwal@apu.edu.in ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಮಮತೆಯ ಮೃದು ಸ್ಪರ್ಶ ಸಾಕು...

ಪ್ರತಿಭಾ ಕಟಿಯಾರ್

ಅದೊಂದು ದಿನ ಶಾಲೆಯಿಂದ ಹಿಂದಿರುಗುತ್ತಿದ್ದಾಗ, ನನ್ನ ಮನಸ್ಸು ತುಂಬಾ ಚಡಪಡಿಸುತ್ತಿತ್ತು. ನನಗೆ ಸ್ಪಷ್ಟವಾಗಿ ಯೋಚಿಸಲೂ ಆಗುತ್ತಿರಲಿಲ್ಲ. ಸ್ನೇಹಿತರೊಡನೆ ನನ್ನ ಮನಸ್ಸಿನ ಈ ಕಳವಳವನ್ನು ಹಂಚಿಕೊಂಡರೆ ನಿರಾಳವಾಗಬಹುದೆಂದುಕೊಂಡೆ. ಆದರೆ ಅದೂ ಆಗಲಿಲ್ಲ. ಎಷ್ಟೋ ತಿಂಗಳುಗಳು ಕಳೆದವು. ಆದರೆ ಚಡಪಡಿಕೆ ಇನ್ನೂ ಹಾಗೆಯೇ ಇದೆ. ಅದೇ ವೇಳೆಗೆ, ಈ ವ್ಯಾಕುಲತೆಯ ಭಾವಸ್ಥಿತಿಗೆ ಇನ್ನಷ್ಟು ಹೊಸ ಆಯಾಮಗಳು ಖಂಡಿತವಾಗಿಯೂ ಸೇರಿಕೊಂಡಿವೆ. ಅಂದು ನಡೆದದ್ದೇನೂ ವಿಶೇಷವಾದುದಾಗಿರಲಿಲ್ಲ. ಅದು ಇನ್ಯಾವುದೇ ದಿನದಂತೆಯೇ ಒಂದು ದಿನವಾಗಿತ್ತು. ಹಾಗಾದರೆ, ಏಕೆ ಅಷ್ಟೊಂದು ಅಶಾಂತಿ?

ಆ ದಿನ ನಾನು ಯಾವ ಶಾಲೆಯಿಂದ ಹಿಂದಿರುಗುತ್ತಿದ್ದೆನೋ ಅಲ್ಲಿಗೆ ಈ ಹಿಂದೆಯೂ ನಾನು ನಾಲ್ಕೈದು ಬಾರಿ ಹೋಗಿದ್ದೆ. ಆ ಶಾಲೆಯ 22 ಮಕ್ಕಳಲ್ಲಿ ಬಹುತೇಕ ಎಲ್ಲರೂ ನನಗೆ ಪರಿಚಿತರೇ ಆಗಿದ್ದರು. ನಮಗೆ ಪರಸ್ಪರರ ಹೆಸರುಗಳೂ ಗೊತ್ತಿದ್ದವು. ನಾವು ಸ್ನೇಹಿತರಾಗಿದ್ದೆವು, ಆಪ್ತ ಸ್ನೇಹಿತರು. ನಾನು ಅವರಿಗೆ ಕತೆಗಳನ್ನು ಹೇಳುತ್ತಿದ್ದೆ. ಅವರೂ ನನಗೆ ಕತೆಗಳನ್ನು ಹೇಳುತ್ತಿದ್ದರು. ನಾವು ಪರಸ್ಪರ ಚರ್ಚಿಸುತ್ತಿದ್ದೆವು. ಅಂದು ನಾನು ಐದನೇ ತರಗತಿಯಲ್ಲಿ ಒಂದಷ್ಟು ಸಮಯ ಕಳೆದೆ. ಆ ತರಗತಿಯಲ್ಲಿ ಒಂಭತ್ತು ಮಕ್ಕಳಿದ್ದಾರೆ. ಅಲ್ಲಿ ಪೋಟ್ಲಿ ಗ್ರಂಥಾಲಯ ಮಾತ್ರ ನಿರ್ವಹಿಸುತ್ತಿದ್ದುದರಿಂದ ಎಲ್ಲಾ ಮಕ್ಕಳು ಪೋಟ್ಲಿ ಸಂಗ್ರಹದಿಂದ ಪುಸ್ತಕಗಳನ್ನು ತಂದು ಓದುತ್ತಾರೆ. ಅವರು ಕತೆಗಳನ್ನು ಕೇವಲ ಓದುವುದಿಲ್ಲ. ಅವುಗಳ ಅರ್ಥವನ್ನು ಗ್ರಹಿಸುತ್ತಾರೆ. ಅವುಗಳ ಕುರಿತಾಗಿ ಚರ್ಚೆಯನ್ನೂ ಮಾಡುತ್ತಾರೆ.

ಆ ದಿನ ನಾವು ಒಂದು ಬರೆಯುವ ಆಟವನ್ನು ಆಡಿದೆವು. ತಾವು ಓದಿದ ಕತೆಗಳಲ್ಲಿ ತಮಗೆ ತುಂಬಾ ಇಷ್ಟವಾಗಿದ್ದೇನು ಎನ್ನುವುದರ ಬಗ್ಗೆ ಬರೆಯುವಂತೆ ನಾನು ಅವರಿಗೆ ಹೇಳಿದೆ. ಮಕ್ಕಳಿಗೆ ಸ್ವತಃ ಏನನ್ನಾದರೂ ಬರೆಯುವಂತೆ ಹೇಳಿದಾಗ, ಅವರಿಗದು ಇಷ್ಟವಾಗುತ್ತದೆ. ಅದರಲ್ಲಿಯೂ ತಮ್ಮ ಬರಹವನ್ನು ಅದರಲ್ಲಿನ ಅಕ್ಷರ ದೋಷಗಳನ್ನು ಹುಡುಕಿ ತಿದ್ದುವುದಿಲ್ಲ ಎಂಬುದು ಅವರಿಗೆ ತಿಳಿದಿದ್ದಾಗ ಅವರು ಬರೆಯಲು ಇಷ್ಟಪಡುತ್ತಾರೆ ಎನ್ನುವುದು ನನ್ನ ಅನುಭವ. ಎಲ್ಲಾ ಮಕ್ಕಳು ಬರೆಯಲು ಆರಂಭಿಸಿದರು. ನಂತರ, ತಾವು ಬರೆದುದನ್ನು ಒಬ್ಬರಾದ ಮೇಲೊಬ್ಬರು ಎಲ್ಲರಿಗೂ ಕೇಳುವಂತೆ ಓದಲು ಶುರು ಮಾಡಿದರು. ಆದರೆ, ಭುವನ್, ಸೊಮಲಿ ಮತ್ತು ರುದ್ರ ಎಂಬ ಮೂವರು ಮಕ್ಕಳು ತಮ್ಮ ನೋಟ್‌ಬುಕ್‌ಗಳಿಂದ ತಲೆಯನ್ನು ಮೇಲೆತ್ತುತ್ತಿರಲಿಲ್ಲ. ಅವರು ತುಂಬ ಶ್ರದ್ಧೆಯಿಂದ ಏನನ್ನೋ ಬರೆಯುತ್ತಿದ್ದಾರೆ ಎಂಬಂತೆ ತೋರುತ್ತಿತ್ತು. ಎಲ್ಲಾ ಮಕ್ಕಳೂ ಓದಿ ಮುಗಿಸಿದರೂ, ಈ ಮೂವರು ಮಕ್ಕಳು ಮಾತ್ರ ನೋಟ್‌ಬುಕ್‌ನಲ್ಲಿ ತಮ್ಮ ತಲೆಯನ್ನು ಹುದುಗಿಸಿಕೊಂಡೇ ಕುಳಿತಿದ್ದರು. ನಾನು ಪ್ರೀತಿಯಿಂದ, "ನೀವು ಎಷ್ಟು ಬರೆದಿದ್ದೀರೋ ಅಷ್ಟನ್ನು ನನಗೆ ತೋರಿಸಿ," ಎಂದು ಕೇಳಿದೆ. ಆಗ, ಅವರ ಬಳಿ ಕುಳಿತಿದ್ದ ಮಗುವೊಂದು, "ಮೇಡಂ, ಅವರಿಗೆ ಹೇಗೆ ಬರೆಯಬೇಕೆಂದು ತಿಳಿದಿಲ್ಲ" ಎಂದು ಹೇಳಿತು. ಹಾಗೆ ಹೇಳುವಾಗ ಆ ಮಗುವಿನ ಮುಖದಲ್ಲಿ ತುಸು ಅಪಹಾಸ್ಯದ ಭಾವ ಇತ್ತು. ಆದರೆ ಆ ಮೂವರು ಮಕ್ಕಳು ತಮ್ಮ ತಲೆಯನ್ನು ನೋಟ್‌ಬುಕ್‌ನಲ್ಲಿ ಅಡಗಿಸಿಕೊಂಡೇ ಇದ್ದರು.

ನಾನು ಶಿಕ್ಷಕರೆಡೆಗೆ ನೋಡಿದೆ. ಅವರೂ "ಹೌದು, ಅವರಿಗೆ ಬರೆಯಲು ಬರುವುದಿಲ್ಲ" ಎಂದು ಹೇಳಿದರು. ಹೀಗೆ ಅವರು ಆರಾಮವಾಗಿ ಹೇಳುತ್ತಿರುವುದು ಮತ್ತು ಅವರ ಮುಖದಲ್ಲಿದ್ದ ಮೂದಲಿಕೆಯ ಭಾವವನ್ನು ಕಂಡು ನನ್ನ ಮನಸ್ಸಿನ ನೆಮ್ಮದಿ ಕದಡಿಹೋಯಿತು. ಆದರೆ ಅದಕ್ಕಿಂತ ಹೆಚ್ಚಾಗಿ, ಆ ಮಕ್ಕಳಿಗೆ ಹೇಗನ್ನಿಸುತ್ತಿರಬಹುದು ಎಂಬುದನ್ನು ಯೋಚಿಸಿ ನನಗೆ ಚಿಂತೆಯಾಯಿತು. ಮಕ್ಕಳಿಗೆ ನಿರಾಳವೆನಿಸಬೇಕು ಎಂದು ನಾನು ಬಯಸುತ್ತಿದ್ದೆ. ಹಾಗಾಗಿ, "ನಿಮಗೆ ಬರೆಯಲು ಸಾಧ್ಯವಾಗದಿದ್ದರೆ ಪರವಾಗಿಲ್ಲ. ನೀವು ಓದಿದ ಕತೆಯಿಂದ ನಿಮಗೇನನ್ನಿಸಿತು ಎನ್ನುವುದನ್ನು ನಿಮ್ಮ ಮಾತಿನಲ್ಲಿಯೇ ಹೇಳಿ," ಎಂದು ಹೇಳಿದೆ. ಮಕ್ಕಳು ಎದ್ದು ನಿಂತರು. ಆದರೆ ಏನನ್ನೂ ಹೇಳಲಿಲ್ಲ. ಮೂವರ ಕೈಗಳಲ್ಲೂ ಒಂದೊಂದು ಪುಸ್ತಕವಿತ್ತು. ಆದರೆ ಅವರು ಏನೂ ಹೇಳದೇ ಸುಮ್ಮನಿದ್ದರು. ಸ್ವಲ್ಪ ಹೊತ್ತಿನ ಬಳಿಕ ಭುವನ್ ಎಂಬ ಹುಡುಗ, "ಮೇಡಂ, ನಮಗೆ ಓದುವುದು ಹೇಗೆಂದು ಗೊತ್ತಿಲ್ಲ.' ಎಂದು ಹೇಳಿದ.

ಈ ಮಕ್ಕಳಿಗೆ ತಮ್ಮ ಹೆಸರನ್ನು ಹೇಗೆ ಬರೆಯಬೇಕು ಎನ್ನುವುದೂ ತಿಳಿದಿಲ್ಲ, ಪುಸ್ತಕದ ಶೀರ್ಷಿಕೆಯನ್ನು ಓದಲೂ ಬರುವುದಿಲ್ಲ ಎನ್ನುವ ಸಂಗತಿಯು ನನ್ನ ಕಲ್ಪನೆಗೂ ಮೀರಿದುದಾಗಿತ್ತು. ಹಿಂದೆ ಐದು ಬಾರಿ ನಾನು ಶಾಲೆಗೆ ಭೇಟಿ ನೀಡಿದಾಗ ಈ ಮಕ್ಕಳು ತುಂಬಾ ಚುರುಕಾಗಿದ್ದರು, ಕಲಿಯಲು ಆಸಕ್ತರಾಗಿದ್ದರು. ಅವರು ಪ್ರತಿಯೊಂದು ಚಟುವಟಿಕೆಯಲ್ಲಿಯೂ ಭಾಗವಹಿಸುತ್ತಿದ್ದರು. ಭುವನ್ ಅಂತೂ ಎಲ್ಲದರಲ್ಲಿಯೂ ಪಾಲ್ಗೊಳ್ಳುತ್ತಿದ್ದ. ಅವನು ತರಗತಿಯ ಮೇಲ್ವಿಚಾರಕನೂ (Monitor) ಸಹ ಆಗಿದ್ದ. ಅವನು ಪುಸ್ತಕ ಓದುವುದನ್ನೂ ನಾನು ನೋಡಿದ್ದೆ. ಒಮ್ಮೆಯಂತೂ ಅವನು ಪುಸ್ತಕದ ಪುಟಗಳನ್ನು ತಿರುವುತ್ತಾ ಇಡೀ ಕತೆಯನ್ನು ಹೇಳಿದ್ದ. 'ಈ ಹಿಂದೆ ನೀನು ನನಗೆ ಪುಸ್ತಕ ನೋಡಿಕೊಂಡು ಕತೆಯನ್ನು ಹೇಳಿದ್ದೆ, ಅಲ್ಲವೇ?' ಎಂದು ನಾನು ಅವನನ್ನು ಕೇಳಿದೆ. ಆಗ ಅವನು ತುಂಬಾ ನಿರಾಳ ಸ್ವರದಲ್ಲಿ, 'ಇತರ ಮಕ್ಕಳು ಪುಸ್ತಕವನ್ನು ಓದುವಾಗ ಕೇಳಿಸಿಕೊಳ್ಳುತ್ತೇನೆ. ನನಗೆ ಯಾವ ಪುಟದಲ್ಲಿ ಏನು ಬರೆದಿದೆ, ಎಲ್ಲಿ ಏನಿದೆ ಎಲ್ಲ ಗೊತ್ತಾಗಿಬಿಡುತ್ತದೆ. ಹಾಗಾಗಿ..' ಎಂದು ಹೇಳುವಾಗ ಅವನ ಮುಖದಲ್ಲಿ ನಗುವಿತ್ತು.

ಅದನ್ನು ನೋಡಿದರೆ, ಅವನು, ಉಳಿದಿಬ್ಬರು ಮಕ್ಕಳು, ತರಗತಿಯ ಇತರ ಮಕ್ಕಳು ಹಾಗೂ ಶಿಕ್ಷಕರು ಎಲ್ಲರೂ ಈ ಮೂವರು ಮಕ್ಕಳು ಓದುವುದನ್ನು, ಬರೆಯುವುದನ್ನು ಕಲಿಯಲಾರರು ಎಂಬುದನ್ನು ಒಪ್ಪಿಕೊಂಡಂತಿತ್ತು. ಶಿಕ್ಷಕರು, 'ಕೆಲವು ಮಕ್ಕಳು ಹಾಗೇ. ಅವರಿಗೆ ಕಲಿಯಲು ಸಾಧ್ಯವೇ ಇಲ್ಲ. ಈ ಮೂರೂ ಮಕ್ಕಳು ಅಂತಹವರು. ಎಲ್ಲಾ ಮಕ್ಕಳು ಕಲಿಯಲೇಬೇಕು ಎಂದೇನಿಲ್ಲ ಅಲ್ಲವೇ?' ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಆ ಶಿಕ್ಷಕಿಯು ಅದನ್ನು ನನಗೆ

ಹೇಳುತ್ತಿದ್ದಾರೋ ಅಥವಾ ತನಗೇ ಹೇಳಿಕೊಳ್ಳುತ್ತಿದ್ದರೋ ತಿಳಿಯಲಿಲ್ಲ. ಆದರೆ ಒಂದು ಮಗು ತನ್ನ ಸ್ನೇಹಿತರು ಪುಸ್ತಕವನ್ನು ಓದುವಾಗ ಗಮನವಿಟ್ಟು ಕೇಳಿ ಆ ಪುಸ್ತಕದ ಯಾವ ಪುಟದಲ್ಲಿ ಏನು ಬರೆದಿದೆ ಎಂಬುದನ್ನು ಅರ್ಥಮಾಡಿಕೊಳ್ಳಬಲ್ಲನು ಎಂದಾದರೆ, ತಾನೇ ಸ್ವತಃ ಓದಿ, ಬರೆಯಲು ಅವನಿಗೆ ಏಕೆ ಸಾಧ್ಯವಾಗುವುದಿಲ್ಲ ಎಂಬ ಆಲೋಚನೆಯೇ ನನ್ನನ್ನು ವಿಚಲಿತಗೊಳಿಸಿತು. ಜೊತೆಗೆ, ಈ ಮಕ್ಕಳು ಆಗಾಗ ಶಾಲೆ ತಪ್ಪಿಸುವವರೂ ಅಲ್ಲ. ಭುವನ್‌ನ ಅಗಲವಾದ ಕಣ್ಣುಗಳು, ಅವನ ನಗು, 'ಮೇಡಂ, ಹೇಗೆ ಓದಬೇಕೆಂದು ನಮಗೆ ಗೊತ್ತಿಲ್ಲ, ಹೇಗೆ ಬರೆಯಬೇಕು ಅಂತ ನಮಗೆ ಗೊತ್ತಿಲ್ಲ,' ಎಂಬ ಅವನ ಆತ್ಮವಿಶ್ವಾಸದ ಮಾತುಗಳು ನನಗೆ ತುಂಬಾ ನೋವನ್ನುಂಟುಮಾಡಿದವು, ನನ್ನ ಆತ್ಮವನ್ನು ಕಲಕುತ್ತಿದ್ದವು. ಕೆಲವು ಮಕ್ಕಳು ಕಲಿಯಲಾರರು, ಅವರಲ್ಲಿ ತಾನೂ ಒಬ್ಬ ಎಂಬುದನ್ನು ಶಾಲಾ ವ್ಯವಸ್ಥೆಯು ಅವನಿಗೆ ಮನವರಿಕೆ ಮಾಡಿಸಿಬಿಟ್ಟಿತ್ತು.

ಹಲವಾರು ತಿಂಗಳುಗಳ ನಂತರ ಇದೆಲ್ಲವನ್ನು ಬರೆಯುತ್ತಿರುವಾಗಲೂ ನನಗೆ ಭುವನ್‌ನ ಕಣ್ಣುಗಳೇ ಎದುರಿಗಿದ್ದಂತೆ ಭಾಸವಾಗುತ್ತದೆ. ಅವು ಹೀಗೆ ಓದಲು, ಬರೆಯಲು ಸಾಧ್ಯವಿಲ್ಲದಂತಹ ಪ್ರತಿಯೊಂದು ಮಗುವಿನ ಕಣ್ಣುಗಳೂ ಹೌದು. ಇಂಥ ಮಕ್ಕಳು ಶಿಕ್ಷಣವೆಂಬ ರೈಲಿನ ಪ್ರತ್ಯೇಕ ಬೋಗಿಯಲ್ಲಿ ಪಯಣಿಸುತ್ತಿರುತ್ತಾರೆ. ಎಲ್ಲಿ ಬೇಕಾದರೂ ಯಾವಾಗಲಾದರೂ ಅವರು ಈ ಬೋಗಿಯಿಂದ ಇಳಿದು ಬಿಡಲೂಬಹುದು. ಕೆಲವರು ಮೂರನೆಯ ತರಗತಿಯ ನಂತರ ಶಾಲೆ ಬಿಟ್ಟರೆ, ಇನ್ನು ಕೆಲವರು ನಾಲ್ಕನೆಯ ಅಥವಾ ಐದನೆಯ ತರಗತಿಯ ನಂತರ ಬಿಡಬಹುದು. ತಮ್ಮ ಶಾಲೆಯ ಶೇಕಡಾವಾರು ಅಂಕಿಯನ್ನು ತಗ್ಗಿಸುವ ಅಥವಾ ಕುಂದುಂಟು ಮಾಡುವುದರಿಂದ ಅವರು ಮಧ್ಯದಲ್ಲೇ ಶಾಲೆಯನ್ನು ಬಿಟ್ಟ ಬಗ್ಗೆ ಶಾಲಾ ವ್ಯವಸ್ಥೆಯೂ ತಲೆಕೆಡಿಸಿಕೊಳ್ಳುವುದಿಲ್ಲ. ಭುವನ್ ಇದೇ ಶಾಲೆಯಲ್ಲಿಯೇ ಮೊದಲನೆಯ ತರಗತಿಗೆ ಸೇರಿಕೊಂಡಿದ್ದ. ಇಂದು ಓದಲು, ಬರೆಯಲು ಬಾರದೇ ಇದ್ದರೂ ಇದೇ ಶಾಲೆಯಿಂದ ಐದನೆಯ ತರಗತಿಯನ್ನು ತೇರ್ಗಡೆಯಾಗಿ ಹೋಗುತ್ತಿದ್ದಾನೆ. ಓದುವ, ಬರೆಯುವ ತೊಂದರೆಯನ್ನು ಬಿಟ್ಟರೆ, ಭುವನ್ ಲೆಕ್ಕ ಮಾಡುವುದರಲ್ಲಿ ಚುರುಕಾಗಿದ್ದಾನೆ, ಪ್ರತಿಯೊಂದು ಕೆಲಸವನ್ನೂ ಸಮರ್ಪಕವಾಗಿ ಮಾಡುತ್ತಾನೆ, ನಾಟಕ, ಕವಿತೆ, ಕತೆ ಹೇಳುವುದು ಮುಂತಾದ ಎಲ್ಲ ಚಟುವಟಿಕೆಗಳಲ್ಲಿಯೂ ಭಾಗವಹಿಸುತ್ತಾನೆ.

ನನ್ನದೊಂದು ವಿಚಿತ್ರ ಮನಸ್ಸು. ಅದು ಸೋತವರು, ಹಿಂದುಳಿದವರು ಅಥವಾ ಕಡೆಗಣಿಸಲ್ಪಟ್ಟವರು ಎಂದು ಕರೆಯಲ್ಪಡುವ ಜನರಿಗೆ ನನ್ನನ್ನು ಆಪ್ತಳನ್ನಾಗಿಸುತ್ತದೆ. ನಾನೇನು ಮಾಡಿದೆ, ನನಗೆ ಎಷ್ಟನ್ನು ಮಾಡಲು ಸಾಧ್ಯವಾಯಿತು, ಈಗ ಭುವನ್ ತನ್ನ ಹಾಗೂ ತನ್ನ ಸ್ನೇಹಿತರ ಹೆಸರುಗಳನ್ನು ಹೇಗೆ ಬರೆಯತೊಡಗಿದ್ದಾನೆ ಎಂಬ ಈ ಪ್ರಯಾಣದ ಬಗ್ಗೆ ಮಾತನಾಡುವುದು ಅರ್ಥವಿಲ್ಲದ್ದು. ಏಕೆಂದರೆ, ನಮ್ಮೆದುರು ಇರುವ ಪ್ರಶ್ನೆ ಅದಕ್ಕಿಂತಲೂ ತುಂಬಾ ದೊಡ್ಡದು. ಈ ಸಂದರ್ಭದಲ್ಲಿ, ರಾಜಸ್ಥಾನದ ಸ್ನೇಹಿತರೊಬ್ಬರು ಹೇಳಿದ ಇಂತಹುದೇ ಅನುಭವವು ನೆನಪಿಗೆ ಬರುತ್ತಿದೆ. ಆ ಬಾಲಕನ ಹೆಸರು ದಿಲ್‌ಖುಷ್. ಅವನು ಎಷ್ಟು ತುಂಟನಾಗಿದ್ದನೆಂದರೆ, ತರಗತಿಯಲ್ಲಿ ಅವನು ಯಾರಿಗೂ ಓದಲು, ಬರೆಯಲು ಬಿಡುತ್ತಿರಲಿಲ್ಲ. ಸಾಮಾನುಗಳನ್ನೆಲ್ಲ ಮನಸ್ಸಿಗೆ ಬಂದಂತೆ ಹರಡುತ್ತಿದ್ದ. ಎಲ್ಲರೊಂದಿಗೂ ಜಗಳವಾಡುತ್ತಿದ್ದ. ಓದುತ್ತಲೇ ಇರಲಿಲ್ಲ. ಶಿಕ್ಷಕರು ಅವನ ತಂದೆತಾಯಿಗಳ ಜೊತೆ ಮಾತನಾಡುವುದಕ್ಕಾಗಿ ಅವರನ್ನು ಕರೆಸಿದರೆ, ಅವನು ಮನೆಯಲ್ಲಿಯೂ ಹೀಗೇ ಮಾಡುತ್ತಾನೆಂದು ಹೇಳಿ, ಅವರು ಅವನಿಗೆ ಹೊಡೆಯಲು ಆರಂಭಿಸುತ್ತಿದ್ದರು. ನಂತರ, ಅಜೀಂ ಪ್ರೇಮ್‌ಜಿ ಫೌಂಡೇಶನ್‌ಗೆ ಸೇರಿದ ಮಿತ್ರರೊಬ್ಬರು ಕೆಲವು ತಿಂಗಳ ಕಾಲ ಅವನ ಜೊತೆ ಕೆಲಸ ಮಾಡಿದಾಗ ಅವನ ಮೆದುಳು ತುಂಬಾ ಚುರುಕಾಗಿದೆ ಹಾಗೂ ಅವನ ಗಣಿತದ ಜ್ಞಾನ ಎಣೆಯಿಲ್ಲದ್ದು ಎಂಬುದು ಅವರಿಗೆ ತಿಳಿದುಬಂದಿತು. ನೀರೂ ಮೇಡಂ ಎಂಬ ಶಿಕ್ಷಕಿ ಹೋದಲ್ಲೆಲ್ಲ ಅವರ ಸೀರೆಯನ್ನು ಹಿಡಿದುಕೊಂಡೇ ಸುತ್ತುತ್ತಿದ್ದ ಅಲ್ಮೋರಾದ ಹುಡುಗಿಯೊಬ್ಬಳ ನೆನಪೂ ಬರುತ್ತದೆ. ಅವಳು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಅವಳಿಗೂ ಓದುವುದು, ಬರೆಯುವುದರಲ್ಲಿ ಆಸಕ್ತಿಯಿರಲಿಲ್ಲ. ನನಗೆ ದಿನೇಶ್‌ಪುರ್‌ದ ಇನ್ನೊಬ್ಬ ಹುಡುಗನ ನೆನಪಾಗುತ್ತಿದೆ. ಅವನು ಶಾಲೆಗೆ ಬರುವುದು ಎಂದರೆ ವ್ಯವಸ್ಥೆಯನ್ನು ಹಾಳುಗೆಡವಿದಂತೆ. ಅವನು ಸದಾ ಜಗಳ, ತಂಟೆ, ನಿಂದನೆಗಳಲ್ಲಿಯೇ ಮುಳುಗಿರುತ್ತಿದ್ದ. ಅವನು ಓದುತ್ತಿರಲೂ ಇಲ್ಲ, ಓದುವ ಆಸಕ್ತಿಯನ್ನು ಹೊಂದಿರಲೂ ಇಲ್ಲ. ಹಾಗಾಗಿ, ಇತರ ಮಕ್ಕಳ ನೋಟ್‌ಬುಕ್‌ಗಳನ್ನು ಹರಿದುಹಾಕುತ್ತಿದ್ದ ಅಥವಾ ಅವರ ಪೆನ್ಸಿಲ್‌ಗಳನ್ನು ಅಡಗಿಸಿಡುತ್ತಿದ್ದ. ಅವನಿಗೆ ಮನೆಯಲ್ಲಾಗಲೀ ಶಾಲೆಯಲ್ಲಾಗಲೀ ಸಾಕಷ್ಟು ಊಟ ಸಿಗುತ್ತಿರಲಿಲ್ಲ ಎಂಬುದು ಶಿಕ್ಷಕರಿಗೆ ಆಮೇಲೆ ತಿಳಿದುಬಂದಿತು. ಅವನಿಗೆ ಇತರ ಮಕ್ಕಳಿಗಿಂತ ಹೆಚ್ಚು ಹಸಿವಾಗುತ್ತಿತ್ತು. ಆದರೆ ಅವರೆಲ್ಲರಿಗೆ ಸಿಕ್ಕಷ್ಟೇ ಊಟ ಅವನಿಗೂ ಸಿಗುತ್ತಿತ್ತು. ಹೀಗೆ, ಒಂದಾದ ಮೇಲೊಂದರಂತೆ ಹಲವು ನಿದರ್ಶನಗಳು ನನ್ನ ಮನಸ್ಸಿನಲ್ಲಿ ಬರುತ್ತವೆ. ಒಬ್ಬ ಬಾಲಕಿಗೆ ಸಮೀಪದೃಷ್ಟಿ ದೋಷವಿತ್ತು. ಅವಳು ತಾಯಿಯನ್ನೂ ಕಳೆದುಕೊಂಡಿದ್ದಳು. ಮತ್ತೊಬ್ಬ ಹುಡುಗಿಯ ಮನೆಯಲ್ಲಿ ಅವಳ ತಂದೆಯು ಪ್ರತಿದಿನ ಕುಡಿದು ಬರುತ್ತಿದ್ದ ಹಾಗೂ ಅವಳ ತಾಯಿಗೆ ಹೊಡೆಯುತ್ತಿದ್ದ. ಮತ್ತೊಬ್ಬ ಹುಡುಗಿಯ ಸಹೋದರನೊಬ್ಬ ಅವಳ ನೋಟ್‌ಬುಕ್‌ಗಳನ್ನೆಲ್ಲ ಹರಿದುಹಾಕಿಬಿಡುತ್ತಿದ್ದ.

ಈ ಎಲ್ಲ ಮಕ್ಕಳು ಶಾಲೆಗೆ ಹೋಗುತ್ತಿದ್ದರೂ ಕಲಿಯಲು ಅಸಮರ್ಥರಾಗಿದ್ದರು. ಸಮಸ್ಯೆಯೇನೆಂದರೆ, ವ್ಯವಸ್ಥೆಯು ಕೆಲವು ಮಕ್ಕಳು ಕಲಿಯಲು ಸಮರ್ಥರಾಗಿರುವುದೇ ಇಲ್ಲ ಎಂದು ಭಾವಿಸಿರುತ್ತದೆ. ಅಥವಾ ಶಾಲೆಗಳಲ್ಲಿ ಬೋಧನಾ ಸಿಬ್ಬಂದಿಯ ತೀವ್ರ ಕೊರತೆಯಿದ್ದು ಇಂತಹ ಮಕ್ಕಳ ಜೊತೆಗೆ ಪ್ರತ್ಯೇಕವಾಗಿ ಕೆಲಸ ಮಾಡುವುದನ್ನು ಊಹಿಸಲೂ ಕಷ್ಟವಾಗುವಂತಹ ಸನ್ನಿವೇಶವಿರುತ್ತದೆ. ಈ ವಾದಗಳು ಸರಿಯಿರಬಹುದು. ಬಹುಶಃ ಅವು ನಿಜವಿರಲೂಬಹುದು. ಅಂಕಿಅಂಶಗಳ ಪ್ರಕಾರ ದಾಖಲಾದ ಮಕ್ಕಳಲ್ಲಿ ಶೇ.70ರಿಂದ ಶೇ. ೮೦ರಷ್ಟು ಮಕ್ಕಳು ಕಲಿತರೂ ಸಾಕು ಎಂದು ನಾವು ಸಮಾಧಾನಪಡಬಹುದು. ಆದರೆ, ಕಲಿಯುವ ಆಸೆಯನ್ನು ಹೊತ್ತು ಶಾಲೆಗೆ ಬರುವ ಮಕ್ಕಳ ಕಣ್ಣುಗಳು ನಮ್ಮನ್ನು ಹಿಂಬಾಲಿಸುತ್ತಲೇ ಇರುತ್ತವೆ.

ಸರ್ಕಾರಿ ಶಾಲೆಗಳಿಗೆ ಬರುವ ಮಕ್ಕಳ ಹಾಗೂ ಅವರ ಪರಿಸರದ ಕುರಿತಾಗಿ ವ್ಯವಸ್ಥೆಯು ಸಂವೇದನಾಶೀಲವಾಗಿರುವುದು ಎಷ್ಟು ಮುಖ್ಯ ಎಂಬುದು ಈಗ ಅರ್ಥವಾಗುತ್ತಿದೆ. ಯಾವುದೇ ತರಹದ ಕಲಿಕೆಯು ಕಲಿಯುವ ಆಸೆ ಹಾಗೂ ಕಲಿಸುವ ಪ್ರೀತಿಗಳೆರಡೂ ಒಂದೆಡೆ ಸಂಧಿಸುವ ಆ ಸಂವೇದನಾ ಬಿಂದುವಿನಲ್ಲಿ ಆರಂಭವಾಗುತ್ತದೆ. ಒಮ್ಮೆ ನನ್ನ ಸಹೋದ್ಯೋಗಿಯೊಬ್ಬರು, ಯಾವುದೇ ತರಹದ ಬೋಧನೆ ಮತ್ತು ಕಲಿಕೆ ಹೇಗಿರಬೇಕೆಂದು ಹೇಳಿದ ಮಾತು ನನಗೆ ಮಂತ್ರಸಮಾನವೇ ಆಗಿಬಿಟ್ಟಿದೆ. ಅದು ಹೀಗಿದೆ: ಎಲ್ಲಕ್ಕಿಂತ ಮೊದಲು ಮಕ್ಕಳ ತಲೆಯ ಮೇಲೆ ಪ್ರೀತಿಯಿಂದ

ಮೃದುವಾಗಿ ಕೈಗಳನ್ನಿಡಿ, ಅವರ ಕಣ್ಣುಗಳನ್ನು ನೋಡಿ, ಅವುಗಳಲ್ಲಿ ಎಷ್ಟೊಂದು ಕನಸುಗಳಿವೆ ಎಂಬುದನ್ನು ಗಮನಿಸಿ, ಅವರೊಂದಿಗೆ ಸ್ನೇಹ ಬೆಳೆಸಿ, ನಂತರ ಓದುವುದು, ಬರೆಯುವುದು ತನ್ನಿಂದ ತಾನೇ ಆಗುತ್ತದೆ. ಇಂತಹ ಒಂದು ಬೃಹತ್ ಪ್ರಮಾಣದ ಶಿಕ್ಷಣ ವ್ಯವಸ್ಥೆಯು ಈ ತರಹದ ಭಾವನಾತ್ಮಕ ವಿಧಾನಗಳ ಮೂಲಕ ಕಾರ್ಯ–ನಿರ್ವಹಿಸಲು ಸಾಧ್ಯವಿಲ್ಲ ಎಂದು ನಾನು ಯೋಚಿಸುತ್ತೇನೆ. ಆದರೆ ನಮ್ಮ ಶೈಕ್ಷಣಿಕ ದಾಖಲೆಗಳಲ್ಲಿ ಈ ಬಗೆಯ ಸೂಕ್ಷ್ಮ ಸಂವೇದನೆಗಳ ಬಗ್ಗೆ ಸಾಕಷ್ಟು ಗಮನ ನೀಡಲಾಗಿದೆ ಎಂಬುದೂ ನನಗೆ ಕಾಣಿಸುತ್ತದೆ. ಇಲ್ಲವಾದರೆ, ಎಲ್ಲರಿಗೂ ಸಮಾನ ಸ್ವರೂಪದ ಶಿಕ್ಷಣ, ಮಗುವಿನ ಅಗತ್ಯಗಳನ್ನಾಧರಿಸಿದ ಮಗು ಕೇಂದ್ರಿತ ಶಿಕ್ಷಣ, ಕಲಿಕೆಯ ಪ್ರಕ್ರಿಯೆಯಲ್ಲಿ ಪ್ರತಿಯೊಂದು ಮಗುವಿನ ಭಾಗವಹಿಸುವಿಕೆ ಇತ್ಯಾದಿಗಳ ಬಗ್ಗೆ ಏಕೆ ಅವರು ಹೇಳುತ್ತಿದ್ದರು? ರಾಷ್ಟ್ರೀಯ ಶಿಕ್ಷಣ ನೀತಿಯಿರಲಿ (National Education Policy-NEP), ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005 (National Curriculum Framework 2005- NCF 2005) ಇರಲಿ ಅಥವಾ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣಗಳ ರಾಷ್ಟ್ರೀಯ ಪಠ್ಯಕ್ರಮವೇ ಇರಲಿ (National Curriculum for Elementary and Secondary Education), ಎಲ್ಲವೂ ಈ ವಿಚಾರವನ್ನೇ ಶಿಫಾರಸ್ಸು ಮಾಡುತ್ತವೆ. ಇತ್ತೀಚೆಗೆ, ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005 ಒಂದು ಸಮಗ್ರ ವಿಧಾನವನ್ನು ರೂಪಿಸಿದೆ. ಎಲ್ಲಾ ಮಕ್ಕಳಿಗೂ ಗುಣಮಟ್ಟದ ಸಮನ್ವಯ ಶಿಕ್ಷಣವನ್ನು ನೀಡುವ ವಿಧಾನಗಳನ್ನು ಅದರಲ್ಲಿ ಸೇರಿಸಲಾಗಿದೆ.

ಈ ಕೆಳಗಿನವುಗಳನ್ನು ಶಿಕ್ಷಕರು ಅನುಸರಿಸಬೇಕೆಂದು ಅದು ಸ್ಪಷ್ಟವಾಗಿ ಹೇಳಿದೆ:

- ಪ್ರತಿಯೊಂದು ಮಗುವಿನ ವ್ಯಕ್ತಿಗತ ಅಗತ್ಯಗಳನ್ನು ಕುರಿತು ಸಂವೇದನಾಶೀಲರಾಗಿರಬೇಕು.
- ಮಗು ಕೇಂದ್ರಿತವಾದ, ಸಾಮಾಜಿಕವಾಗಿ ಪ್ರಸ್ತುತವಾದ ಹಾಗೂ ನಿಷ್ಪಕ್ಷಪಾತವಾದ ಬೋಧನೆ/ಕಲಿಕೆಯ ಪ್ರಕ್ರಿಯೆಗಳನ್ನು ಒದಗಿಸಬೇಕು.
- ಮಕ್ಕಳ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂದರ್ಭಗಳ ವೈವಿಧ್ಯತೆಯನ್ನು ಅರ್ಥಮಾಡಿಕೊಳ್ಳಬೇಕು.

ಅಂದರೆ, ಇಲ್ಲಿ ಹೇಳುರುವುದು ಕೇವಲ ಭಾವನಾತ್ಮಕರಾಗಿರುವ ಬಗ್ಗೆ ಮಾತ್ರವಲ್ಲ. ಈ ಸಂಗತಿಗಳನ್ನು ಕೇವಲ ದಾಖಲೆಗಳಲ್ಲಿ ನಮೂದಿಸಿದರೆ ಸಾಕಾಗುವುದಿಲ್ಲ, ಬದಲಿಗೆ ತರಗತಿಯಲ್ಲಿನ ಎಲ್ಲ ಮಕ್ಕಳ ಬದುಕಿನ ಜೊತೆಗೂ ಅವುಗಳನ್ನು ಸಂವೇದನಾ–ಪೂರ್ಣವಾಗಿ ಜೋಡಿಸಬೇಕು ಎಂಬ ಅತಿ ಮುಖ್ಯ ವಿಚಾರವನ್ನು ಅರ್ಥಮಾಡಿಕೊಳ್ಳುವುದನ್ನು ಕುರಿತದ್ದಾಗಿದೆ. ಮಕ್ಕಳನ್ನು, ಅವರ ಅಗತ್ಯಗಳನ್ನು ಮತ್ತು ಅವರ ಸುತ್ತಮುತ್ತಲಿನ ಪರಿಸರವನ್ನು ಅರ್ಥ ಮಾಡಿಕೊಳ್ಳದಿದ್ದರೆ, ಅವರ ಬಗ್ಗೆ ಗೌರವದ ಪ್ರಜ್ಞೆ ಇಲ್ಲದಿದ್ದರೆ, ಇವುಗಳನ್ನು ಅನುಷ್ಠಾನಗೊಳಿಸುವುದು ಕಷ್ಟ.

ಹಾಗಾಗಿ, ಕೆಲವು ತಂದೆತಾಯಿಗಳು ತಮ್ಮ ಮಕ್ಕಳತ್ತ ಗಮನ ನೀಡುತ್ತಿಲ್ಲವೆಂದು ಶಿಕ್ಷಕರು ಹೇಳಿದಾಗ, ನಾನು 'ಆ ಮಕ್ಕಳ'ನ್ನು ಪ್ರೀತಿಸಲಾರಂಭಿಸುತ್ತೇನೆ. ಕಲಿಕೆ ಎಲ್ಲರಿಗೂ ಮುಖ್ಯ ಎಂದು ನಾನು ಶಿಕ್ಷಕರು ಹಾಗೂ ಸಹೋದ್ಯೋಗಿಗಳಿಗೆ ಹೇಳುತ್ತೇನೆ. ಏಕೆಂದರೆ, ಪ್ರತಿಯೊಬ್ಬರಿಗೂ ಬದುಕುವ ಹಕ್ಕು ಇರುವ ಹಾಗೆ, ಪ್ರತಿಯೊಬ್ಬರಿಗೂ ಕಲಿಯುವ ಹಕ್ಕೂ ಇದೆ. ಈ ಪ್ರಕ್ರಿಯೆಯನ್ನು ಆರಂಭಿಸಲು ಇರುವ ಬೋಧನಾಕ್ರಮವೆಂದರೆ, ತರಗತಿಗೆ ಬರುವ ಎಲ್ಲ ಮಕ್ಕಳೊಂದಿಗೂ ಹೃತ್ಪೂರ್ವಕವಾದ ಸಂಬಂಧವನ್ನು ರೂಪಿಸಿಕೊಳ್ಳಲು ಸಾಧ್ಯವಾಗುವುದು, ಅವರನ್ನು ಗೌರವಿಸುವುದು, ಯಾರೊಬ್ಬರಿಗೂ ಇವು ಸಿಗದೆ ಹೋಗದಂತೆ ನೋಡಿಕೊಳ್ಳುವ ರೀತಿಯಲ್ಲಿ ಈ ಪ್ರಕ್ರಿಯೆಗಳಲ್ಲಿ ಅತ್ಯಂತ ಜಾಗರೂಕರಾಗಿರುವುದು.

*ಮಕ್ಕಳ ಗುರುತನ್ನು ಗೌಪ್ಯವಾಗಿಡುವ ಉದ್ದೇಶದಿಂದ ಅವರ ಹೆಸರುಗಳನ್ನು ಬದಲಾಯಿಸಲಾಗಿದೆ.



**ಪ್ರತಿಭಾ ಕಟಿಯಾರ್** ಅವರು ಡೆಹ್ರಾಡೂನ್‌ನಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಹಿಂದಿ ಭಾಷೆ ಮತ್ತು ಪ್ರಕಾಶನ ವಿಭಾಗದ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಅವರು ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ, ಕಾನೂನು ಪದವಿ ಹಾಗೂ ಪತ್ರಿಕೋದ್ಯಮ ಮತ್ತು ಸಮೂಹ ಸಂವಹನದಲ್ಲಿ ಡಿಪ್ಲೊಮಾವನ್ನು ಪಡೆದಿದ್ದಾರೆ. ಈ ಮೊದಲು 'ಹಿಂದುಸ್ತಾನ್,' 'ಪಯೊನಿಯರ್,' 'ಜನಸತ್ತಾ,' 'ಸ್ವತಂತ್ರ ಭಾರತ' ಮತ್ತು 'ದೈನಿಕ್ ಜಾಗರಣ್' ಪತ್ರಿಕೆಗಳಲ್ಲಿ ಪತ್ರಕರ್ತರಾಗಿ ಕಾರ್ಯನಿರ್ವಹಿಸಿದ್ದಾರೆ. ಬರವಣಿಗೆಯ ಕುರಿತಾಗಿ ತೀವ್ರ ಒಲವನ್ನು ಹೊಂದಿದ್ದು ಕವಿತೆ, ಕತೆ ಹಾಗೂ ಪ್ರವಾಸಕಥನಗಳನ್ನು ಬರೆಯುತ್ತಾರೆ. 2010ರಲ್ಲಿ ಅವರಿಗೆ 'ಸಂಗಮ್ ಹೌಸ್' ಫೆಲೋಶಿಪ್ ದೊರೆತಿದೆ. ಅವರು ರಷ್ಯಾ ದೇಶದ ಕವಯಿತ್ರಿ, ಮರೀನ ಸ್ವೆತಾಯೇವ (Mareena Tswetayeva) ಅವರ ಜೀವನಚರಿತ್ರೆಯನ್ನು ಬರೆದಿದ್ದಾರೆ. ನಿಷ್ಪಕ್ಷಪಾತತೆ, ಸಮಾನತೆ ಹಾಗೂ ಮಾನವೀಯತೆಯಲ್ಲಿ ಅವರಿಗಿರುವ ನಂಬಿಕೆಯು ಅವರ ಬರಹಗಳಲ್ಲಿ ಹಾಗೂ ಅವರು ಕೈಗೊಂಡ ಕೆಲಸಕಾರ್ಯಗಳಲ್ಲಿ ಬಿಂಬಿತವಾಗಿರುತ್ತದೆ. ಅವರನ್ನು pratibhakatiyar@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ‘ಸಮನ್ವಯ ತರಗತಿ’ಗಳಿಗೆ ಶಿಕ್ಷಕರನ್ನು ಸಜ್ಜುಗೊಳಿಸುವುದು

ರಾಜಶ್ರೀ ಶ್ರೀನಿವಾಸನ್

ನಮ್ಮ ದೇಶದಲ್ಲಿ ಎಲ್ಲರಿಗೂ ಸಮಾನ ಗುಣಮಟ್ಟದ ಶಿಕ್ಷಣ ದೊರಕತಕ್ಕದ್ದೆಂದು ಕಾನೂನು ಅವಕಾಶ ಕಲ್ಪಿಸಿದೆಯಾದರೂ, ವಾಸ್ತವ ಪರಿಸ್ಥಿತಿ ಅಸಮಾನ ಪ್ರವೇಶಾವಕಾಶ ಮತ್ತು ಕಳಪೆ ಶೈಕ್ಷಣಿಕ ಫಲಿತಾಂಶಗಳ ನಿದರ್ಶನಗಳಿಂದಲೇ ತುಂಬಿಹೋಗಿದೆ. ನಮ್ಮ ವ್ಯವಸ್ಥೆಯಲ್ಲಿ ಅಸಮರ್ಥತೆ, ಬಡತನ ಹಾಗೂ ಸಾಮಾಜಿಕ ಬಹಿಷ್ಕಾರಗಳ ಪರಿಣಾಮಗಳಿಂದ ನರಳುತ್ತಿರುವ ಮಕ್ಕಳು ಅಪಾರ ಸಂಖ್ಯೆಯಲ್ಲಿದ್ದಾರೆ. ಶಾಲಾವ್ಯವಸ್ಥೆಯಲ್ಲಿ ಶೈಕ್ಷಣಿಕ ಸಾಧನೆ ಎಂಬುದು ಮಕ್ಕಳಿಗೆ ಅದರಲ್ಲೂ, ಕುಟುಂಬದಲ್ಲಿ ತಾವೇ ಮೊದಲ ಬಾರಿಗೆ ಶಾಲೆಯ ಮೆಟ್ಟಿಲು ಹತ್ತುತ್ತಿರುವ ಮಕ್ಕಳಿಗೆ ಮರೀಚಿಕೆಯಾಗಿದೆ, ಈ ಶಾಲೆಗಳ ಶಿಕ್ಷಕರ ಕಷ್ಟವಂತೂ ಹೇಳತೀರದು. ಇಂತಹ ಮಕ್ಕಳಿಗೆ ಮನೆಯಲ್ಲಿ ಯಾವುದೇ ಶೈಕ್ಷಣಿಕ ನೆರವು ದೊರೆಯದೇ ಇರುವುದರಿಂದ, ಶಿಕ್ಷಕರು ಈ ಮಕ್ಕಳ ಎಲ್ಲಾ ಶೈಕ್ಷಣಿಕ ಕಲಿಕೆಯು ಶಾಲೆಯೊಳಗೇ ಆಗುವಂತೆ ನೋಡಿ-ಕೊಳ್ಳಬೇಕು. ಈ ಮಕ್ಕಳ ಬದುಕಿನ ಸನ್ನಿವೇಶಗಳು ಅದೆಷ್ಟು ಸೂಕ್ಷ್ಮವಾಗಿರುತ್ತವೆ ಎಂದರೆ ಅವರ ಜೀವನವು ನಿರಂತರವಾಗಿ ಅನಿಶ್ಚಿತತೆ ಹಾಗೂ ಸಂದಿಗ್ಧತೆಗಳಲ್ಲಿ ಸಿಲುಕಿರುವುದರಿಂದ ಮಕ್ಕಳು ತಮ್ಮ ಕೌಟುಂಬಿಕ, ಸಾಂಸ್ಕೃತಿಕ, ಇಲ್ಲವೇ ಸಮಾಜೋ-ಆರ್ಥಿಕ ಕಾರಣಗಳಿಂದಾಗಿ ಮಾರನೇ ದಿನ ಶಾಲೆಗೆ ಹಾಜರಾಗುತ್ತಾರೋ, ಇಲ್ಲವೋ ಎಂಬುದೂ ಶಿಕ್ಷಕರಿಗೆ ತಿಳಿಯದಂತಹ ಪರಿಸ್ಥಿತಿಯಿರುತ್ತದೆ. ‘ಎಲ್ಲಾ ಮಕ್ಕಳೂ ಕಲಿಯಲು, ಶೈಕ್ಷಣಿಕವಾಗಿ ಸಾಧನೆಗೈಯಲು ಸಮರ್ಥರಿರುತ್ತಾರೆ ಎಂದು ಸತತವಾಗಿ ನಂಬುವ ಶಿಕ್ಷಕರು ಹಾಗೂ ಸರ್ವತೋಮುಖ ಬೆಂಬಲ ನೀಡುವ ಒಂದು ವ್ಯವಸ್ಥೆಯ ಅಗತ್ಯ ಈ ಮಕ್ಕಳಿಗೆ ಇದೆ. ಬಡತನವಾಗಲೀ, ಜಾತಿ, ಧರ್ಮಗಳೇ ಆಗಲಿ ಮತ್ತು ಇನ್ನಾವುದೇ ಸಾಮಾಜಿಕ ಭಿನ್ನತೆಗಳೇ ಆಗಲಿ, ಬುದ್ಧಿಶಕ್ತಿ ಅಥವಾ ವಿಚಾರಣಾ ಸಾಮರ್ಥ್ಯಗಳನ್ನು ರೂಪಿಸಲು ಕಾರಣವಾಗುವುದಿಲ್ಲ ಎಂಬ ನಂಬಿಕೆಯೇ ಶಾಲಾಶಿಕ್ಷಣದ ತತ್ತ್ವ ಹಾಗೂ ಅದರ ಆಚರಣೆಯ ಪ್ರಧಾನ ಅಂಗವಾಗಿರಬೇಕು.

ಶಾಲಾ ಶಿಕ್ಷಣ ಹಾಗೂ “ಶಿಕ್ಷಕರ ಶಿಕ್ಷಣ”ದ ವಿಚಾರವಾಗಿ ಕಳೆದ ದಶಕದಲ್ಲಿ ನಡೆದ ಪಠ್ಯಕ್ರಮ ಸಂವಾದಗಳ ಗಮನವೆಲ್ಲಾ ಕಲಿಕಾರ್ಥಿಗಳ ನಡುವಿನ ವೈವಿಧ್ಯದಿಂದ ತಲೆದೋರುವ ಸಮಸ್ಯೆಗಳ ಕಡೆಗೆ ಹಾಗು ಮಕ್ಕಳು ಕಲಿಯುವಂತೆ ನೋಡಿಕೊಳ್ಳಲು ಶಿಕ್ಷಕರನ್ನು ಸಮರ್ಥರನ್ನಾಗಿಸುವಂತಹ ಶಿಕ್ಷಕರ ತರಬೇತಿಯ ಕಡೆಗೇ ಹರಿದಿದೆ. 2019ರ ಕರಡು ರಾಷ್ಟ್ರೀಯ ಶಿಕ್ಷಣನೀತಿಯ ಆರನೇ ಅಧ್ಯಾಯವು (ನಿಷ್ಪಕ್ಷಪಾತ ಮತ್ತು ಸಮನ್ವಯ ಶಿಕ್ಷಣ) ಎಲ್ಲಾ ಮಕ್ಕಳಿಗೂ ಕಲಿಯಲು, ಕಲಿತು ಏಳಿಗೆ ಹೊಂದಲು ಸಮಾನ ಅವಕಾಶಗಳು ಇರುವಂತಹ ಸಮನ್ವಯ ಹಾಗೂ ನಿಷ್ಪಕ್ಷಪಾತ ವ್ಯವಸ್ಥೆಯ ಸಾಧನೆಯೇ ತನ್ನ ಗುರಿ ಎಂದು ವಿಶದಪಡಿಸುತ್ತದೆ. ಈ ಗುರಿಯ ಸಾಧನೆಗಾಗಿ ಅದು ಸಮನ್ವಯ ಶಿಕ್ಷಣವನ್ನು ಸೇವಾಪೂರ್ವ ಶಿಕ್ಷಕರ ಶಿಕ್ಷಣದ ಹಾಗೂ ಸೇವಾ ನಿರತ ಶಿಕ್ಷಕರ ವೃತ್ತಿ ಕ್ಷೇತ್ರದ ಬೆಳವಣಿಗೆಯ ಅವಿಭಾಜ್ಯ ಅಂಗವನ್ನಾಗಿ ಮಾಡುವ ಉದ್ದೇಶವನ್ನು ವ್ಯಕ್ತಪಡಿಸುತ್ತದೆ. “.. ಈ ಕಾರ್ಯಕ್ರಮಗಳು ವಿವಿಧ ಬಗೆಯ ವಿದ್ಯಾರ್ಥಿಗಳ ವಿಚಾರವಾಗಿ ಎಲ್ಲಾ ಶಿಕ್ಷಕರನ್ನು ಸಂವೇದನಾಶೀಲರಾಗಿರುವಂತೆ ಮಾಡುವುದನ್ನು ಖಾತರಿ ಪಡಿಸುವುದೇ ಅಲ್ಲದೆ, ಈ ಮೂಲಕ ಎಲ್ಲಾ ವಿದ್ಯಾರ್ಥಿಗಳ, ನಿರ್ದಿಷ್ಟವಾಗಿ ಪ್ರಾತಿನಿಧ್ಯ ದೊರೆಯದ ವರ್ಗಗಳ ಮಕ್ಕಳ, ಶೈಕ್ಷಣಿಕ ಅಗತ್ಯಗಳನ್ನು ಪೂರೈಸಲು ಸಮರ್ಥವಾಗುತ್ತವೆ.” (ಪು. 142, ರಾಷ್ಟ್ರೀಯ ಶಿಕ್ಷಣ ನೀತಿಯ ಕರಡು) ಎಂದು ಅಲ್ಲಿ ಹೇಳಲಾಗಿದೆ).

ಬಡವರ ಮಕ್ಕಳನ್ನು ಶಿಕ್ಷಿತರನ್ನಾಗಿ ಮಾಡುವ ವಿಚಾರವಾಗಿ ಶಿಕ್ಷಕರ ದೃಷ್ಟಿಕೋನಗಳು ಯಾವ ರೀತಿ ಇವೆ ಎಂಬುದರ ಬಗ್ಗೆ ಗಮನ ಕೇಂದ್ರೀಕರಿಸುವ ಸಂಶೋಧನಾ ಅಧ್ಯಯನಗಳು, “ಈ ಮಕ್ಕಳು ವಿಷಯ ಗ್ರಹಣಶಕ್ತಿಯ ಕೊರತೆಯಿಂದ ಬಳಲುತ್ತಿದ್ದು, ಕಳಪೆ ಅಧ್ಯಯನದ ವಿಧಾನಗಳನ್ನು ಹೊಂದುತ್ತಿದ್ದಾರೆ” ಎಂಬುದು ಶಿಕ್ಷಕರ ಧೋರಣೆಯಾಗಿರುತ್ತದೆ ಎಂದು ತೋರಿಸುತ್ತವೆ. (Batra, 2015) ಸಾರ್ವಜನಿಕ ಶಿಕ್ಷಣವ್ಯವಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಶಿಕ್ಷಕರು ಜಾತಿ, ಧರ್ಮ, ವರ್ಗ ಹಾಗೂ ಇತರ ಸಾಂಸ್ಥಿಕ ಅಥವಾ ಅಧಿಕಾರವರ್ಗದ ಎಲ್ಲೆಕಟ್ಟುಗಳನ್ನು ಮೀರಿನಿಂತು ಮಕ್ಕಳು ಕಲಿತು ತಮ್ಮ ಶಾಲಾಶಿಕ್ಷಣವನ್ನು ಪೂರ್ಣಗೊಳಿಸುವಂತೆ ಮಾಡಿರುವ ಶಿಕ್ಷಕರ ಜೀವನ ಗಾಥೆಯನ್ನು ಬಿಂಬಿಸುವ ವಾಸ್ತವ ವರದಿಗಳೂ ಇವೆ (Azim Premji University, 2019; Giridhar, 2019).

ಈ ಎರಡೂ ಬಗೆಯ ನಿರೂಪಣೆಗಳು ಇದ್ದು, ನಿರ್ಣಾಯಕ ಪ್ರಶ್ನೆ ಎಂದರೆ, ಎಲ್ಲಾ ಮಕ್ಕಳ ಕಲಿಕೆ ಹಾಗೂ ಬೆಳವಣಿಗೆಯನ್ನು ಸುಧಾರಿಸುವ ಗುರಿ ಹೊಂದಿರುವ ಸಮನ್ವಯ ಶಿಕ್ಷಕರ ತರಬೇತಿ ಕಾರ್ಯಕ್ರಮವನ್ನು ಅಭಿವೃದ್ಧಿಗೊಳಿಸುವುದು ಹೇಗೆ? ಯಾವ ಬೋಧನಾ ವಿಧಾನಗಳು ವಿದ್ಯಾರ್ಥಿಗಳಿಗೆ ತಮ್ಮ ನಂಬಿಕೆ ಹಾಗೂ ಅನಿಸಿಕೆಗಳನ್ನು ಅರಿವಿನ ಮೇಲ್ಮೈಗೆ ತರಲು ಸಹಾಯ ನೀಡುತ್ತವೆ?.

**ಬೋಧನೆಯ ಕಲಿಕೆ: ಶಿಕ್ಷಕ ಶಿಕ್ಷಣದ ಬೋಧನಾಶಾಸ್ತ್ರ**

ಪಾಠ ಮಾಡಲು ಕಲಿಯುವುದು ಒಂದು ಕಗ್ಗಂಟಿನ ವಿಚಾರ. ಇದು ವಿದ್ಯಾರ್ಥಿ ಮತ್ತು ಶಿಕ್ಷಕರ ಹಾಗೂ ಅವರ ಭಾವೀ ವೃತ್ತಿಗೂ ಇರುವ ಸಂಪರ್ಕದ ಮೊದಲ ಹಂತ. ಸೇವಾಪೂರ್ವ ಶಿಕ್ಷಕರ ಶಿಕ್ಷಣದ ಗುರಿಯಲ್ಲಿ ತಾವು ಆಯ್ಕೆ ಮಾಡಿಕೊಳ್ಳುವ ವಿಷಯವಸ್ತುವಿನ ಹಾಗೂ ಶಿಕ್ಷಣ ಶಾಸ್ತ್ರದ ಜ್ಞಾನಸಂಪಾದನೆ, ವಿದ್ಯಾರ್ಥಿಗಳ ಹಿನ್ನೆಲೆ ಮತ್ತು ಕಲಿಕಾ ಪ್ರಕ್ರಿಯೆಯನ್ನು ಅರ್ಥ ಮಾಡಿಕೊಳ್ಳುವುದು, ಶಾಲಾ ಸನ್ನಿವೇಶಗಳಲ್ಲಿ ಮಕ್ಕಳೊಡನೆ ಮತ್ತು ಇತರ ಶಿಕ್ಷಕರೊಡನೆ ಕೆಲಸಮಾಡಲು ಬೇಕಿರುವ ಸಾಮಾಜಿಕ ಹಾಗು ನೈತಿಕ ಮನೋ-ಧರ್ಮಗಳನ್ನು ಬೆಳೆಸಿಕೊಳ್ಳುವುದು, ಯೋಜನೆ, ಬೋಧನಕಲೆ ಮತ್ತು ಮೌಲ್ಯಮಾಪನಗಳ ಬಗೆಗಿನ ದೃಷ್ಟಿಕೋನಗಳ ಪ್ರಾರಂಭಿಕ ಸಂಚಯವನ್ನು ತಮ್ಮದಾಗಿಸಿಕೊಳ್ಳುವುದೂ ಸೇರಿರುತ್ತವೆ. ಶಿಕ್ಷಕರ ಶಿಕ್ಷಣದ ಬೋಧನಾ ಶಾಸ್ತ್ರವು, ಸಿದ್ಧಾಂತ, ಆಚರಣೆ ಮತ್ತು ವಿಚಾರಣೆಗಳು ಒಂದರೊಳಗೊಂದು ಹಾಸುಹೊಕ್ಕಾಗಿದ್ದು, ಶೈಕ್ಷಣಿಕ ಪ್ರಕ್ರಿಯೆಯ ಒಂದು ಸಮೃದ್ಧ ಪರಿಕಲ್ಪನೆಯನ್ನು ರೂಪಿಸಿಕೊಳ್ಳಲು ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ಜ್ಞಾನವನ್ನು ಬೆಳೆಸಿಕೊಳ್ಳುವುದು ಅತ್ಯವಶ್ಯಕ ಎಂಬ ಆಧಾರದ ಮೇಲೆ ನಿಂತಿದೆ.

ತಾವು ಒಡನಾಡಬೇಕಾಗಿರುವ ವಿದ್ಯಾರ್ಥಿಗಳ ಹಿನ್ನೆಲೆ, ಅವರ ಬಾಲ್ಯದ ಅನುಭವಗಳು ಮತ್ತು ಕಲಿಕೆಯ ಬಗ್ಗೆ ತಮ್ಮದೇ ಆದ ಪೂರ್ವ–ಕಲ್ಪನೆಗಳು ಹಾಗೂ ನಂಬಿಕೆಗಳ ಮಹಾಪೂರದೊಂದಿಗೆ ವಿದ್ಯಾರ್ಥಿ ಶಿಕ್ಷಕರು ತಮ್ಮ ಕಲಿಕಾ ಕಾರ್ಯಕ್ರಮವನ್ನು ಪ್ರವೇಶಿಸುತ್ತಾರೆ. ಅವರಿಗೆ ತಮ್ಮ ಭಾವನೆಗಳ ಬಗ್ಗೆ ಚಿಂತನೆ ನಡೆಸಲು, ಅವುಗಳನ್ನು ಅಭಿವ್ಯಕ್ತಿಗೊಳಿಸಲು ಅವಕಾಶ ನೀಡುವುದು ಆವಶ್ಯಕ. ಅನಿಸಿಕೆಗಳು ವ್ಯಕ್ತಿಯ ನಡವಳಿಕೆಯನ್ನು ರೂಪಿಸುತ್ತವೆ. ಇಂಥ ಪೂರ್ವ–ಕಲ್ಪನೆಗಳನ್ನು ಪರೀಕ್ಷೆಗೆ ಒಡ್ಡುವುದರ ಮೂಲಕ ಹೊಸ ಜ್ಞಾನವನ್ನು ಕಟ್ಟಿಕೊಳ್ಳುವ ಪ್ರಕ್ರಿಯೆ ಆರಂಭವಾಗುತ್ತದೆ. ಫೈಮನ್–ನೆಮ್ಸರ್ ಮತ್ತು ಬುಕ್‌ಮನ್ (1986) ಅವರು, ''ಬೋಧಿಸಲು ಕಲಿಯುವ ಪ್ರಕ್ರಿಯೆಯಲ್ಲಿ ಖುದ್ದಾಗಿ ಕಲಿತ ಅನುಭವವಾಗಲೀ, ವಿಶ್ವವಿದ್ಯಾಲಯಗಳ ಶಿಕ್ಷಣವಾಗಲೀ ತಮ್ಮಷ್ಟಕ್ಕೆ ತಾವೇ ಕೆಲಸ ಮಾಡಲು ಬಿಡಲಾಗದು. ತಮ್ಮ ಪ್ರಸ್ತುತ ನಂಬಿಕೆಗಳು ಹಾಗೂ ಕಲ್ಪನೆಗಳನ್ನು ಪರಿಶೀಲಿಸಲು ಸಹಾಯ ನೀಡದೆ ಇದ್ದರೆ ಶಿಕ್ಷಕ ಅಭ್ಯರ್ಥಿಗಳು ತಮ್ಮ ಸಾಂಪ್ರದಾಯಿಕ ನಂಬಿಕೆಗಳನ್ನು ಮುಂದುವರಿಸಿಕೊಂಡು ಹೋಗುವ ಮತ್ತು ತಮಗೆ ದೊರೆಯುವ ನೂತನ ಮಾಹಿತಿಯನ್ನೋ, ತಬ್ಬಿಬ್ಬುಗೊಳಿಸುವ ಅನುಭವಗಳನ್ನೋ ಹಳೆಯ ಚೌಕಟ್ಟುಗಳೊಳಗೆ ಅಳವಡಿಸಿಕೊಳ್ಳುವ ಸಾಧ್ಯತೆಗಳಿರುತ್ತವೆ'' ಎಂದಿದ್ದಾರೆ (ಪು. 255).

''ಮಗುವಿನ ಬೆಳವಣಿಗೆ ಹಾಗೂ ಕಲಿಕೆ'' ಎಂಬ ಒಂದು ವಿಷಯವಾಗಿ ನಾನು ಮಾಡಿದ ಪಾಠದ ಅನುಭವದಿಂದ ಇಲ್ಲಿ ವಿವರಿಸಿರುವ ಬೋಧನಾ ವಿಧಾನಗಳು ಹೊರಹೊಮ್ಮಿದ್ದು, ಇದರಲ್ಲಿ ಬಾಲ್ಯ, ಮಕ್ಕಳು, ಕಲಿಕೆ ಮತ್ತು ಬೋಧನೆಗಳ ವಿಚಾರವಾಗಿ ಇರುವ ಎಲ್ಲಾ ಪೂರ್ವಕಲ್ಪನೆಗಳಿಗೆ ಸವಾಲು ಒಡ್ಡಲು ಸರ್ವ ಪ್ರಯತ್ನವನ್ನೂ ಮಾಡಲಾಗಿದೆ.

**ವಾಚಿಕೆಗಳು ಮತ್ತು ಸಂವಾದಗಳ ಮೂಲಕ ಕಲ್ಪನೆಗಳಿಗೆ ಸವಾಲೊಡ್ಡುವುದು**

ಈ ಕೋರ್ಸುಗಳಿಗಾಗಿ ಮಾಡಿದ ಲೇಖನಗಳ ಆಯ್ಕೆಯು ವಿದ್ಯಾರ್ಥಿಗಳು ತಮ್ಮ ಪೂರ್ವಅನಿಸಿಕೆಗಳನ್ನು ಪರಿಶೀಲಿಸಲು ಸವಾಲೊಡ್ಡುವ ಒಂದು ಉತ್ತಮ ಆಕರವಾಗಿರುತ್ತವೆ. ಲೇಖನಗಳನ್ನು ಓದುವ ಹಂತದಲ್ಲಿ ಬಾಲ್ಯ, ಜಾತಿ, ಲಿಂಗ, ಅಸಮರ್ಥತೆ, ಬಡತನ ಇತ್ಯಾದಿಗಳ ಬಗ್ಗೆ ಚಿಂತನೆಗೆ, ಚರ್ಚೆಗೆ ಮತ್ತು ಪರ್ಯಾಯ ದೃಷ್ಟಿಕೋನಗಳನ್ನು ಪರಿಗಣಿಸುವುದಕ್ಕೆ ಅವಕಾಶಗಳನ್ನು ಕಲ್ಪಿಸಿಕೊಟ್ಟು ಅವರಿಗೆ ಬೆಂಬಲ ನೀಡಬೇಕಾದ ಅಗತ್ಯವಿದೆ. ಮೊದಲ ಕೆಲವು ತರಗತಿಗಳಲ್ಲಿ, 'ಯಾರನ್ನು ಮಗು ಎನ್ನಬಹುದು?' ಬಾಲ್ಯದ ಅರ್ಥವೇನು? ಅದೊಂದು ಏಕಾತ್ಮಕ ಪರಿಕಲ್ಪನೆಯೆ? ಎಲ್ಲ ಮಕ್ಕಳು ತಮ್ಮ ಬಾಲ್ಯವನ್ನು ಒಂದೇ ರೀತಿ ಅನುಭವಿಸುತ್ತಾರೆಯೆ? ಎಂಬುದರ ಬಗ್ಗೆಯೇ ನಮ್ಮೆಲ್ಲ ಗಮನವನ್ನು ಕೇಂದ್ರೀಕರಿಸಿ ಚರ್ಚೆಗಳು ನಡೆಯುತ್ತವೆ. ನಿರ್ದಿಷ್ಟವಾಗಿ ಬಡತನ, ಬಾಲ್ಯ ಮತ್ತು ಕಲಿಕೆಯ ವಿಚಾರಗಳನ್ನು ಒಳಗೊಂಡ ಚರ್ಚೆಯನ್ನು ನಾನು ಹಮ್ಮಿಕೊಳ್ಳುತ್ತೇನೆ.

ಬೀದಿಯಲ್ಲಿರುವ ಮಕ್ಕಳು, ಸಾಂಸ್ಥಿಕ ಗೃಹಗಳ, ಸಂಘರ್ಷದ ವಲಯಗಳ ಮತ್ತು ಗುಡ್ಡಗಾಡು ಪ್ರದೇಶಗಳ ಮಕ್ಕಳ ವಿಚಾರವಾಗಿ ಇರುವ ಬಹಳಷ್ಟು ಸಮಸ್ಯೆಗಳನ್ನು ಕುರಿತು ಚರ್ಚೆಗಳನ್ನು ನಡೆಸಲು ಬಡತನ ಎಂಬುವುದು ಒಂದು ಆಸರೆಗೋಲಷ್ಟೇ. ತಮ್ಮ ಬಾಲ್ಯದ ದಿನಗಳನ್ನು ನೆನಪಿಸುವಂತೆಯೂ, ಅಲ್ಲಿನ ಯಾವ ಅಂಶಗಳು ತಮ್ಮ ಕಲಿಕೆಯನ್ನು ರೂಪಿಸಿದವು ಎಂಬುದರ ಬಗ್ಗೆ ಚಿಂತನೆ ನಡೆಸುವಂತೆಯೂ ತಿಳಿಸುವ ಒಂದು ಕಾಲಕ್ರಮಾನುಗತವಾದ (time-line) ಚಟುವಟಿಕೆಯಲ್ಲಿ ವಿದ್ಯಾರ್ಥಿಗಳು ಪಾಲ್ಗೊಳ್ಳುತ್ತಾರೆ.

ವಿದ್ಯಾರ್ಥಿಗಳಿಗೆ ಓದಲು, ಸುಖದೇವ್ ಥೋರಟ್ ಅವರ, Passage to Adulthood, ಶಾರದಾ ಗೋಪಾಲನ್ ಅವರ ಬಾಲಕಾರ್ಮಿಕ ಸಮಸ್ಯೆಯ ಕುರಿತ Remembering Childhood, ಸಿಂಗ್ ಮತ್ತು ಘಾಯ್ ಅವರ ಲೇಖನ Notions of Self: Lived Realities of Children with Disabilities ನಂತಹ ಪೂರ್ಣ ಲೇಖನಗಳನ್ನೋ ಅಥವಾ ಉದ್ಧೃತ ಭಾಗಗಳನ್ನೋ ನೀಡಲಾಗುತ್ತದೆ. ಸಂಘರ್ಷದ ವಲಯದಲ್ಲಿ ಸಿಲುಕಿರುವ ಪೋಷಕಾಂಶ ಕೊರತೆಯಿಂದ ನರಳುತ್ತಿರುವ ಹಾಗೂ ಬೀದಿಯಲ್ಲಿ ಬೆಳೆಯುವ ಮಕ್ಕಳ ಕುರಿತ ನಿರೂಪಣೆಗಳನ್ನು ವಿದ್ಯಾರ್ಥಿಗಳೊಂದಿಗೆ ಹಂಚಿಕೊಳ್ಳಲಾಗುತ್ತದೆ.

ಈ ನಿರೂಪಣೆಗಳು ಮುದ್ರಿತ ಲೇಖನಗಳ ರೂಪದಲ್ಲೇ ಇರಬೇಕೆಂದೇನೂ ಇಲ್ಲ, ವಿದ್ಯಾರ್ಥಿಗಳು ವಿವಿಧ ಸನ್ನಿವೇಶಗಳಲ್ಲಿನ ಮಕ್ಕಳ ಬಗ್ಗೆ ವಿಡಿಯೋಗಳನ್ನು ನೋಡುತ್ತಾರೆ. ಈ ಲೇಖನಗಳನ್ನು ಓದಿರುವ ವಿದ್ಯಾರ್ಥಿಗಳ ಒಂದು ತಂಡವನ್ನು ಮಾಡಿ, ಅರ್ಥಪೂರ್ಣ ಸಂವಾದಕ್ಕೆ ಎಡೆಮಾಡುವ ನಿರ್ಣಾಯಕ ಪ್ರಶ್ನೆಗಳನ್ನು ಚರ್ಚೆಗಾಗಿ ಅವರಿಗೆ ನೀಡಲಾಗುತ್ತದೆ. ಅವು ತಕ್ಕಮಟ್ಟಿಗೆ ಸಂವಾದಗಳನ್ನು ನಿರ್ದೇಶಿಸಿದರೂ ಕೂಡಾ, ಸ್ವತಂತ್ರಚರ್ಚೆಗೆ ಸಾಕಷ್ಟು ಅವಕಾಶವನ್ನೂ ನೀಡುತ್ತವೆ. ಉದಾಹರಣೆಗೆ, ಕೆಲವು ಪ್ರಶ್ನೆಗಳು ಹೀಗಿರುತ್ತವೆ:

ನಮ್ಮ ಸಮಾಜವು ಅಸಮರ್ಥತೆ ಇರುವ ಮಕ್ಕಳನ್ನು / ಬಾಲ ಕಾರ್ಮಿಕರನ್ನು ಹೇಗೆ ಅರ್ಥಮಾಡಿಕೊಳ್ಳುತ್ತದೆ / ಬಿಂಬಿಸುತ್ತದೆ? ಈ ರೀತಿ ಅರ್ಥಮಾಡಿಕೊಳ್ಳುವುದರ ಪರಿಣಾಮ ಏನು? ಈ ಮಕ್ಕಳ ಜೀವನದಲ್ಲಿ ಶಿಕ್ಷಣಕ್ಕೆ ಯಾವ ಸ್ಥಾನವಿದೆ? ಅವರ ಬಾಲ್ಯವನ್ನು ರೂಪಿಸಲು ಪರ್ಯಾಯ ವಿಧಾನಗಳಿವೆಯೇ?

ಒಡಗೂಡಿ (Collaborative) ಸಂವಾದ ನಡೆಸಿದ ಬಳಿಕ ಸಾಮೂಹಿಕ ಪ್ರಕ್ರಿಯೆಯನ್ನು ನಡೆಸಲಾಗುತ್ತದೆ. ಇಲ್ಲಿ ಸಂಪೂರ್ಣ ತರಗತಿಯನ್ನು ಒಟ್ಟಿಗೆ ಸೇರಿಸಿ ತಾವು ಓದಿದ್ದನ್ನು ಸಾರಾಂಶ ರೂಪದಲ್ಲಿ ಹೇಳುವಂತೆಯೂ, ಪ್ರತಿ ತಂಡದಲ್ಲೂ ನಡೆದ ಚರ್ಚೆಗಳನ್ನು ಹಂಚಿಕೊಳ್ಳುವಂತೆಯೂ ಕೇಳಲಾಗುತ್ತದೆ; ಕೆಲವೊಮ್ಮೆ ವೈಯಕ್ತಿಕವಾಗಿಯೂ ತಮ್ಮ ಅನಿಸಿಕೆಗಳನ್ನು ಬರೆದು ಕೊಡಲು ಹೇಳಲಾಗುತ್ತದೆ. ಓದುವಿಕೆಯ ಜೊತೆಗೆ ತರಗತಿಯ ಒಳಗಿನ ಸಂವಾದಗಳು ವಿದ್ಯಾರ್ಥಿಗಳಲ್ಲಿ ಸ್ವ–ಅರಿವು ಮೂಡಿಸುವ ಒಂದು ಅತಿ ಶಕ್ತಿಶಾಲಿ ಮಾಧ್ಯಮವಾಗಿ ಕೆಲಸಮಾಡಿ, ಸಮಾಜದ ನಿರ್ಲಕ್ಷಿತ ವರ್ಗಗಳಿಂದ ಬರುವ ಮಕ್ಕಳ ಹಿನ್ನೆಲೆಗಳನ್ನು ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳಲು ನೆರವಾಗುತ್ತವೆ.

ವಿದ್ಯಾರ್ಥಿ ಶಿಕ್ಷಕರಿಗೆ ಲಿಂಗ, ಜಾತಿ, ವರ್ಗ, ಭಾಷಾ ವೈವಿಧ್ಯ, ಅಸಮರ್ಥತೆ ಹಾಗೂ ನಿಷ್ಪಕ್ಷಪಾತ ಮತ್ತು ನ್ಯಾಯಗಳಿಗೆ ಸಂಬಂಧ ಪಟ್ಟಂತೆ ಸಮಾಜದಲ್ಲಿ ತಮಗಿರುವ ಸ್ಥಾನಮಾನಗಳ ಬಗ್ಗೆ ಚಿಂತನೆ ನಡೆಸಲು ಉತ್ತೇಜಿಸಲಾಗುತ್ತದೆ. ಇಂತಹ ಸಾಮೂಹಿಕ ಚರ್ಚೆಗಳಲ್ಲಿ ವಿಶಾಲ ಸಾಮಾಜಿಕ ಪ್ರಕ್ರಿಯೆ, ಮಾರುಕಟ್ಟೆ ವಿದ್ಯಮಾನ, ರಾಜಕೀಯ, ಮಾನವ ಹಕ್ಕುಗಳ ಉಲ್ಲಂಘನೆ, ವಿಭಿನ್ನ ನೈತಿಕ ನಿಲುವುಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಉದ್ಭವಿಸುವುದು ಅನಿವಾರ್ಯ. ವಿದ್ಯಾರ್ಥಿಗಳಿಂದ ಬರುವ ಪ್ರತಿಕ್ರಿಯೆಗಳ ವೈವಿಧ್ಯ, ಅವರು ತಳೆಯುವ ಪರ್ಯಾಯ ದೃಷ್ಟಿಕೋನಗಳು ಶಿಕ್ಷಕ ಶಿಕ್ಷಕರ ಸ್ವಂತ ಅನುಭವವನ್ನು ಗಟ್ಟಿಮಾಡುವುದಲ್ಲದೇ ಅವರ ಬೋಧನಾ

ವಿಧಾನಕ್ಕೆ ವಿಶೇಷ ದಕ್ಷತೆಯನ್ನು ಒದಗಿಸುತ್ತದೆ. ತಮ್ಮಲ್ಲಿ ಒಡಮೂಡುವ ಅನೇಕ ಪ್ರಶ್ನೆಗಳಿಗೆ ನೇರ ಉತ್ತರಗಳಿರುವುದಿಲ್ಲ ಎಂಬುದನ್ನು ವಿದ್ಯಾರ್ಥಿಗಳು ಮನಗಾಣುತ್ತಾರೆ. ಅವರು ಇನ್ನೂ ಕಷ್ಟಪಟ್ಟು ಅಧ್ಯಯನ ಮಾಡಿ, ಬಾಲ್ಯವೆಂದರೆ ಏನು ಎಂಬ ವಿಚಾರದ ಬಗ್ಗೆ ಆಳವಾಗಿ ಚಿಂತಿಸಬೇಕಾಗುತ್ತದೆ.

**ಕ್ಷೇತ್ರಾನುಭವಗಳ ಮೂಲಕ ಪೂರ್ವಕಲ್ಪನೆಗಳಿಗೆ ಸವಾಲೊಡ್ಡುವುದು**

ಶಿಕ್ಷಣದ ಸ್ನಾತಕೋತ್ತರ ಪದವಿ ಕಾರ್ಯಕ್ರಮವು "ಮಗುವಿನ ಬೆಳವಣಿಗೆ ಮತ್ತು ಕಲಿಕೆ ವಿಷಯವಾಗಿ ಕೋರ್ಸ್ ಒಂದನ್ನು ನೀಡುತ್ತಿದ್ದು, ಅದರಲ್ಲಿ ಪ್ರಾಯೋಗಿಕ ಅನುಭವದ ಅಂಗವಾಗಿ ವಿದ್ಯಾರ್ಥಿಗಳು ಅನಾಥಾಲಯಗಳಿಗೆ, ಅಸಮರ್ಥರ ಕೇಂದ್ರಗಳಿಗೆ, ಬಾಲಾಪರಾಧಿಗಳ ಕೇಂದ್ರಗಳಿಗೆ, ನಗರಗಳ ಕೊಳೆಗೇರಿಗಳಿಗೆ ಮತ್ತು ಇದೇ ರೀತಿಯ ಇತರ ಕೇಂದ್ರಗಳಿಗೆ ಭೇಟಿ ನೀಡುತ್ತಾರೆ. ಇಂತಹ ಕೇಂದ್ರಗಳಲ್ಲಿ ಕಂಡುಬರುವ ಬಹುತೇಕ ಮಕ್ಕಳು ಸಮಾಜದ ನಿರ್ಲಕ್ಷಿತ ವರ್ಗಗಳಿಂದ ಬಂದವರಾಗಿದ್ದು, ಅವರು ತಮ್ಮ ಕುಟುಂಬಗಳಲ್ಲಿ ಶಾಲೆಗೆ ಹೋಗುತ್ತಿರುವ ಮೊದಲನೇ ಪೀಳಿಗೆಯ ಮಕ್ಕಳಾಗಿರುವ ಸಾಧ್ಯತೆಯೇ ಹೆಚ್ಚಾಗಿರುತ್ತದೆ. ವಿದ್ಯಾರ್ಥಿಗಳು ಈ ಮಕ್ಕಳೊಂದಿಗೆ ಆಟ ಆಡುವುದು, ಅವರೊಡನೆ ಸಂವಾದಿಸುವುದು ಇವೇ ಮೊದಲಾದ ಚಟುವಟಿಕೆಗಳನ್ನು ಮಾಡುತ್ತಾರೆ. ಅವರ ದೈನಂದಿನ ಜೀವನವನ್ನು, ದಿನನಿತ್ಯದ ಕಾರ್ಯಕಲಾಪವನ್ನು, ಊಟದ ಅಭ್ಯಾಸಗಳನ್ನು, ಆಟಗಳನ್ನು, ಶಾಲಾಕಲಿಕೆಯಲ್ಲಿ ಅವರಿಗಿರುವ ಆಸಕ್ತಿಯನ್ನು ಕುರಿತು ಅರಿಯುತ್ತಾರೆ. ವಿದ್ಯಾರ್ಥಿಗಳು ಈ ವೀಕ್ಷಣೆಗಳನ್ನು ವಿಶ್ಲೇಷಿಸುವ ಮೂಲಕ ಮಗುವಿನ ಬೆಳವಣಿಗೆಯನ್ನು ಅರಿಯುತ್ತಾರೆ ಮತ್ತು ಈ ಅವಲೋಕನವನ್ನು ವಿಶ್ಲೇಷಿಸುತ್ತಾ ಸಿದ್ಧಾಂತಗಳನ್ನು ಕಲಿಯುತ್ತಾರೆ.

ಬಡತನದ ಸಮಾಜೋ-ಆರ್ಥಿಕ ಸನ್ನಿವೇಶದಲ್ಲಿ ಬದುಕುವ ಮಕ್ಕಳ "ಧ್ವನಿ"ಗಳನ್ನು ಕೇಳುವುದು ಮಕ್ಕಳು ಮತ್ತು ಬಾಲ್ಯದ ಬಗ್ಗೆ ಅವರು ಬಹಳ ಕಾಲದಿಂದ ಇಟ್ಟುಕೊಂಡು ಬಂದಿದ್ದ ನಂಬಿಕೆಗಳಿಗೆ ಸವಾಲನ್ನು ಒಡ್ಡುತ್ತದೆ. ಅವರು ಅಂತರಂಗ ಶೋಧನೆ ಮತ್ತು ವೈಚಾರಿಕ ಚಿಂತನೆಯಲ್ಲಿ ತೊಡಗುತ್ತಾರೆ. ಈ ಹೊಸ ಅರಿವಿನ ಮತ್ತು ಅವರ ಭಾವನಾತ್ಮಕ ತೊಳಲಾಟವು ಸಮ್ಮತಿ, ಅಸಮ್ಮತಿ ಹಾಗು ಆಂತರಿಕ ಒತ್ತಡಗಳಿಗೆ ಎಡೆ ಮಾಡಿಕೊಡುತ್ತದೆ.

ವಿದ್ಯಾರ್ಥಿಗಳು ತಮ್ಮ ನಂಬಿಕೆಗಳನ್ನು, ತರ್ಕರಹಿತವಾಗಿ ರೂಢಿಯಾದ ವಾದಗಳನ್ನು ತಡೆಹಿಡಿದು, ಇತರರ ದೃಷ್ಟಿಕೋನಗಳನ್ನು ಪರಿಗಣಿಸುವ ಅಗತ್ಯವನ್ನು ಮನಗಾಣುತ್ತಾರೆ. ಈ ಸಂವಾದಗಳು ಅಸ್ತಿತ್ವದಲ್ಲಿರುವ ದೃಷ್ಟಿಕೋನಗಳನ್ನು ತಮ್ಮ ಅನುಭವಗಳ ಬೆಳಕಿನಲ್ಲಿ ನೋಡುವ ಮತ್ತು ಅನುಭವಗಳನ್ನು ಪರಿಷ್ಕರಿಸುವ, ಹೆಚ್ಚು ದಕ್ಷವಾಗಿಸುವ ಅಥವಾ ಪರಿಶೀಲಿಸುವ ಮತ್ತು ಪುನಾರಚಿಸುವ ಪ್ರಕ್ರಿಯೆಗಳ ಮೂಲಕ ಮತ್ತೆ ಪರಿಗಣಿಸುವುದನ್ನು /ಪ್ರಶ್ನಿಸುವುದನ್ನು ಸುಗಮಗೊಳಿಸುತ್ತವೆ. ಇದರಿಂದ ಅವು ನೂತನ ಜ್ಞಾನದ ಮತ್ತು ವಿಭಿನ್ನ ಪರಿಕಲ್ಪನೆಗಳ ಹುಟ್ಟಿಗೆ ಕಾರಣವಾಗುತ್ತವೆ. ಬಹಳಷ್ಟು ಬಾರಿ, ಅವರು ಚಿಂತನಶೀಲ ಲೇಖನಗಳನ್ನು ಬರೆಯುತ್ತಾರೆ. ಓರ್ವ ವಿದ್ಯಾರ್ಥಿ, "ಅನಾಥಾಲಯಗಳಲ್ಲಿನ ಮಕ್ಕಳ ಮುಖದ ಮೇಲೆ ದುಮ್ಮಾನ ಮನೆಮಾಡಿರುತ್ತದೆ ಎಂದುಕೊಂಡಿದ್ದೆ. ಆದರೆ ಅವರು ಹಾಗಿರಲಿಲ್ಲ. ಅವರೆಲ್ಲಾ ಬಹಳ ಗೆಲುವಿನಿಂದಿದ್ದು, ಅವರು ನನ್ನಲ್ಲಿ ಹಲವು ಪ್ರಶ್ನೆಗಳನ್ನು ಕೇಳಿದರು. ಆ ಪ್ರಶ್ನೆಗಳಿಗೆ ನನ್ನ ಬಳಿ ಉತ್ತರವಿರಲಿಲ್ಲ" ಎಂದು ಬರೆದುಕೊಂಡಿದ್ದಾನೆ.

ಹೀಗೆ ಬಡ ಮಕ್ಕಳ ಸ್ಥಿತಿಗತಿಗಳು ಅವರ ವೈಯಕ್ತಿಕ ಗುಣಲಕ್ಷಣ-ಗಳಿಂದಾಗಲೀ, ಅವರ ಪೋಷಕರ ಅಜ್ಞಾನ ಅಥವಾ ಸಂತೃಪ್ತ ಭಾವನೆಯಿಂದಾಗಲೀ ರೂಪಿತವಾಗಿರುವುದಿಲ್ಲ ಎಂಬುದನ್ನು ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳುತ್ತಾರೆ. ಬೇರೊಂದು ರೀತಿಯಲ್ಲಿ ಹೇಳುವುದಾದರೆ, ವಿದ್ಯಾರ್ಥಿಗಳು ಶೋಷಿತ ವರ್ಗಗಳಿಂದ ಬರುವ ಈ ಮಕ್ಕಳ ಬಗ್ಗೆ ಸಮಾಜವು ಸಾಮಾನ್ಯವಾಗಿ ತಳೆಯುವ ಧೋರಣೆಯನ್ನು ಪ್ರಶ್ನಿಸುವಂತಾಗುತ್ತದೆ. ಬಾಲ್ಯವೆಂಬುದು ಕೇವಲ ಜೀವಶಾಸ್ತ್ರೀಯವಾಗಿ ರೂಪಿತವಾಗುವುದಲ್ಲ, ಅದು ಸಾಮಾಜಿಕ ಪರಿಸ್ಥಿತಿಯಿಂದಲೂ ರೂಪಿತವಾಗುವಂತಹುದು ಎಂಬುದನ್ನು ಅರಿಯುತ್ತಾರೆ.

ಸಮಾಜೋ-ಸಾಂಸ್ಕೃತಿಕ ಪದ್ಧತಿಗಳಿಂದ ಹಾಗೂ ಆರ್ಥಿಕ ಮುಗ್ಗಟ್ಟಿನಿಂದ ಅಡೆತಡೆ ಎದುರಿಸುತ್ತಿರುವ, ತಮ್ಮ ಕುಟುಂಬದಲ್ಲಿ ತಾವೇ ಮೊದಲು ಶಾಲೆಗೆ ಹೋಗುತ್ತಿರುವ ಅನೇಕ ಮಕ್ಕಳಿಗೆ ಅವರ ಶಾಲೆಯಲ್ಲಿ 'ಎಲ್ಲಾ ಮಕ್ಕಳೂ ಕಲಿಯುವ ಸಾಮರ್ಥ್ಯ ಹೊಂದಿರುತ್ತಾರೆ' ಎಂದು ದೃಢವಾಗಿ ನಂಬಿರುವ, ಅವರ ಬಗ್ಗೆ ಕಾಳಜಿ ತೋರುವ ಮತ್ತು ಅವರಿಗೆ ಬೆಂಬಲವಾಗಿ ನಿಲ್ಲುವ ವಯಸ್ಕರ ಅಗತ್ಯವಿರುತ್ತದೆ. ಶಾಲೆ, ಪಠ್ಯಕ್ರಮ, ಬೋಧನಾ ವಿಧಾನ ಹಾಗೂ ಮೌಲ್ಯ-ಮಾಪನಗಳನ್ನು ಸಂಘಟಿಸುವ ಮುಖ್ಯ ತತ್ತ್ವಗಳಲ್ಲಿ ಸಮನ್ವಯ ಶಿಕ್ಷಣ ಪರಿಕಲ್ಪನೆಯೂ ಒಂದು ಎಂಬುದನ್ನು "ಶಿಕ್ಷಕರ ತಯಾರಿ ಕಾರ್ಯಕ್ರಮ"ಗಳಲ್ಲಿ ಮುನ್ನೆಲೆಗೆ ತರಬೇಕಾದ ಅಗತ್ಯವಿದೆ. ಅವರ ಪಠ್ಯಕ್ರಮದಲ್ಲಿ ಓದಲು, ತರಗತಿಗಳಲ್ಲಿ ಚರ್ಚಿಸಲು ಹಾಗೂ ವಾಸ್ತವ ಅನುಭವಗಳನ್ನು ಪಡೆಯಲು ಸುದೀರ್ಘ ಅವಕಾಶಗಳನ್ನು ಕಲ್ಪಿಸಿ-ಕೊಡಬೇಕಾದ ಅಗತ್ಯವಿದೆ. ವಿದ್ಯಾರ್ಥಿಗಳು ಕ್ಷೇತ್ರ, ಪಠ್ಯ ಹಾಗೂ ತಮ್ಮ ನಡುವೆ ಸಂಬಂಧಗಳನ್ನು ಹೊಸೆಯಲು ದಾರಿತೋರಬಲ್ಲ ಬೋಧನಾ ಆಚರಣೆಗಳು ವಿದ್ಯಾರ್ಥಿಗಳಿಗೆ ಬಾಲ್ಯ, ಬೋಧನೆ ಮತ್ತು ಕಲಿಕೆಯ ಬಗ್ಗೆ ತಮ್ಮಲ್ಲಿರುವ ಅನಿಸಿಕೆ ಹಾಗೂ ಪೂರ್ವಕಲ್ಪನೆಗಳು ಸ್ವಯಂ ಜ್ಞಾನೋದಯದ ಹಂತಕ್ಕೆ ಏರುವಂತೆ ಮಾಡುವುದಷ್ಟೇ ಅಲ್ಲದೆ, ಅವರು ಸಮನ್ವಯ ಶಾಲಾ ವಾತಾವರಣ ಮತ್ತು ತರಗತಿ ಆಚರಣೆಗಳನ್ನು ಕಲ್ಪಿಸಿಕೊಳ್ಳಲು ನೆರವಾಗುತ್ತದೆ.

ಸುಮಾರು ಒಂದು ಶತಮಾನಕ್ಕೂ ಹಿಂದೆ ಜಾನ್ ಡೇವಿ ಅವರು "ಶಿಕ್ಷಣದಲ್ಲಿ ಸಿದ್ಧಾಂತಕ್ಕೂ ಆಚರಣೆಗೂ ಇರುವ ಸಂಬಂಧ" (The Relation of Theory to Practice in Education) ಎಂಬ ಪ್ರಬಂಧ ಬರೆದಿದ್ದಾರೆ. ಅದರಲ್ಲಿ ಅವರು ವಿದ್ಯಾರ್ಥಿಗಳು ಮತ್ತು ಅವರ ಚಿಂತನಕ್ರಮದ ಬಗ್ಗೆ ಶಿಕ್ಷಕರಲ್ಲಿ ಬೆಳೆಯುತ್ತಾ ಹೋಗುವ ಜ್ಞಾನದ ಕುರಿತು ತನ್ನ ಗಮನವನ್ನು ವಿಸ್ತೃತವಾಗಿ ಕೇಂದ್ರೀಕರಿಸಿದ್ದಾರೆ. ಇದನ್ನು ಅವರು "ಆತ್ಮಕ್ರಿಯೆಯೆಡೆಗಿನ ಒಳನೋಟ"ವೆಂದು ವರ್ಣಿಸಿ, ಶಿಕ್ಷಕರು ತಮ್ಮ ವಿದ್ಯಾರ್ಥಿಗಳ ಆಲೋಚನೆ, ಸ್ಪಂದನೆಗಳಿಗೆ ಶ್ರುತಿಗೊಂಡು, "ತಾನು ಇರುವ ರೀತಿ, ತನ್ನ ನಡೆ, ನುಡಿಗಳು ವಿದ್ಯಾರ್ಥಿಗಳ ನಡುವೆ ಯಾವ ಮನೋಧರ್ಮ ಮತ್ತು ಅಭ್ಯಾಸಗಳನ್ನು ಪೋಷಿಸುತ್ತವೆ ಅಥವಾ ನಿರುತ್ಸಾಹಗೊಳಿಸುತ್ತವೆ ಎಂಬುದನ್ನು ಗುರುತಿಸುವ ಸಾಮರ್ಥ್ಯ" ಎನ್ನುತ್ತಾರೆ.

ಮಕ್ಕಳನ್ನು ಅರಿಯುವ ಯಾವ ವಿಚಾರಗಳನ್ನು ಡೇವಿ ಪ್ರತಿಪಾದಿಸುತ್ತಾರೋ ಅವುಗಳೊಂದಿಗೆ ಹೊಂದಾಣಿಕೆಯಾಗುವ ರೀತಿಗಳಲ್ಲಿ ಶಿಕ್ಷಕರ ಪ್ರಶಿಕ್ಷಕರು ತಮ್ಮ ವಿದ್ಯಾರ್ಥಿಗಳೊಂದಿಗೆ

ಒಡನಾಡಲು ಪ್ರಯತ್ನಿಸಬಲ್ಲರೇ? ಎಂದು ಕೇಳುವುದು ಇಲ್ಲಿ ಪ್ರಸ್ತುತವಾಗಬಹುದು. ಸಮನ್ವಯ ಸಮಾಜಕ್ಕಾಗಿ ಸಕ್ಷಮರಾದ, ಕಾಳಜಿ ತೋರುವ ಶಿಕ್ಷಕರನ್ನು ತಯಾರುಮಾಡಲು ನಾವು ಡೇವಿಯ ಸಲಹೆಗಳನ್ನು ಪರಿಗಣಿಸಬೇಕಿದ್ದು, ನಮ್ಮ ಬೋಧನಾ ಆಚರಣೆಗಳ ಮೂಲಕ ಆತ್ಮಕ್ರಿಯೆಗೆ ತೊಡಗಬೇಕಾಗಿದೆ.

**ಉಲ್ಲೇಖಗಳು**


Azim Premji University (2019).

https://practiceconnect.azimpremjiuniversity.edu.in/category/practice-insights/teachers-for-inclusive-society/

Batra (2015) Quality of Education and the Poor: Constraints on Learning. TRG Poverty and Education. Working paper series. (p1-14) Max Weber Stiffing

Feiman-Nemser, S., & Buchmann, M. (1986). The first year of teacher preparation: Transition to pedagogical thinking? Journal of Curriculum Studies, 18(3), 239-256.

Giridhar, S (2020). Ordinary People, Extraordinary teachers: The heroes of real India. Westland Publications Private Company: Chennai





**ರಾಜಶ್ರೀ ಶ್ರೀನಿವಾಸನ್** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. 'ಶಿಕ್ಷಕರ ಶಿಕ್ಷಣ ಮತ್ತು ಮಗುವಿನ ಬೆಳವಣಿಗೆ ಅವರ' ಆಸಕ್ತಿಯ ಕ್ಷೇತ್ರಗಳಾಗಿವೆ. ಅವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: rajashree@apu.edu.in

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ವ್ಯಾಪಕ ಸಾಕ್ಷರ ಯೋಜನೆಯ ಅತ್ಯಗತ್ಯ ಆಧಾರ ಸ್ತಂಭಗಳು

ಶಕ್ತಿಬ್ರತಾ ಸೇನ್ ಮತ್ತು ನಿಧಿ ವಿನಾಯಕ್

**ಅಕ್ಷರಜ್ಞಾನದ ಮೂರು ಸ್ತಂಭಗಳು**

ವಾಚಿಕ, ಕಾಗುಣಿತದ ಪರಿಣತಿ[1] ಮತ್ತು ವೈವಿಧ್ಯಮಯ ಬರಹಗಳಿಗೆ ತೆರೆದುಕೊಳ್ಳುವುದು – ಇವೆಲ್ಲವೂ ಸೇರಿ ಮಕ್ಕಳಿಗೆ ವ್ಯಾಪಕ ಅಕ್ಷರಜ್ಞಾನದ ಅನುಭವವನ್ನು ನೀಡುತ್ತವೆ. ಈ ಮೂರು ಸ್ತಂಭಗಳು ಒಂದರ ನಂತರ ಒಂದು ಬರುವುದು ಇಲ್ಲವೇ ಒಂದೊಂದೇ ಕಾರಣಕರ್ತವೂ ಅಲ್ಲ. ನಿಜವಾಗಿ ನೋಡಿದರೆ ಅವುಗಳು ಒಂದರೊಳಗೊಂದು ಸುರುಳಿಯಾಗಿ ಬೆಸೆದುಕೊಂಡಿದ್ದು ಓದಲು ಆರಂಭಿಸಿದಾಗ ಮತ್ತು ಈ ಎಲ್ಲವನ್ನೂ ಒಟ್ಟಿಗೆ ಅನುಭವಿಸಿದಾಗ ಮಾತ್ರ ಅವರು ಪ್ರೇರಿತರೂ, ತಾವೇ ಸ್ವತಂತ್ರವಾಗಿ ಓದಲು ಶಕ್ಯರೂ ಆಗುತ್ತಾರೆ.

ಓದಲು ಕಲಿಯುವ ಮಗುವಿನ ಪ್ರಯತ್ನದಲ್ಲಿ ಭಾಷೆಗಳು ಪ್ರಮುಖ ಪಾತ್ರ ವಹಿಸುತ್ತವೆ ಹಾಗೂ ಅದು ಮಗುವು ಅರ್ಥಗಳನ್ನು ಕಟ್ಟಿಕೊಳ್ಳಲು, ಜಗತ್ತಿನ ಬಗ್ಗೆ ತಿಳಿದುಕೊಳ್ಳಲು ಮತ್ತು ಬದುಕಿನ ಅನುಭವಗಳ ಜೊತೆ ಹೊಂದಿಕೊಳ್ಳಲು ಸಹಾಯ ಮಾಡುತ್ತದೆ. ಮಗುವಿಗೆ ಭಾಷೆಯು ಚಿಂತನೆಗೆ ದಾರಿಯಾಗುವುದರಿಂದ ಅಕ್ಷರಜ್ಞಾನಕ್ಕೆ ವಾಚಿಕತೆಯು ಒಂದು ಪೂರ್ವಾಪೇಕ್ಷಿತ ಸಾಮಗ್ರಿಯಾಗುತ್ತದೆ.

ಇದರೊಟ್ಟಿಗೆ ನಾವು **ಭಾರತದ ಬಹುಭಾಷೆಯ ವಾಸ್ತವತೆಯನ್ನೂ** (India's multilingual reality) ಅರಿತು ಒಪ್ಪಿಕೊಳ್ಳಬೇಕಿದೆ. ಪ್ರತಿಯೊಬ್ಬ ಭಾರತೀಯನು ಮೌಖಿಕ ಉಕ್ತಿಗಳ ಪ್ರಪಂಚದಲ್ಲಿ ಬಹುಭಾಷಿಕನೇ ಆಗಿರುತ್ತಾನೆ. ಬಹುತೇಕ ಮಕ್ಕಳು, ಅವರು ಬೆಳೆದು ಸುತ್ತಲಿನ ಪ್ರಪಂಚದೊಡನೆ ಸಂವಹನ ನಡೆಸುತ್ತಿರುವಾಗ, ಒಂದಲ್ಲಾ ಒಂದು ರೀತಿಯಲ್ಲಿ ವಿಶಿಷ್ಟ ಭಾಷಿಕ ಪ್ರವಾಹಕ್ಕೆ ತೆರೆದುಕೊಳ್ಳುತ್ತಾರೆ. ಮಕ್ಕಳಿಗೆ ಅಕ್ಷರಜ್ಞಾನದ ಭದ್ರಬುನಾದಿಯನ್ನು ನಿರ್ಮಿಸುವ ಸಲುವಾಗಿ ತರಗತಿಗಳಲ್ಲಿ ಮಕ್ಕಳ ಭಾಷೆ ಮತ್ತು ಮಾತುಗಳಿಗೆ ಸಾಕಷ್ಟು ಮುಕ್ತ ಅವಕಾಶವನ್ನು ಸೃಷ್ಟಿಸಬೇಕಾಗುತ್ತದೆ. ಮೌಖಿಕ ಭಾಷೆಯ ಬೆಳವಣಿಗೆ ಮತ್ತು ಕಾಗುಣಿತದ ಅರಿವು ಬೆಳೆಯಲು ಇರುವ ಅವಕಾಶಗಳೊಡನೆ, ವಿಭಿನ್ನ ಅರ್ಥಪೂರ್ಣ ಪಠ್ಯಗಳಿಗೂ ಮಕ್ಕಳು ತೆರೆದುಕೊಳ್ಳುವುದು ಕೂಡಾ ಮುಖ್ಯ. ಮಿಠಾಯಿ ಮೇಲಿನ ಗೋಡಂಬಿಯಂತೆ ಪುಸ್ತಕಗಳೆಂದರೆ 'ಇದ್ದರೆ ಉತ್ತಮ' ಎಂಬ ರೀತಿ ನೋಡಲಾಗುತ್ತದೆಯೇ ಹೊರತು ಸಂಪೂರ್ಣ ಅಕ್ಷರಜ್ಞಾನದ ಅನುಭವಕ್ಕೆ ಇದು 'ಇರಲೇ ಬೇಕಾದದ್ದು' ಎಂಬಂತೆ ನೋಡದಿರುವುದು ಬೇಸರದ ಸಂಗತಿ. ಕೇವಲ ಆಳವಾದ ಅರ್ಥಗ್ರಹಿಕೆಯ ಕಲಿಕೆಗಷ್ಟೇ ಅಲ್ಲದೇ ಸುಲಲಿತ ಓದನ್ನು ಕಲಿಯಲೂ ಕೂಡ ಹಲವಾರು ರೀತಿಯ ಪುಸ್ತಕಗಳಿಗೆ ಒಡ್ಡಿಕೊಳ್ಳುವುದು ಅತ್ಯಗತ್ಯ.

**ತರಗತಿಯ ಅಭ್ಯಾಸಗಳಲ್ಲಿ ಅಕ್ಷರಜ್ಞಾನದ ಮೂರು ಆಧಾರಸ್ತಂಭಗಳು**

ಅಕ್ಷರಜ್ಞಾನದ ಈ ಮೂರು ಆಧಾರಸ್ತಂಭಗಳನ್ನು ಸರಿಯಾಗಿ ಅರಿತುಕೊಳ್ಳಬೇಕು, ಪುನರ್ ರಚಿಸಬೇಕಿದ್ದು, ತರಗತಿ ಕೊಠಡಿಗೂ ಇವನ್ನು ಕೊಂಡೊಯ್ಯಬೇಕು. ಹೀಗೆ ಮಾಡಲು ಅಗತ್ಯವಾದ ಕೆಲವು ಹಂತಗಳು ಈ ಕೆಳಕಂಡಂತಿವೆ.

**ಮೌಖಿಕ ಭಾಷೆಯ ಪರಿಣಾಮಕಾರಿ ವ್ಯಾಯಾಮಗಳು:**

ಇವು ಮಕ್ಕಳನ್ನು ತಾರ್ಕಿಕವಾಗಿ ಚಿಂತಿಸುವಂತೆ ಹಾಗೂ ತಾವು ತರಗತಿಯೊಳಗೆ ಬರುವಾಗ ಹೊತ್ತು ತರುವ ತಮ್ಮ ಮಾತಿನ ಭಂಡಾರವನ್ನು ಬೆಳೆಸಿಕೊಳ್ಳುವಂತೆ ಸಹಾಯಮಾಡುತ್ತದೆ. ತಮ್ಮ ಸ್ಥಳೀಯ ಭಾಷೆ ಮತ್ತು ಶಾಲೆಯಲ್ಲಿನ ಭಾಷೆಗಳ ನಡುವಿನ ತಡೆಯನ್ನು ದಾಟಲು ಅವರಿಗೆ ಸಹಾಯಮಾಡುತ್ತದೆ.

**ಒಂದು ಕಥೆಯ ಸುತ್ತ ಚರ್ಚೆ**: ಒಂದು ಕಥೆಯನ್ನು ಓದುವ ಮುನ್ನ, ಓದುತ್ತಿರುವಾಗ ಹಾಗೂ ಓದಿದ ನಂತರ ಈ ಮೂರು ಹಂತಗಳಲ್ಲಿ ಕಥೆಯೊಡನೆ ತೊಡಗಿಕೊಳ್ಳುವಂತೆ ಮಕ್ಕಳನ್ನು ಉತ್ತೇಜಿಸಬೇಕು. ಕಥೆಯನ್ನು ಓದುವ ಮುನ್ನ, ಚಿತ್ರಗಳ ಸುಳಿವುಗಳು, ಕಥೆಯ ಶೀರ್ಷಿಕೆ ಇತ್ಯಾದಿಗಳ ಮೂಲಕ ಕಥೆ ಯಾವುದಿರಬಹುದು ಎಂದು ಮಕ್ಕಳು ಊಹಿಸುವಂತೆ ಉತ್ತೇಜಿಸಬಹುದು. ಕಥೆಯನ್ನು ಓದುತ್ತಿರುವಾಗ ಒಂದು ಆಸಕ್ತಿಕರ ಘಟ್ಟದಲ್ಲಿ ಕಥೆಯನ್ನು ನಿಲ್ಲಿಸಿ, 'ಮುಂದೆ ಏನಾಗಬಹುದೆಂದು ನಿಮಗನ್ನಿಸುತ್ತದೆ?' ಎಂಬಂಥ ಪ್ರಶ್ನೆಗಳನ್ನು ಕೇಳುವ ಮೂಲಕ ಮಕ್ಕಳೇ ಹೆಚ್ಚಾಗಿ ಊಹಿಸಿ ಹೇಳುವಂತೆ ಅವಕಾಶ ನೀಡಬಹುದು. ಕಥೆಯನ್ನು ಓದಿದ ನಂತರ ತಮ್ಮದೇ ಮಾತುಗಳಲ್ಲಿ ಈ ಕತೆಯನ್ನು ಮತ್ತೆ ಹೇಳಲು, ಕಥೆಯ ಪಾತ್ರಗಳು ಏನು ಅನುಭವಿಸಿದವು ಎಂದು ಯೋಚಿಸಲು, ಕಥೆಯನ್ನು ವಿಸ್ತರಿಸಲು, ಕೆಲವು ಘಟನೆಗಳ ಬದಲಾವಣೆ–ಗಳೊಂದಿಗೆ ಕಥೆಯನ್ನು ಬೇರೆಯ ರೀತಿಯಲ್ಲಿ ಬರೆಯಲು ಮಕ್ಕಳಿಗೆ ಹೇಳುವುದು ಇತ್ಯಾದಿ. ಇಂತಹ ಓದಿನ ನಂತರದ ಚಟುವಟಿಕೆಗಳನ್ನು ಬರಹದ ಮೂಲಕವೂ ಗಟ್ಟಿಗೊಳಿಸಬಹುದು.

**ಚಿತ್ರಗಳ ಸುತ್ತ ಸಂವಾದ**:– ದಿನಪತ್ರಿಕೆಗಳು, ನಿಯತಕಾಲಿಕೆಗಳು, ಪಠ್ಯಪುಸ್ತಕಗಳು ಇತ್ಯಾದಿ ಸೇರಿದಂತೆ ಎಲ್ಲೆಡೆ ದೊರಕುವ ಚಿತ್ರಗಳನ್ನು ತೆಗೆದುಕೊಂಡು ಮಕ್ಕಳನ್ನು ಸೃಜನಾತ್ಮಕವಾಗಿ ಆಲೋಚಿಸಲು, ಒಂದು ಕಥೆಯನ್ನು ಕಟ್ಟಲು, ಪದಸಂಪತ್ತನ್ನು ಹೆಚ್ಚಿಸಿಕೊಳ್ಳಲು ಮತ್ತು ಸಂವಾದದಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳಲು ಸಹಾಯ ಮಾಡಬಹುದು. ಸಂವಾದದ ಸಮಯದಲ್ಲಿ ಈ ಕೆಳಗಿನ ಪ್ರಶ್ನೆಗಳನ್ನು ಕೇಳುವ ಮೂಲಕ ಇದನ್ನು ಸಾಧ್ಯವಾಗಿಸಬಹುದು: ಇಲ್ಲಿ ಏನಾಗುತ್ತಿದೆ ಎಂದು ನೀನು ಭಾವಿಸುತ್ತೀಯ? ಈ ಪಾತ್ರವು ಈ ಚಟುವಟಿಕೆಯನ್ನು ಏಕೆ ಮಾಡುತ್ತಿದೆ? ಇದರ ನಂತರ ಅವರು ಎಲ್ಲಿಗೆ ಹೋಗುತ್ತಾರೆ ಎಂದು ನಿನಗನ್ನಿಸುತ್ತದೆ? ಈ ಎರಡು ಪಾತ್ರಗಳು ಯಾವುದರ ಬಗ್ಗೆ ಮಾತಾಡುತ್ತಿದೆ ಎಂದು ನಿನ್ನ ಅಭಿಪ್ರಾಯ?

**ಮುಕ್ತ ಚರ್ಚೆಗಳು**: ಮಕ್ಕಳು ತಮ್ಮ ದೈನಂದಿನ ಜೀವನದ ಅನುಭವಗಳ ಬಗ್ಗೆ, ತಮ್ಮ ಭವಿಷ್ಯದ ಬಗ್ಗೆ, ಅವರ ಚಿಂತನೆಯ ಬಗ್ಗೆ ಮಾತನಾಡಲು ಇಷ್ಟಪಡುತ್ತಾರೆ. ಹಾಗಾಗಿ, ಶಿಕ್ಷಕರಿಗೆ ಮಕ್ಕಳ ಜೊತೆ

ಸಂವಾದ ನಡೆಸಲು ಇರುವ ಎಲ್ಲಾ ಅವಕಾಶಗಳನ್ನು ಬಳಸಿಕೊಳ್ಳುವುದು ಅತ್ಯಂತ ಮುಖ್ಯವಾಗುತ್ತದೆ. ಅವುಗಳಲ್ಲಿ ಕೆಲವು ವಿಷಯಾಧಾರಿತವಾಗಿರಬಹುದು ಮತ್ತು ಕೆಲವು ಸಹಜವಾದು-ದಾಗಿರಬಹುದು. ಅವು ಸ್ಥಳೀಯ ಗಿಡಗಳು, ಪ್ರಾಣಿಗಳು, ಅವರು ತಮ್ಮ ಸುತ್ತಮುತ್ತ ನೋಡುವ ಉಪಕರಣಗಳು, ಅವರು ಸಂಜೆ ಯಾವ ಆಟ ಆಡಲು ಇಚ್ಛಿಸುತ್ತಾರೆ, ಕೆಲವು ತಿನಿಸುಗಳನ್ನು ಹೇಗೆ ತಯಾರಿಸುತ್ತಾರೆ ಮುಂತಾದವುಗಳನ್ನು ಒಳಗೊಂಡಿರಬಹುದು.

ಈ ಚರ್ಚೆಗಳಲ್ಲಿ, ಮಕ್ಕಳು ತಮ್ಮನ್ನು ತಾವು ಮುಕ್ತವಾಗಿ ಅಭಿವ್ಯಕ್ತಿಗೊಳಿಸಲು ತಮ್ಮ ಮಾತೃಭಾಷೆಯನ್ನೇ ಬಳಸಲು ಪ್ರೋತ್ಸಾಹಿಸಬೇಕು. ಏಕೆಂದರೆ ಅವರು ವಿಮರ್ಶಾತ್ಮಕವಾಗಿ ಯೋಚಿಸಲು ಮತ್ತು ತಮ್ಮ ಚಿಂತನೆಗಳನ್ನು ತಾರ್ಕಿಕವಾಗಿ ಮಂಡಿಸಲು ಕಲಿಯಬೇಕಿರುವುದು ಮುಖ್ಯ. ತಮ್ಮ ಮಾತೃ-ಭಾಷೆಯಲ್ಲಿ ಮಾತನಾಡಲು ಅವರಿಗೆ ಸ್ವಾತಂತ್ರ್ಯವಿದ್ದರೆ, ಇದು ಅವರಿಗೆ ಮತ್ತಷ್ಟು ಸುಲಭವಾಗುತ್ತದೆ.

ವರ್ಣಮಾಲೆಯ ಪಠ್ಯಕ್ರಮಗಳಲ್ಲಿ ಧ್ವನಿ ಚಿಹ್ನೆ ಘಟಕಗಳ ನಡುವೆ ಇರುವ ಸಂಬಂಧವು ಹೆಚ್ಚು ಕಡಿಮೆ ಸುಸಂಬದ್ಧವಾಗಿಯೇ ಇದೆ.

**ಬಹುಭಾಷಿಕ ಭಾರತದಲ್ಲಿ ಸಾಕ್ಷರತೆ: ರೂಮ್ ಟು ರೀಡ್‌ನ ಅನುಭವಗಳು**

ಮಧ್ಯಪ್ರದೇಶದ ಬರ್ವಾನಿ ಮತ್ತು ರಾಜಸ್ತಾನದ ಸಿರೋಹಿ ಎಂಬ ಎರಡು ಜಿಲ್ಲೆಗಳಲ್ಲಿ ರೂಮ್ ಟು ರೀಡ್ (RTR) ಎಂಬ ಒಂದು ಸಂಯೋಜಿತ ಬಹುಭಾಷಿಕ ಕಲಿಕಾ ಯೋಜನೆಯನ್ನು ಜಾರಿಗೆ ತರಲಾಯಿತು. ಇವೆರಡೂ ಪ್ರದೇಶಗಳಲ್ಲಿ ಒಂದು ವಿಸ್ತೃತ ಸಮಾಜೋ-ಭಾಷಿಕ ಸಮೀಕ್ಷೆಯ ಮೂಲಕ ಈ ಪ್ರಕ್ರಿಯೆಯು ಆರಂಭವಾಯಿತು. ಬಳಿಕ ಈ ಸಮೀಕ್ಷೆಯ ದತ್ತಾಂಶಗಳನ್ನು ವಿಶ್ಲೇಷಿಸಿ ಕಾರ್ಯಕ್ಷೇತ್ರದಲ್ಲಿ ಅದರ ಜಾರಿಗೆ ತಿಳಿಸಲಾಯಿತು. ಈ ಯೋಜನೆಗೆ ಸಾಕ್ಷರತೆಯ ಪ್ರಮುಖ ಮೂರು ಆಧಾರಸ್ತಂಭಗಳ ಜೊತೆಗೆ, ಬಹುಭಾಷಿಕ ಪರಿಕರಗಳ ಸೃಷ್ಟಿ ಮತ್ತು ಮಗುವಿನ ಭಾಷೆಯ ಬಳಕೆಗೆ ಹೆಚ್ಚುವರಿಯಾಗಿ ಗಮನಹರಿಸಲಾಯಿತು. ಶಾಲಾ ವ್ಯವಸ್ಥೆಯು ಒಂದು ಪ್ರಭಾವಿ ಭಾಷೆಗೆ ಹೆಚ್ಚು ಮಹತ್ವ ಕೊಡುತ್ತಿದ್ದರೂ, ಯಾವುದೇ 'ಒಂದು' ಭಾಷೆಗೆ ಜೋತು ಬೀಳದಂತೆ ಎಚ್ಚರಿಕೆಯಿಂದ ಹೆಜ್ಜೆಯಿರಿಸಲಾಗಿತ್ತು. ಮೌಖಿಕ ಅಥವಾ ಪಠ್ಯಾಧಾರಿತ ಚಟುವಟಿಕೆಗಳಿಗೆ ಸಂಬಂಧಿಸಿದ ಚರ್ಚೆಗಳಲ್ಲಿ ಗರಿಷ್ಠ ಮಟ್ಟದಲ್ಲಿ ಸ್ಥಳೀಯ ಭಾಷೆಯನ್ನೇ ಬಳಸುವಂತೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಲಾಯಿತು. ಸ್ಥಳೀಯ ಭಾಷೆಯಲ್ಲೇ ಧ್ವನಿಶಾಸ್ತ್ರೀಯ ಅರಿವು ಮೂಡಿಸುವ ಚಟುವಟಿಕೆ, ಕಥಾ ರಚನೆ, ಪದಗಳ ಪಟ್ಟಿ ಮತ್ತು ಪದ ಚಿತ್ರಗಳ ಕಾರ್ಡ್‌ಗಳನ್ನು ರಚಿಸಲಾಯಿತು. ಅಕ್ಷರಜ್ಞಾನದ ತರಗತಿಯ ಒಂದು ಅಗತ್ಯ ಅಂಶವಾಗಿ ಮಕ್ಕಳ ವೈವಿಧ್ಯಮಯ ಭಾಷಿಕ ಅನುಭವವನ್ನು ಬಳಸಿಕೊಳ್ಳಲಾಯಿತು.

ಉದಾಹರಣೆಗೆ ದೇವನಾಗರಿ ಲಿಪಿಯಲ್ಲಿ 'क' ಅಕ್ಷರದ ಧ್ವನಿಯು ಕಮಲ, ಆಕಳು, ಬೆನಕ ಮುಂತಾದ ಎಲ್ಲ ಪದಗಳಲ್ಲಿಯೂ /क/ ಎಂದೇ ಆಗಿರುತ್ತದೆ. ಆದರೆ ಇಂಗ್ಲಿಷ್‌ನಲ್ಲಿ ಹಾಗಲ್ಲ. 'ಟ' ಅಕ್ಷರವು 'station' ಇತ್ಯಾದಿಗಳಂತೆ ಒಂದೇ ಪದದಲ್ಲಿ ವಿವಿಧ ಧ್ವನಿಗಳನ್ನು ಸೂಚಿಸಬಹುದು. ಪದ ಬಳಕೆಯೂ ವಿಭಿನ್ನ ಧ್ವನಿಯಿಂದ ಕೂಡಿರಬಹುದು. ಆದರೆ ಅಕ್ಷರಗಳನ್ನು ಕಲಿಸುವುದು ಸುಲಭವೆಂದು ಇದರರ್ಥವಲ್ಲ. ಅಕ್ಷರ ಕೇಂದ್ರಿತ ಭಾಷೆಗಳಲ್ಲಿ ಒಂದು ವಿನ್ಯಾಸವಿದ್ದರೂ ಕೂಡ ಸುಮಾರು 400ಕ್ಕೂ ಹೆಚ್ಚು ಜೋಡಣೆಗಳು ಸಾಧ್ಯವಿದ್ದು ಮಕ್ಕಳು ಅವನ್ನು ಕ್ಷಣಮಾತ್ರದಲ್ಲಿಯೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಕೆಲವು ಬಾರಿ ಸನ್ನಿವೇಶಕ್ಕೆ ತಕ್ಕಂತೆ ಅಕ್ಷರಗಳ ಚಿಹ್ನೆಗಳು ಬದಲಾದೀತು. ಉದಾಹರಣೆಗೆ 'ಈ' ಎಂಬ ಅಕ್ಷರವು 'ಈಶ' ಎಂಬಲ್ಲಿ ಅಕ್ಷರವಾಗಿಯೂ, 'ನೀಲಿ' ಎಂಬಲ್ಲಿ ಸ್ವರವಾಗಿಯೂ ಸೇರಿದೆ. ಹಾಗೆಯೇ 'ತ' ಎಂಬ ಅಕ್ಷರವು ಅಗತ್ಯ ಎಂಬಲ್ಲಿ ಹಾಗೂ ಸ್ತ್ರೀ ಎಂಬಲ್ಲಿ ಬೇರೆ ಬೇರೆಯಾಗಿ ಇರುತ್ತದೆ. ಈ ಎಲ್ಲದರ ಅರಿವು ನಮ್ಮ ತರಗತಿಯ ಪದ್ಧತಿಗಳನ್ನು ಕೆಳಗಿನಂತೆ ರೂಪಿಸಲು ಸಹಾಯ ಮಾಡಿದೆ:

- ಇಡೀ ಘಟಕವನ್ನು ಪ್ರತ್ಯೇಕವಾಗಿ ಕಲಿಸಿದರೆ ಪ್ರಯೋಜನವೇನೂ ಇಲ್ಲ. ಅಕ್ಷರಮಾಲೆಯನ್ನು ಹೇಳಿಕೊಡುವಾಗ ಮಗುವು ಅಕ್ಷರಗಳ ಬಹುವಿಧದ



ಸಂಯೋಜನೆಗಳನ್ನು ವೈವಿಧ್ಯಮಯವಾದ ಒಂದು ಸಮೃದ್ಧ ಪಠ್ಯದಲ್ಲಿ ಬೇರೆಬೇರೆ ಪದಗಳ ಮೂಲಕ, ನೋಡುವಂತೆ ವಿನ್ಯಾಸಗೊಳಿಸಬೇಕು. ಹಾಗಾಗಿ ಎಲ್ಲಾ ಪ್ರಾಥಮಿಕ ತರಗತಿಗಳಲ್ಲಿ ಉತ್ತಮ ಗುಣಮಟ್ಟದ, ವಿಭಿನ್ನವಾದ ಸಾಹಿತ್ಯ ಅವಶ್ಯ ಇರಬೇಕು.

- ಅಕ್ಷರಗಳನ್ನು ಗಡಿಬಿಡಿಯಲ್ಲಿ ಹೇಳಿಕೊಡಬಾರದು – ಮೊದಲ ಕೆಲವು ತಿಂಗಳುಗಳ ಕಾಲ ಪೂರ್ಣ ಅಕ್ಷರಮಾಲೆಯನ್ನು ಕಲಿಸಿ ನಂತರ ಪದಗಳು ಮತ್ತು ವಾಕ್ಯಗಳನ್ನು ಓದುವುದನ್ನು ಕಲಿಸಬೇಕು. ಶಾಲಾ ದಿನಗಳ ಆರಂಭಿಕ ವರ್ಷಗಳಲ್ಲಿ ಲಿಪಿಯನ್ನು ಯೋಜನಾಬದ್ಧ ಮತ್ತು ರಚನಾತ್ಮಕ ರೀತಿಯಲ್ಲಿ ಕಲಿಸಬೇಕು. ಅಕ್ಷರಗಳನ್ನು ಸದಾ ವರ್ಣಮಾಲೆಯಲ್ಲಿರುವ ಸಾಂಪ್ರದಾಯಿಕ ಅನುಕ್ರಮ ರೀತಿಯಲ್ಲಿ ಹೇಳಿಕೊಡಬೇಕಾಗಿಲ್ಲ. ಅವುಗಳನ್ನು ಗುಂಪುಗಳನ್ನಾಗಿ ವಿಭಜಿಸಿ, ಅದರಲ್ಲಿನ ಅಕ್ಷರಗಳ ವಿವಿಧ ಸುಲಭ ಜೋಡಣೆಗಳನ್ನು ಓದಿ, ಬಿಡಿಸಲು ಸಹಾಯ ಮಾಡಬೇಕು. ಅವರಿಗೆ ಎಲ್ಲಾ ಅಕ್ಷರಗಳು ಕಲಿಸಿಲ್ಲದಿದ್ದರೂ ಈ ಮೂಲಕ ಅಕ್ಷರಗಳನ್ನು ಗುರುತಿಸಿಕೊಂಡು, ಅವುಗಳನ್ನು ಜೋಡಿಸಿ ಪದ ಮತ್ತು ವಾಕ್ಯಗಳನ್ನು ಓದಲು ಸಾಧ್ಯವಾಗಬೇಕು.

ಹದ್ದು ಒಂದು ನಾಣ್ಯವನ್ನು ಹುಡುಕಿ ತಂದಿತು. ರೈತನಿಗೆ ಕಾಣುವಂತೆ ಸ್ವಲ್ಪ ದೂರದಲ್ಲಿ ಬೀಳಿಸಿತು. ಅದೇನೆಂದು ನೋಡಲು ರೈತ ಎದ್ದು ಹೊರಗೆ ಬಂದನು. ಆಗ ಗೋಡೆ ಕುಸಿಯಿತು. ಅವನಿಗೆ ಹದ್ದು ಬೇಕೆಂದೇ ನಾಣ್ಯ ತಂದು ಹಾಕಿದ್ದು ಎಂದು ತಿಳಿಯಿತು. ತನ್ನ ಜೀವ ಉಳಿಸಿದ ಹದ್ದಿನ ಕಡೆಗೆ ಪ್ರೀತಿಯಿಂದ ನೋಡಿದನು. ಅದಕ್ಕೆ ಕೈ ಮುಗಿದನು. ಹದ್ದು ಹರ್ಷದಿಂದ ಮುಗಿಲ ಕಡೆಗೆ ಹಾರಿ ಹೋಯಿತು.

**ಓದುವಿಕೆಯ ಐದು ಮುಖ್ಯ ಅಂಶಗಳು**

ಪದಗಳ ಒಡೆಯುವಿಕೆಯಿಂದಾಗಿ ಮಗುವಿಗೆ ಸಂದರ್ಭವನ್ನು ಅರ್ಥೈಸಿಕೊಳ್ಳಲು ಮತ್ತು ಓದುವಿಕೆಯ ಅಭ್ಯಾಸದ ಅವಕಾಶಗಳು ಲಭಿಸುತ್ತವೆ. ಇದರಿಂದ ಅರ್ಥಗ್ರಹಿಕೆಯ ಜೊತೆಗೆ ಸುಲಲಿತ ಓದಿಗೆ ಸಹಾಯ ಮಾಡುತ್ತದೆ. ಜೊತೆಗೆ, ಐದು ಪ್ರಮುಖ ಅಂಶಗಳ ಮೇಲೆ ಗಮನವನ್ನು ಕೇಂದ್ರೀಕರಿಸುವುದರಿಂದ ಮಕ್ಕಳ ಓದಿನ ಕೌಶಲ ಉತ್ತಮವಾಗುತ್ತದೆಂದು ಅಂತಾರಾಷ್ಟ್ರೀಯ ಸಂಶೋಧನೆಗಳು ಹೇಳುತ್ತವೆ. ಆದ್ದರಿಂದ ಪರಿಣಾಮಕಾರಿ ಓದುವ ಸಾಮರ್ಥ್ಯಕ್ಕಾಗಿ,





ಈ ಎಲ್ಲಾ ಐದು ಅಂಶಗಳಿಗೆ ಒತ್ತು ಕೊಟ್ಟು ಪ್ರತಿದಿನದ ತರಗತಿ ನಿರ್ದೇಶನವನ್ನು ವಿನ್ಯಾಸಗೊಳಿಸುವಂತೆ ರೂಪಿಸುವುದು ಮುಖ್ಯ.

**1. ಧ್ವನಿಶಾಸ್ತ್ರೀಯ ಅರಿವು**

ಅಂದರೆ ಯಾವುದೇ ಮಾತನಾಡುವ ಪದದ ಧ್ವನಿಯ ರಚನೆಯನ್ನು ಅರ್ಥಮಾಡಿಕೊಳ್ಳುವುದು ಉದಾಹರಣೆಗೆ ಕಿತಾಬ್ ಪದದಲ್ಲಿ ಮೂರು ಧ್ವನಿಗಳಿವೆ– ಕಿ/ತಾ ಮತ್ತು ಬ್; ಮಹಕ್ ಪದದ ಮೊದಲ ಧ್ವನಿ ಮ ಇತ್ಯಾದಿ.

**2. ಧ್ವನಿಗಳು**

ಪದಗಳನ್ನು ಅರ್ಥೈಸಲು ಧ್ವನಿ ಚಿಹ್ನೆಗಳ ಸಂಬಂಧವನ್ನು ಬಳಸುವುದು: ಅಂದರೆ /ಕ/ ಎಂಬ ಧ್ವನಿಯನ್ನು 'ಕ' ಎಂದು ಬರೆಯುತ್ತೇವೆ. /ನೀ/ ಮತ್ತು /ಲಾ/ ಎಂಬ ಧ್ವನಿಗಳನ್ನು ಸೇರಿಸಿದಾಗ 'ನೀಲಾ' ಎಂದು ಬರೆಯುವ ಪದವು ದೊರೆಯುತ್ತದೆ.

**3. ಶಬ್ದ ಸಂಪತ್ತು**

ಇದು ಪದದ ಅರ್ಥದ ಜೊತೆಗಿನ ಅರಿವು. ಉದಾಹರಣೆಗೆ 'ಹರಿ' ಎಂಬ ಪದವು ಈ ಕೆಳಗಿನ ವಾಕ್ಯಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಉಪಯೋಗಿಸಲ್ಪಟ್ಟಿದ್ದು ವಿವಿಧ ಅರ್ಥಗಳನ್ನು ನೀಡುತ್ತದೆ; ನದಿಯು ಹರಿಯುತ್ತದೆ. ಬಟ್ಟೆ ಹರಿದಿದೆ. ಅವನ ಹೆಸರು ಹರಿ ಹೀಗೆ. ಮಗು ವಿವಿಧ ಸನ್ನಿವೇಶಗಳಲ್ಲಿ ಸ್ವತಂತ್ರವಾಗಿ ಪದವನ್ನು ಬಳಸಲು ಶಕ್ಯವಾದಾಗ ಮಾತ್ರ ಒಂದು ಪದವು ಆ ಮಗುವಿನ ಪದಸಂಪತ್ತಿನ ಭಾಗವಾಗಿರುತ್ತದೆ.

**4. ಸುಲಲಿತ ಓದು**

ವೇಗವಾಗಿ, ಸ್ಫುಟವಾಗಿ ಮತ್ತು ಭಾವನೆಗಳೊಂದಿಗೆ ಓದುವ ಸಾಮರ್ಥ್ಯವನ್ನು ಸುಲಲಿತ ಎನ್ನಬಹುದು ಅಂದರೆ 'ಕಮಲ ಮಾರುಕಟ್ಟೆಗೆ ಹೋದಳು' ಎಂಬ ವಾಕ್ಯವನ್ನು ಒಂದೇ ಓದಿನಲ್ಲಿ ಓದುವುದು ಅದನ್ನು ಕ, ಮ, ಲ – ಕಮಲ; ಮಾ, ರು, ಕ, ಟ್ಟೆ, ಗೆ– ಮಾರುಕಟ್ಟೆಗೆ ಎಂದು ಬೇರೆಬೇರೆ ಧ್ವನಿಗಳಾಗಿ ಒಡೆದು ಓದಬಾರದು.

**5. ಅರ್ಥಗ್ರಹಿಕೆ**

ಕೊಟ್ಟಿರುವ ಒಂದು ಬರಹವನ್ನು ಅದರ ಅರ್ಥವನ್ನು ಕಟ್ಟಿಕೊಳ್ಳಲು ತಿಳಿಯುವುದೇ ಅರ್ಥಗ್ರಹಿಕೆ. ಅಂದರೆ ಬರಹದ ಪದಗಳ ಒಳಗಿರುವ ಸೂಕ್ಷ್ಮ ವಿವಿಧ ಅರ್ಥಗಳ ಸಾಧ್ಯತೆಯನ್ನು ಅರ್ಥ–ಮಾಡಿಕೊಳ್ಳುವುದು ಮತ್ತು ಅಷ್ಟೇ ಅಲ್ಲದೆ ಕೇವಲ ಅಲ್ಲಿಯ ಬರಹದ ಆಚೆಗೂ ಅರ್ಥವನ್ನು ಗ್ರಹಿಸುವುದು.

ಓದುವುದು ಮತ್ತು ಬರೆಯುವುದರ ನಡುವೆ ಪರಸ್ಪರ ಸಂಬಂಧವಿದೆ ಎಂಬುದನ್ನು ಅಗತ್ಯ ಗುರುತಿಸಬೇಕು. ಓದುವುದು ಒಂದು ಮಗುವಿನ ಬರಹವನ್ನು ಉತ್ತಮ ಪಡಿಸಿದರೆ, ಬರೆಯುವುದು ಓದುವುದನ್ನು ಗಟ್ಟಿಗೊಳಿಸುತ್ತದೆ. ಸ್ವತಂತ್ರ ಓದುಗ ಆಗಬೇಕಾದರೆ ಮಗುವು ಸ್ವತಂತ್ರವಾಗಿ ಬರೆಯುವವನೂ ಆಗಬೇಕು. ಹಾಗಾಗಿ ಮಗುವು ಒಂದು ಬರಹವನ್ನು ಓದಲು ಮತ್ತು ಅದರ ಭಾವನೆಗಳನ್ನು ಮಾತಿನಲ್ಲಿ ಮತ್ತು ಬರೆಯುವಲ್ಲಿ ಅಭಿವ್ಯಕ್ತಿಗೊಳಿಸಲು ಸಾಧ್ಯವಾಗುವಂತಹ ಚಟುವಟಿಕೆಗಳನ್ನು ತರಗತಿಯಲ್ಲಿ ವಿನ್ಯಾಸಗೊಳಿಸಬೇಕು. ಇದರಿಂದಾಗಿ ಆಳವಾದ ಗ್ರಹಿಕೆಯನ್ನು ಪಡೆದುಕೊಂಡು ಅರ್ಥ ಮಾಡಿಕೊಳ್ಳುವುದನ್ನು ಬೆಳೆಸಿಕೊಳ್ಳುತ್ತಾರೆ.

**ಓದಿನ ಚಟುವಟಿಕೆಗಳು**

ಮಗುವಿಗೆ ಓದುವಿಕೆಯನ್ನು ಕಲಿಯುವ ಪ್ರಕ್ರಿಯೆಯಲ್ಲಿ ಅರ್ಥ ಮತ್ತು ಆನಂದವನ್ನು ನೀಡಲು ಸಮಂಜಸವಾದ ಮಕ್ಕಳ ಸಾಹಿತ್ಯದ ಅನುಭವ ಹಾಗೂ ಶಾಲೆ, ಮನೆ ಮತ್ತು ಸಮುದಾಯಗಳಲ್ಲಿ ಓದಿನ ಸಂಸ್ಕೃತಿಯ ಬೆಳವಣಿಗೆಯು ಅತ್ಯಗತ್ಯ. ಶಾಲೆ ಮತ್ತು ತರಗತಿಯಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸುವ ಮೂಲಕ ಮತ್ತು ಪರಿಣಾಮಕಾರಿ ಓದುವಿಕೆಯ ಚಟುವಟಿಕೆಗಳನ್ನು ನೀಡುವ ಮೂಲಕ ಇದನ್ನು ಸಾಧ್ಯವಾಗಿಸಬಹುದು. ತರಗತಿ ಕೊಠಡಿಗಳು/ಗ್ರಂಥಾಲಯಗಳಲ್ಲಿ ಮಾಡಬಹುದಾದ ಕೆಲವು ಚಟುವಟಿಕೆಗಳೆಂದರೆ:

- ಜೋರಾಗಿ ಓದುವುದು: ಇದರಲ್ಲಿ ಶಿಕ್ಷಕರು ಒಂದು ಕಥೆಯನ್ನು ಮಕ್ಕಳಿಗೆ ಓದಿ ಹೇಳುತ್ತಾರೆ ಹಾಗೂ ಕಥೆ ಓದುವ ಮುನ್ನ, ಓದುತ್ತಿರುವಾಗ ಮತ್ತು ಓದಿ ಮುಗಿಸಿದ ನಂತರ ಮಕ್ಕಳ ಜೊತೆ ಸಂವಾದಗಳನ್ನು ಉತ್ತೇಜಿಸುತ್ತಾರೆ.
- ಹಂಚಿಕೊಂಡು ಓದುವುದು: ಇದರಲ್ಲಿ ಶಿಕ್ಷಕರು ಮತ್ತು ಮಕ್ಕಳು ಸುತ್ತಲೂ ಕುಳಿತು ಒಂದು ಬರಹವನ್ನು ಜೊತೆಯಾಗಿ ಓದುತ್ತಾರೆ. ಇದರಿಂದಾಗಿ ಮಕ್ಕಳು ನಿರ್ದಿಷ್ಟ ಪದಗಳನ್ನು ಹೇಗೆ ಓದುವುದು ಎಂಬುದನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ ಮತ್ತು ಅವರಿಗೆ ಬೇಕಾದ ಅಭ್ಯಾಸವು ಸಿಗುತ್ತದೆ.
- ಜೋಡಿಗಳಾಗಿ ಓದುವುದು: ಇಬ್ಬರು ಮಕ್ಕಳ ಗುಂಪುಗಳನ್ನು ರಚಿಸಿ ಒಬ್ಬರಿಗೊಬ್ಬರು ಓದುವ ಅಭ್ಯಾಸದಲ್ಲಿ ನೆರವಾಗುವುದು.
- ಸ್ವತಂತ್ರವಾಗಿ ಓದುವುದು: ಇದರಲ್ಲಿ ಮಕ್ಕಳು ಸ್ವತಂತ್ರವಾಗಿ ತಮ್ಮ ಓದುವ ಮಟ್ಟಕ್ಕೆ ತಕ್ಕಂತೆ ಪುಸ್ತಕಗಳನ್ನು ಓದುವುದು.

ಓದುವ ಭಾರತ, ಬೃಹತ್ ಭಾರತ (Padhe Bharat, Badhe Bharat) ಕುರಿತಾಗಿ ಕೇಂದ್ರ ಸರ್ಕಾರದ ಇತ್ತೀಚೆಗಿನ ಮಾರ್ಗದರ್ಶನದಲ್ಲಿ, ಒಂದು ದಿನಕ್ಕೆ 150 ನಿಮಿಷಗಳ ಭಾಷಾ ಬೋಧನೆಯನ್ನೂ ಶಿಫಾರಸು ಮಾಡಿದೆ. ಮೊದಲ ಮತ್ತು ಎರಡನೆಯ ಭಾಷೆಯ ಬೋಧನೆ ಮತ್ತು ಕನಿಷ್ಠ 30 ನಿಮಿಷಗಳ ಸ್ವತಂತ್ರ ಓದುವ ಸಮಯ ಈ ಎರಡೂ ಇರಬೇಕು ಎಂದು ಕೂಡಾ ಹೇಳುತ್ತದೆ. ಈ ಸ್ವತಂತ್ರ ಓದುವ ಸಮಯ ಎಂದರೆ ಇದೊಂದು ಸುಖಸಾಧನವಲ್ಲ, ಬದಲಾಗಿ ಪ್ರಾಥಮಿಕ ಹಂತಗಳಲ್ಲಿ ನಡೆಯಬೇಕಾದ ಒಂದು ಕಡ್ಡಾಯ ಚಟುವಟಿಕೆ ಎಂಬುದನ್ನು ಅವಶ್ಯ ಗಮನಿಸಬೇಕು.

ಮಕ್ಕಳು ಸ್ವತಂತ್ರ ಓದುಗರಾಗುವುದು ಆ ಮೂಲಕ ಅವರನ್ನು ಸಬಲರಾಗಿ ಬದುಕಿನುದ್ದಕ್ಕೂ ಕಲಿಯುವವರನ್ನಾಗಿಸುವುದು ರೂಮ್ ಟು ರೀಡ್ ಸಂಸ್ಥೆಯ ದೀರ್ಘಕಾಲೀನ ದೃಷ್ಟಿಕೋನ. 2030ರ ಸುಮಾರಿಗೆ ಸರ್ವರಿಗೂ ಗುಣಮಟ್ಟದ ಶಿಕ್ಷಣದ ಸುಸ್ಥಿರ ಅಭಿವೃದ್ಧಿಯ ಗುರಿ (Sustainable Development Goal of Quality Educationto All by 2030) ಇದನ್ನೇ ಒಳಗೊಂಡಿದೆ. ಇದನ್ನು ಸಾಧಿಸಲು ಮಕ್ಕಳಿಗೆ ಮಾಹಿತಿಪೂರ್ಣವಾದ, ಸಂಶೋಧಿಸಲ್ಪಟ್ಟ, ಚೆನ್ನಾಗಿ ವಿನ್ಯಾಸ ಮಾಡಲ್ಪಟ್ಟ ಹಾಗೂ ಹಿಗ್ಗಿಸಬಹುದಾದ ಮತ್ತು ಸುಸ್ಥಿರವಾದ ಪ್ರಾಥಮಿಕ ಹಂತದ ಬೆಂಬಲಗಳನ್ನು ನೀಡಲು ನಮ್ಮ ಪರಿಶ್ರಮಗಳನ್ನು ಕೇಂದ್ರೀಕರಿಸಬೇಕಿದೆ. ಶೈಕ್ಷಣಿಕ ಕಲಿಕೆಗೆ ಓದುವುದು ಮೂಲಾಧಾರವೆಂದು ತಿಳಿದಿರುವಾಗ ಹಾಗೂ ಕಡಿಮೆ ಓದಿನ ಮಟ್ಟವಿದ್ದರೆ ಕಲಿಕೆ ಕುಂಠಿತ ಆಗುತ್ತದೆಯೆಂದು ತಿಳಿದಿರುವಾಗ, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಎಲ್ಲ ಮಕ್ಕಳು ಸುಲಲಿತವಾಗಿ ಓದಿ ಅರ್ಥಗ್ರಹಿಕೆಯನ್ನು ಪಡೆಯುತ್ತಾರೆ ಎಂಬುದನ್ನು ಖಾತ್ರಿಪಡಿಸಿಕೊಳ್ಳುವುದು ನಿಜವಾದ ಸವಾಲು.

I- Refers to the ability to identify patterns of specific letters as words, eventually leading to word recognition. It is when children gain this orthographic expertise that reading becomes an automatic process.



**ಶಕ್ತಿಬ್ರತ ಸೇನ್** ಅವರು **ರೂಮ್ ಟು ರೀಡ್ ಇಂಡಿಯಾದ** ಯೋಜನಾ ನಿರ್ದೇಶಕರಾಗಿದ್ದಾರೆ. ಅಕ್ಷರಜ್ಞಾನ ಮತ್ತು ಹುಡುಗಿಯರ ಶಿಕ್ಷಣ ಯೋಜನೆ ಹಾಗು ಸಂಸ್ಥೆಯ ಆರ್ ಎಮ್ & ಇ ವಿಭಾಗವನ್ನು ನಿರ್ವಹಿಸುತ್ತಿದ್ದಾರೆ. ಅಕ್ಷರಜ್ಞಾನ ಯೋಜನೆಯು ಮಕ್ಕಳಲ್ಲಿ ಅಕ್ಷರ ಕೌಶಲವನ್ನು ಮತ್ತು ಓದುವ ಹವ್ಯಾಸವನ್ನು ಬೆಳೆಸಲು ಪ್ರಯತ್ನಿಸುತ್ತದೆ. ಹುಡುಗಿಯರ ಶಿಕ್ಷಣ ಯೋಜನೆಯು ಹುಡುಗಿಯರು ಪ್ರೌಢ ಶಿಕ್ಷಣವನ್ನು ಪೂರೈಸುವಂತೆ ಬೆಂಬಲಿಸುವುದು ಮತ್ತು ಹುಡುಗಿಯರ ಶಿಕ್ಷಣವನ್ನ ಸರ್ಕಾರದ ಮಟ್ಟದಲ್ಲಿ ಎತ್ತಿಹಿಡಿಯುವಲ್ಲಿ ಕೆಲಸ ಮಾಡುತ್ತದೆ. ದೊಡ್ಡಮಟ್ಟದಲ್ಲಿ ಗುಣಮಟ್ಟವನ್ನು ಕಾಪಾಡಿಕೊಳ್ಳಬಲ್ಲ ಯೋಜನೆಗಳ ವಿನ್ಯಾಸದಲ್ಲಿ ಶಕ್ತಿಬ್ರತರು ಪರಿಣತರು. ಭಾರತೀಯ ಭಾಷೆ ಮತ್ತು ಲಿಪಿಗೆ ಸಂಬಂಧಿಸಿ ಮಾಡಿರುವ ಕೆಲಸಕ್ಕೆ ಅವರು ಹೆಸರುವಾಸಿಯಾಗಿದ್ದಾರೆ. ಮಕ್ಕಳ ಸಾಹಿತ್ಯವನ್ನು ತರಗತಿ ಕೊಠಡಿಗೆ ತರುವಲ್ಲಿ ಅವರು ಬಹಳ ಉತ್ಸುಕರೂ, ಬದ್ಧತೆಯುಳ್ಳವರೂ ಆತ್ಮದು, ಹದಿಹರೆಯದವರೊಡನೆ ಮತ್ತು ಅವರ ಅಗತ್ಯಗಳೆಡೆಗೆ ಕೆಲಸ ಮಾಡುವುದು ಅವರಿಗೆ ಬಲು ಪ್ರಿಯ. ಅವರನ್ನು aktibrata.sen@roomtoread.org ಮೂಲಕ ಸಂಪರ್ಕಿಸಬಹುದು.



**ನಿಧಿ ವಿನಾಯಕ್** ಅವರು **ರೂಮ್ ಟು ರೀಡ್ ಇಂಡಿಯಾದ** ಶಿಕ್ಷಣ ವಿನ್ಯಾಸ ಮತ್ತು ಶಿಕ್ಷಕರ ಬೆಂಬಲ ವಿಭಾಗದಲ್ಲಿ ಹಿರಿಯ ಅಧಿಕಾರಿಯಾಗಿದ್ದಾರೆ. ಅರ್ಥಶಾಸ್ತ್ರದಲ್ಲಿ ಅವರು ಡಾಕ್ಟರೇಟ್ ಪಡೆದಿದ್ದು ಕಳೆದ 15 ವರ್ಷಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಸರ್ಕಾರಿ ಮತ್ತು ಇತರ ಸಂಸ್ಥೆಗಳೊಡನೆ ಮೊದಲ ತರಗತಿಗಳಲ್ಲಿ ಅಕ್ಷರ ಜ್ಞಾನ, ಶಿಕ್ಷಕರ ಬೆಂಬಲ ವ್ಯವಸ್ಥೆಗಳು ಮತ್ತು ಶಿಕ್ಷಕರ ತರಬೇತಿ ಕಾರ್ಯಕ್ರಮಗಳ ಗುಣಮಟ್ಟದ ವಿಷಯಗಳಲ್ಲಿ ಸಲಹೆಗಾರರಾಗಿ ಕರ್ತವ್ಯ ನಿರ್ವಹಿಸಿದ್ದಾರೆ. ಶಿಕ್ಷಕರ ಶಿಕ್ಷಣದ ತರಬೇತಿಗೆ ಹಲವು ಕಾರ್ಯಕ್ರಮಗಳನ್ನು ರಚಿಸಿದ್ದು, ತರಗತಿಗೆ ಸಂಶೋಧನೆ ಆಧಾರಿತ ಗುಣಮಟ್ಟದ ಬೆಂಬಲಗಳನ್ನು ತರುವೆಡೆಗೆ ಉತ್ಸುಕರಾಗಿದ್ದಾರೆ. ಅವರನ್ನು nidhi.vinayak@roomtoread.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಜನಾರ್ದನ ಚನ್ನಗಿರಿ** । ಪರಿಶೀಲನೆ: **ಲತಾ ಕೆ ಸಿ**

# ಬುಡಕಟ್ಟು ಮಕ್ಕಳಿಗೆ ಬಹುಭಾಷಾ ಶಿಕ್ಷಣ | ವಸಂತಶಾಲಾದಿಂದ ಆದ ಕಲಿಕೆಗಳು

ಸಂಧ್ಯಾ ಗಜ್ಜರ್ ಮತ್ತು ಸೋನಲ್ ಬಕ್ಷಿ

ವಡೋದರಾದ ಭಾಷಾ ಸಂಶೋಧನೆ ಮತ್ತು ಪ್ರಕಾಶನ ಕೇಂದ್ರವನ್ನು ಪದ್ಮಶ್ರೀ ಡಾ.ಗಣೇಶ್ ದೇವಿ ಅವರು 1996ರಲ್ಲಿ ಸ್ಥಾಪಿಸಿದರು. ಬರೋಡಾದ ಎಮ್.ಎಸ್. ಯುನಿವರ್ಸಿಟಿಯಲ್ಲಿ ಇಂಗ್ಲೀಷ್ ಸಾಹಿತ್ಯದ ಪ್ರಾಧ್ಯಾಪಕರಾಗಿದ್ದ ದೇವಿಯವರು ನಶಿಸಿ–ಹೋಗುತ್ತಿರುವ ಅಥವಾ ಅಳಿವಿನಂಚಿನಲ್ಲಿರುವ ಭಾಷೆಗಳನ್ನು ಕುರಿತಾಗಿ ತಮಗಿದ್ದ ಅತೀವ ಕಾಳಜಿಯ ಕಾರಣದಿಂದ ಸಂಶೋಧನೆಯನ್ನು ಕೈಗೊಳ್ಳಲೆಂದು ಸ್ವಯಂ ನಿವೃತ್ತಿ ಪಡೆದರು. ತಮ್ಮ ಸಂಶೋಧನೆಯನ್ನು ಅವರು ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯಗಳಿಗೆ ಸೇರಿದ ಭಾಷೆಗಳೇ ಹೆಚ್ಚಾಗಿ ಅಳಿವಿನತ್ತ ಸಾಗುತ್ತಿವೆ ಎಂಬ ಅಂಶವನ್ನು ಕಂಡುಕೊಂಡರು. ಈ ಭಾಷೆಗಳಿಗೆ ಲಿಪಿಯಿರುವುದಿಲ್ಲ ಹಾಗೂ ಅವು ಬಹುತೇಕ ಮೌಖಿಕವಾಗಿ ಮಾತ್ರ ಅಸ್ತಿತ್ವದಲ್ಲಿರುವುದು ಅದಕ್ಕಿದ್ದ ಅತ್ಯಂತ ಪ್ರಮುಖ ಕಾರಣವಾಗಿತ್ತು.

ಬುಡಕಟ್ಟು ಜನಾಂಗಗಳ ಸಂದರ್ಭದಲ್ಲಿ, ಸಾಮಾಜಿಕ ಸೂಚಕಗಳು ತುಂಬಾ ನಿರಾಶಾದಾಯಕ ಚಿತ್ರವನ್ನು ನೀಡುತ್ತವೆ ಎನ್ನುವುದು ಎಲ್ಲರಿಗೂ ತಿಳಿದಿದೆ. ತಜ್ಞರು ಬೊಟ್ಟು ಮಾಡಿ ತೋರಿಸಿದ ಪ್ರಕಾರ, ಬುಡಕಟ್ಟು ಸಮುದಾಯಗಳ ಸಾಮಾಜಿಕ ವಾಸ್ತವಿಕತೆ ಹಾಗೂ ಸಂದರ್ಭದಲ್ಲಿ ಶಿಕ್ಷಣವೆನ್ನುವುದು ದೂರದ ಮಾತಾಗಿದೆ. ಅದು ಅವರ ಪಾಲಿಗೆ ಅವಾಸ್ತವಿಕವೂ ಅಪ್ರಸ್ತುತವೂ ಆಗಿದೆ. ಇನ್ನಿತರ ಅನುಕೂಲ ವಂಚಿತ ಪರಿಸರಗಳಲ್ಲಿಯೂ ಶಿಕ್ಷಕರು ಮಕ್ಕಳೊಡನೆ ಸಂಬಂಧವೇ ಇಲ್ಲದ ಹಾಗಿದ್ದಾರೆ ಎಂದು ಹೇಳಲಾಗುತ್ತದೆ. ಈ ಸಂಗತಿ ಬುಡಕಟ್ಟು ಪರಿಸರದಲ್ಲಿ ಇನ್ನಷ್ಟು ಉತ್ಪ್ರೇಕ್ಷಿತ ರೂಪದಲ್ಲಿ ಕಂಡುಬರುತ್ತದೆ. ಈ ಕೊರತೆಯನ್ನು ನೀಗಿಸಲು ಶಿಕ್ಷಕ ಸಮುದಾಯ ತಮ್ಮನ್ನು ಇನ್ನೂ ಹೆಚ್ಚು ತೊಡಗಿಸಿಕೊಳ್ಳಬೇಕು ಹಾಗು ಮಾತೃಭಾಷೆಯ ಮತ್ತು ಪ್ರಥಮ ಭಾಷಾ ಆಧಾರಿತ ಶಿಕ್ಷಣದ ಮೇಲೆ ಹೆಚ್ಚಿನ ಒತ್ತು ನೀಡುವುದು ಅತ್ಯಗತ್ಯವೆಂಬುದು ಎಲ್ಲರಿಗೂ ತಿಳಿದಿರುವ ವಿಚಾರ.

**ಸವಾಲುಗಳು**

ಭಾರತದಲ್ಲಿ ಭಾಷೆಯ ಆಧಾರದ ಮೇಲೆ ರಾಜ್ಯಗಳು ವಿಭಜನೆಯಾದಂದಿನಿಂದ ಗ್ರಾಮೀಣ ಭಾಗದ ಸರ್ಕಾರಿ ಶಾಲೆಗಳಲ್ಲಿ ಬೋಧನೆಯ ಮಾಧ್ಯಮವು ಆಯಾ ರಾಜ್ಯ ಭಾಷೆಯಲ್ಲಿಯೇ ಇರುತ್ತದೆ. ಬುಡಕಟ್ಟು ಹಳ್ಳಿಗಳಲ್ಲಿಯೂ ಇದೇ ನಿಯಮವು ಅನ್ವಯಿಸುತ್ತದೆ. ಈ ಶಾಲೆಗಳಿಗೆ ಶಿಕ್ಷಕರನ್ನು ನೇಮಕ ಮಾಡುವ ಪ್ರಕ್ರಿಯೆಯು ಕೇಂದ್ರೀಕೃತ ವ್ಯವಸ್ಥೆಯಿಂದ ನಡೆಯುತ್ತದೆ. ಇದರಿಂದಾಗಿ, ಬುಡಕಟ್ಟು ವಲಯಗಳಿಂದ ದೂರ ಇರುವ ಜಿಲ್ಲೆಗಳಿಂದ ಬುಡಕಟ್ಟು ಸಮುದಾಯಕ್ಕೆ ಸೇರಿರದ ಶಿಕ್ಷಕರನ್ನು ಬುಡಕಟ್ಟು ಜನಾಂಗದವರ ಶಾಲೆಗಳಿಗೆ ನೇಮಿಸುವ ಸಾಧ್ಯತೆ ಇರುತ್ತದೆ. ಹಾಗಾಗಿ, ಕಾಗದಪತ್ರಗಳಲ್ಲಿ ಈ ಸಂಗತಿಗಳು ಸರಳ ಹಾಗೂ ಸ್ಪಷ್ಟ ಎನಿಸಿದರೂ ತರಗತಿ ಕೊಠಡಿಗಳಲ್ಲಿ ಅವು ತುಂಬಾ ಸಂಕೀರ್ಣವಾಗಿದೆ.

1. ಗ್ರಾಮೀಣ ಮಕ್ಕಳು ಶಾಲೆಗೆ ಸೇರುವಾಗ ಸುಮಾರು 6 ನೆಯ ವಯಸ್ಸಿನಲ್ಲಿ ನೇರವಾಗಿ ಮೊದಲನೆಯ ತರಗತಿಗೆ ಸೇರುತ್ತಾರೆ. ನಗರದ ಶಾಲೆಗಳಲ್ಲಿರುವಂತೆ ನರ್ಸರಿ, ಜ್ಯೂನಿಯರ್ ಮತ್ತು ಸೀನಿಯರ್ ಕಿಂಡರ್‌ಗಾರ್ಟನ್ ಶಾಲೆಗಳಲ್ಲಿ ಲಭ್ಯವಾಗುವ ಅರೆ–ಔಪಚಾರಿಕವಾದ ರಕ್ಷಣಾತ್ಮಕ/ಸಿದ್ಧತಾ ಸೇತುವ್ಯವಸ್ಥೆಗಳು ಅವರಿಗೆ ಇರುವುದಿಲ್ಲ. ಗ್ರಾಮೀಣ ಭಾಗದಲ್ಲಿಯೂ ಅನೇಕ ಕಡೆಗಳಲ್ಲಿ ಶಾಲಾಪೂರ್ವ ಶಿಕ್ಷಣಕ್ಕಾಗಿ ಅಂಗನವಾಡಿ / ಬಾಲವಾಡಿಗಳಿವೆ. ಹಲವಾರು ಶಿಕ್ಷಕರು ಹಾಗೂ ಗುಂಪುಗಳು ಶಾಲಾಪೂರ್ವ ಶಿಕ್ಷಣವನ್ನು ಒದಗಿಸುವಲ್ಲಿ ನಿರತವಾಗಿವೆ. ಇವರು ಈ ಅಂಗನವಾಡಿ/ಬಾಲವಾಡಿಗಳನ್ನು ಬೋಧನಾಕ್ರಮ ಹಾಗೂ ಚಿಕ್ಕ ಮಕ್ಕಳ ಶಿಕ್ಷಣಕ್ಕೆ (Early Childhood Education-ECE) ಸಂಬಂಧಿಸಿದಂತೆ ಹೆಚ್ಚು ಸಮರ್ಥವಾಗಿಸಲು ಪ್ರಯತ್ನಿಸುತ್ತಿದ್ದಾರೆ. ಹಾಗಿದ್ದರೂ ಮಗುವನ್ನು ಮೊದಲನೆಯ ತರಗತಿಯ ಪಠ್ಯಕ್ರಮಕ್ಕೆ ಅಣಿಗೊಳಿಸುವಲ್ಲಿ ಭಾರತದ ನೂರಾರು ಹಳ್ಳಿಗಳಲ್ಲಿ ಇರುವ ಅಂಗನವಾಡಿ/ಬಾಲವಾಡಿಗಳ ಕೊಡುಗೆ ಮತ್ತು ಪರಿಣಾಮಕಾರಿತ್ವವು ಸಾಬೀತಾಗಿಲ್ಲ.
2. ಆಯಾ ರಾಜ್ಯದ ಪ್ರತ್ಯೇಕ ಮಂಡಳಿಗಳು ನಿಗದಿಪಡಿಸಿದ ಪಠ್ಯಕ್ರಮಗಳ ಪ್ರಕಾರ, ಮೊದಲನೆಯ ತರಗತಿಯಲ್ಲಿರುವ ಮಗುವು ಪೂರ್ಣವಾಕ್ಯವೊಂದನ್ನು ಓದಲು ಹಾಗೂ ಬರೆಯಲು, ಒಂದು ಅಂಕಿಯ ಕೂಡುವ/ಕಳೆಯುವ ಲೆಕ್ಕಗಳನ್ನು ಮಾಡಲು ಶಕ್ತವಾಗಿರಬೇಕು. ತರಗತಿಯಲ್ಲಿನ ಬಹುತೇಕ ಮಕ್ಕಳು ಇದನ್ನು ಹಿಂದೆ ಮಾಡಿಲ್ಲದಿರುವುದು ಅಥವಾ ಅದನ್ನು ಮಾಡಲು ಅವರಿಗೆ ಬರದೇ ಇರುವುದು ಶಿಕ್ಷಕರಿಗೆ ದೊಡ್ಡ ಸವಾಲಾಗುತ್ತದೆ.
3. ಶಿಕ್ಷಕರ ಭಾಷೆ (ಬೋಧನೆಯ ಮಾಧ್ಯಮ) ಹಾಗೂ ಮಗುವಿನ ಭಾಷೆಗಳು ಬೇರೆಬೇರೆಯಾಗಿದ್ದಾಗ ಇದು ಇನ್ನೂ ಕಷ್ಟಕರವಾಗುತ್ತದೆ. ಹಾಗಾಗಿ, ಇಬ್ಬರಿಗೂ ಒಬ್ಬರು ಹೇಳಿದ್ದು ಮತ್ತೊಬ್ಬರಿಗೆ ಅರ್ಥವಾಗುವುದಿಲ್ಲ.
4. ತರಗತಿಯಲ್ಲಿ ಕಲಿಸುತ್ತಿರುವುದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದೇ ಬಹಳಷ್ಟು ಮಕ್ಕಳು ಶಾಲೆಯನ್ನೇ ಬಿಟ್ಟುಬಿಡುತ್ತಾರೆ. ಮರಳಿ ಶಾಲೆಗೆ ಬರುವ ಅವಕಾಶ ಅವರಿಗೆ ಸಿಗುವುದೇ ಇಲ್ಲ ಎಂದರೂ ಸರಿಯೇ.

ಈ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಸಾಧನವೊಂದನ್ನು ವಿನ್ಯಾಸಗೊಳಿಸಲಾಗಿದೆ; ಅದು ಪ್ರತಿಯೊಂದು ಬುಡಕಟ್ಟು ಭಾಷೆಯಲ್ಲಿಯೂ 6 ವರ್ಷದ (ಒಂದನೆಯ ತರಗತಿಗೆ ಪ್ರವೇಶ ಪಡೆಯಲು ನಿಗದಿಪಡಿಸಿದ ವಯಸ್ಸು) ಸಾಮಾನ್ಯ ಮಗುವೊಂದು ಅರ್ಥಮಾಡಿಕೊಳ್ಳಬಹುದಾದ, 1200–1500 ಪದಗಳಿಗೆ ಸೂಕ್ತವಾದ ಸರಳ, ಸಂಕೇತ ಚಿತ್ರಗಳಿರುವ ಒಂದು ಚಿತ್ರ ಪದಕೋಶ (Pictorial Glossary). ಬುಡಕಟ್ಟು ಭಾಷೆಯಲ್ಲಿನ ಪದವನ್ನು ಚಿತ್ರದ ಮೂಲಕ ತೋರಿಸಿ ಅರ್ಥಮಾಡಿಸಲಾಗುತ್ತದೆ ಹಾಗೂ ಗುಜರಾತಿ / ಇಂಗ್ಲಿಷ್/ಹಿಂದಿಗಳಲ್ಲಿಯೂ ಪದ/ಅರ್ಥದ ಭಾಷಾಂತರವನ್ನು ಒದಗಿಸಲಾಗುತ್ತದೆ. ಶಿಕ್ಷಕರು (ಬುಡಕಟ್ಟು ಸಮಾಜಕ್ಕೆ ಸೇರಿರದ ಅಥವಾ ತಾವು ನೇಮಕಗೊಂಡ ಪ್ರದೇಶದ ಭಾಷೆಯನ್ನು ತಿಳಿಯದವರು) ತರಗತಿಯಲ್ಲಿ ಮಕ್ಕಳೊಡನೆ ಸಂವಹನಕ್ಕಾಗಿ, ತಮ್ಮ

ಶಾಲೆಯು ಇರುವ ಪ್ರದೇಶದಲ್ಲಿ ಹೆಚ್ಚಿನ ಜನರು ಯಾವ ಭಾಷೆಯನ್ನು ಮಾತನಾಡುತ್ತಾರೋ ಆ ಭಾಷೆಯ ಚಿತ್ರ–ಪದಕೋಶವನ್ನು ಬಳಸಬಹುದು. ಪದಕೋಶಗಳ ಗರಿಷ್ಠ ಬಳಕೆಗೆ ಸಂಬಂಧಿಸಿದಂತೆ ಶಿಕ್ಷಕರಿಗೆ ತರಬೇತಿ ನೀಡಲು ಒಂದು ದಿನದ ಅವಧಿಯ ಸರಳ ಕಾರ್ಯಾಗಾರವನ್ನು ವಿನ್ಯಾಸ ಮಾಡಲಾಗಿದೆ. ಇದರಿಂದಾಗಿ ಅವರು ಅಲ್ಲಿ ಚಾಲ್ತಿ ಇರುವ  ಭಾಷೆಯಲ್ಲಿ ಸಾಮಾನ್ಯವಾಗಿ ಬಳಸುವ ಪದ ಹಾಗೂ ನುಡಿಗಟ್ಟುಗಳನ್ನು ಕಲಿತು ಬಳಸಲು ಅನುವಾಗುತ್ತದೆ. ಬುಡಕಟ್ಟು ಭಾಷೆಗಳು ಪ್ರಧಾನವಾಗಿರುವ ಪ್ರದೇಶಗಳಲ್ಲಿನ ಶಾಲಾ ಶಿಕ್ಷಕರಿಗೆ ವಿತರಿಸುವುದಕ್ಕಾಗಿ ನಮ್ಮ ಕೆಲವು ಪದಕೋಶಗಳನ್ನು ಗುಜರಾತಿನ ಸರ್ವ ಶಿಕ್ಷಣ ಅಭಿಯಾನದಲ್ಲೂ ಬಳಸಲಾಗುತ್ತಿದೆ. ಈ ತನಕ ನಾವು 16 ಚಿತ್ರ–ಪದಕೋಶಗಳನ್ನು ತಯಾರಿಸಿದ್ದು, ಇವುಗಳಲ್ಲಿ ಹನ್ನೆರಡನ್ನು ಬುಡಕಟ್ಟು ಭಾಷೆಗಳಿಗಾಗಿ ಮತ್ತು ನಾಲ್ಕನ್ನು ಅಲೆಮಾರಿ ಸಮುದಾಯಗಳ ಭಾಷೆಗಳಿಗಾಗಿ ಸಿದ್ಧಪಡಿಸಿದ್ದೇವೆ.

**ವಸಂತಶಾಲಾ ಮಾದರಿ**

ಭಾಷಾ[1] ಕೇಂದ್ರವು 2005ರಲ್ಲಿ ವಸಂತಶಾಲಾ ಎಂಬ ವಸತಿ ಶಾಲಾಶಿಕ್ಷಣ ಕಾರ್ಯಕ್ರಮವನ್ನು ಆರಂಭಿಸಿತು. ಅದಕ್ಕೂ ಮೊದಲು ವಡೋದರಾದಲ್ಲಿನ ಬೃಹತ್ ಕಟ್ಟಡ ನಿರ್ಮಾಣದ ಜಾಗಗಳಲ್ಲಿ ಕಟ್ಟಡ ಕಾರ್ಮಿಕರ ಮಕ್ಕಳಿಗಾಗಿ (ಬಹುತೇಕ ಅವರು ಛೋಟಾ ಉದಯಪುರ್ ಪ್ರಾಂತದಿಂದ ಬಂದ ಬುಡಕಟ್ಟು ಕುಟುಂಬದವ–ರಾಗಿದ್ದರು.) ಅನೌಪಚಾರಿಕ ಶಿಕ್ಷಣವನ್ನು ನೀಡಿ, ತದನಂತರ ಪಂಚ್‌ಮಹಲ್ ಮತ್ತು ಛೋಟಾ ಉದಯಪುರ್ ತಾಲೂಕು / ಜಿಲ್ಲೆಗಳ ಹಳ್ಳಿಗಳಲ್ಲಿ ಶಾಲೆಗೆ ಹೋಗುವ ಮಕ್ಕಳ ಜೊತೆಗೆ ಬಹಳ ವರ್ಷ ಕೆಲಸ ಮಾಡಿದ್ದೆವು. ಆ ಮೂಲಕ ಹಲವು ವರ್ಷಗಳ ಅನುಭವವನ್ನು ಗಳಿಸಿದ್ದೆವು. ಇವು ಸೀಮಿತ–ಅವಧಿಯ (ವರ್ಷಗಳ) ಕಾರ್ಯಯೋಜನೆಗಳಾಗಿದ್ದು, ಅವು ಮುಗಿದ ಮೇಲೆ ಮಕ್ಕಳನ್ನು ಅವರ ಪಾಡಿಗೆ ಅವರನ್ನು ಬಿಟ್ಟುಬಿಡಲಾಗುತ್ತಿತ್ತು. ಈ ಕಾರ್ಯವಿಧಾನದಿಂದಾಗಿ ಮಕ್ಕಳಿಗೆ ತುಂಬಾ ಅನ್ಯಾಯವಾಗುತ್ತದೆ ಎಂದು ನಮಗನ್ನಿಸಿತು. ಹಾಗಾಗಿ ನಾವೇ ಮಕ್ಕಳಿಗಾಗಿ ಶಾಲೆಯೊಂದನ್ನು ನಡೆಸಬೇಕೆಂದು ತೀರ್ಮಾನಿಸಿದೆವು.

ಈ ರೀತಿಯಾಗಿ ವಸಂತಶಾಲಾದ ಪರಿಕಲ್ಪನೆಯು ಅಸ್ತಿತ್ವಕ್ಕೆ ಬಂದಿತು. ನಾವು ತುಂಬಾ ಬಡವರಾದ ಮತ್ತು ವಲಸೆ ಕಾರ್ಮಿಕರ ಕುಟುಂಬಗಳಿಗೆ ಸೇರಿದ, ಅನ್ಯಥಾ ಶಾಲೆಗೆ ಹೋಗುವ ಅವಕಾಶಗಳೇ ಇಲ್ಲದ, ಶಾಲೆ ಬಿಟ್ಟ ಅಥವಾ ಶಾಲೆಗೇ ಹೋಗಿರದ, 6ರಿಂದ 12ರ ವಯೋಮಾನದ 60 ಮಂದಿ ಗಂಡು ಮತ್ತು ಹೆಣ್ಣುಮಕ್ಕಳನ್ನು ನಮ್ಮ ಶಾಲೆಗೆ ದಾಖಲಿಸಿಕೊಂಡೆವು. ಆರಂಭದ ಎರಡು ವರ್ಷಗಳಲ್ಲೇ ಈ ಮಕ್ಕಳು ಸಾಮಾನ್ಯವಾಗಿ ರಾಥ್ವಾ, ದುಂಗ್ರಾ ಭಿಲ, ತಾಡವಿ ಹಾಗೂ ಭಿಲ ಬುಡಕಟ್ಟು ಸಮುದಾಯಗಳಿಗೆ ಸೇರಿದವರಾಗಿದ್ದು, ತನ್ನದೇ ಭಾಷೆಯನ್ನು ಹೊಂದಿರುವ ಪ್ರತಿ ಸಮುದಾಯದ ಮಕ್ಕಳು ಆ ಭಾಷೆಯನ್ನೇ ಮಾತನಾಡುತ್ತಾರೆ ಎಂಬುದನ್ನು ನಾವು ಕಂಡುಕೊಂಡೆವು.

ಅವರು ರಾಜ್ಯ ಭಾಷೆಯಾದ ಗುಜರಾತಿಯಲ್ಲಿ ಅಷ್ಟಾಗಿ ಮಾತನಾಡುತ್ತಿರಲಿಲ್ಲ. ಅವರಿಗೆ ತಮ್ಮ ಬುಡಕಟ್ಟು ಭಾಷೆಯನ್ನು ಬಿಟ್ಟು ಇತರ ಮೂರು ಬುಡಕಟ್ಟು  ಭಾಷೆಗಳಲ್ಲಿನ  ಯಾವುದೂ ಅರ್ಥವಾಗುತ್ತಿರಲಿಲ್ಲ. ಹಾಗಾಗಿ, ನಮ್ಮಲ್ಲಿ ಕೇವಲ ಅರವತ್ತೇ ಮಕ್ಕಳಿದ್ದರೂ ಭಾಷೆಗಳ ಸಂಕೀರ್ಣವಾದ ಮಿಶ್ರಣವಿತ್ತು. ನಾವು ಈ ಕಾರ್ಯದಲ್ಲಿ ತೊಡಗಿಸಿಕೊಂಡ ಬುಡಕಟ್ಟು ಶಿಕ್ಷಕರು ಒಂದಿಷ್ಟು ಶಿಕ್ಷಣವನ್ನು ಹೊಂದಿದವರಾಗಿದ್ದರು. ಆದರೆ ತಮ್ಮ ವಿದ್ಯಾರ್ಥಿಗಳು ಮಾತನಾಡುವ ಎಲ್ಲಾ ಭಾಷೆಗಳನ್ನೂ ಕಲಿಯುವ ಬಯಕೆ ಮತ್ತು ಸಾಮರ್ಥ್ಯಗಳೇ ಅವರ ಮುಖ್ಯ ಅರ್ಹತೆಯಾಗಿತ್ತು. ಅದಕ್ಕೂ ಹೆಚ್ಚು ಮುಖ್ಯವಾದದ್ದೆಂದರೆ, ಕಲಿಸುವುದರಲ್ಲಿ ಅವರಿಗಿದ್ದ ಪ್ರೀತಿ, ತರಗತಿ ಕೊಠಡಿಯಲ್ಲಿ ಉದ್ದೇಶಿತ ಕೆಲಸವನ್ನು ಮಾಡಿತೋರಿಸುವ ಅವರ ಸಾಮರ್ಥ್ಯ ಹಾಗೂ ಮಕ್ಕಳ ಬಗ್ಗೆ ಅವರು ಹೊಂದಿದ್ದ ಪ್ರೀತಿ ಮತ್ತು ಮಮತೆ.

**ವಸಂತಶಾಲಾದ ಬೋಧನಾಕ್ರಮ**

ಶೈಕ್ಷಣಿಕ ವರ್ಷದ ಆರಂಭದಲ್ಲಿ (ಸರ್ಕಾರವು ತಂದ ಹೊಸ ನಿಯಮಾವಳಿಗಳ ಪ್ರಕಾರ, ಈಗ ಅದು 2020ರ ಏಪ್ರಿಲ್‌ನಿಂದ) ಹೊಸದಾಗಿ ಪ್ರವೇಶ ಪಡೆದ ಎಲ್ಲಾ ಮಕ್ಕಳ ಕಲಿಕೆಯ ಮಟ್ಟ, ವಿಷಯ ಗ್ರಹಿಕೆಯ ಸಾಮರ್ಥ್ಯ, ಕಲಿಸಿದ ವಿಷಯಗಳ ಗ್ರಹಿಕೆ, ಸ್ವಾಭಾವಿಕ ಕೌಶಲ (Aptitude), ಸಾಮಾಜಿಕವಾಗಿ ಒಡನಾಡುವ ರೀತಿಗಳು ಮತ್ತು ಇನ್ಯಾವುದೇ ವಿಶೇಷ ಪ್ರತಿಭೆಗಳನ್ನು ತಿಳಿದುಕೊಳ್ಳಲಾಗುತ್ತದೆ. ಏಕೆಂದರೆ ಇವರಲ್ಲಿ ಕೆಲವು ಮಕ್ಕಳಾದರೂ ಒಂದಲ್ಲ ಒಂದು ವೇಳೆ ಶಾಲೆಗೆ ಹೋದವರಾಗಿರಬಹುದು. ಅವರ ಕಲಿಕೆಯ ಮಟ್ಟ ಮತ್ತು ಸಾಮರ್ಥ್ಯದ ಮೌಲ್ಯಮಾಪನಗಳ ವಿಶ್ಲೇಷಣೆಯನ್ನು ಆಧರಿಸಿ, ಶಿಕ್ಷಕರು ಪ್ರತಿಯೊಂದು ಮಗುವೂ ವಯಸ್ಸಿಗೆ ತಕ್ಕಂತೆ ತಲುಪಬೇಕಾಗಿರುವ ಕಲಿಕೆಯ ಮಟ್ಟವನ್ನು ನಿರ್ಧರಿಸುತ್ತಾರೆ ಮತ್ತು ಅವರನ್ನು ಐದು ಕಲಿಕೆಯ ಗುಂಪುಗಳಾಗಿ ವಿಂಗಡಿಸುತ್ತಾರೆ:

ಅ. ಜಾಗೃತಿ : ಒಂದು ಮತ್ತು ಎರಡನೆಯ ತರಗತಿ
ಆ. ಪ್ರಕೃತಿ : ಮೂರು ಮತ್ತು ನಾಲ್ಕನೆಯ ತರಗತಿ
ಇ. ಸಂಸ್ಕೃತಿ : ಐದನೆಯ ತರಗತಿ
ಈ. ಸ್ವಕೃತಿ : ಆರನೆಯ ತರಗತಿ
ಉ. ಪ್ರಗತಿ : ಏಳನೆಯ ತರಗತಿ

ಹಾಗಿದ್ದರೂ ಮಗುವೊಂದು ನಿರ್ದಿಷ್ಟ ವಿಷಯದಲ್ಲಿ ತನಗಿರುವ ಸಾಮರ್ಥ್ಯಕ್ಕೆ ಅನುಗುಣವಾಗಿ, ಒಂದು ಅಥವಾ ಒಂದಕ್ಕಿಂತಲೂ ಹೆಚ್ಚು ಗುಂಪುಗಳಲ್ಲಿ ಜೊತೆಜೊತೆಗೇ (ಏಕಕಾಲಕ್ಕೆ) ಭಾಗವಹಿಸಬಹುದು. ಮೌಲ್ಯಮಾಪನವು ನಿರಂತರ ಪ್ರಕ್ರಿಯೆಯಾಗಿರುತ್ತದೆ. ಪ್ರತಿ ಮೂರು ತಿಂಗಳಿಗೆ ಔಪಚಾರಿಕ ಪರೀಕ್ಷೆಗಳನ್ನು ನಡೆಸಲಾಗುತ್ತದೆ. ಜೊತೆಗೆ, ಶಿಕ್ಷಕರು ಅವಲೋಕನ, ತರಗತಿ ಕಾರ್ಯ, ಪಾಲ್ಗೊಳ್ಳುವಿಕೆ ಇತ್ಯಾದಿಗಳ ಮೂಲಕ ಮಕ್ಕಳ ಪ್ರಗತಿಯ ಮೇಲೆ ನಿಗಾ ವಹಿಸುತ್ತಾರೆ. ಬುಡಕಟ್ಟು ಸಮುದಾಯದ ಮಕ್ಕಳಲ್ಲಿ ಹೆಚ್ಚಿನವರು ಶೈಕ್ಷಣಿಕ ಸಂಗತಿಗಳನ್ನು ಬಹಳ ಬೇಗ ಕಲಿಯ ಬಲ್ಲರು ಮತ್ತು ಅವರಿಗೆ ಸ್ವಲ್ಪಮಟ್ಟಿಗಿನ ಜಾಣತನವೂ (Street Smartness)  ಇದೆ ಎನ್ನುವುದು ನಮಗೆ ಕಂಡುಬಂದಿತು. ಇದು ಜನರೊಂದಿಗೆ ಸಾಮಾನ್ಯವಾಗಿ ಒಡನಾಡುವಾಗ ಅವರಿಗೆ ನೆರವಾಗುತ್ತದೆ.

ಶೈಕ್ಷಣಿಕ ವಿಷಯಗಳು ಮತ್ತು ಅದರಲ್ಲಿನ ವಿವರಗಳು ಗುಜರಾತ್ ರಾಜ್ಯ ಮಂಡಳಿಯ ಪಠ್ಯಕ್ರಮಕ್ಕೆ ಅನುಗುಣವಾಗಿದೆ. ವಸಂತ–ಶಾಲಾಗೆ ತರಬೇತಿಗೆಂದು ಬಂದಿದ್ದ ಶಿಕ್ಷಕರೊಬ್ಬರು ತಾವು ಗಮನಿಸುತ್ತ ಕುಳಿತಿದ್ದ ತರಗತಿಯಲ್ಲಿ ಶಿಕ್ಷಕರು ಸಾರ್ವಜನಿಕ ಆಡಳಿತಕ್ಕೆ ಸಂಬಂಧಿಸಿದಂತೆ ಸರಪಂಚ್ ಹುದ್ದೆಗಿಂತ ಮೇಲ್ಪಟ್ಟು

[1]ಭಾರತದ ಆದಿವಾಸಿ ಸಮುದಾಯಗಳಿಗೆ 'ಧ್ವನಿ' ನೀಡುವ ಉದ್ದೇಶದಿಂದ ಭಾಷಾ ಸಂಶೋಧನೆ ಮತ್ತು ಪ್ರಕಟಣೆ ಕೇಂದ್ರವನ್ನು 1996 ರಲ್ಲಿ ಸ್ಥಾಪಿಸಲಾಯಿತು. ಈ ಆದಿವಾಸಿ ಅಕಾಡೆಮಿಯವನ್ನು  ಗುಜರಾತ್‌ನ ಚೋಟಾಉದಯಪುರ ಜಿಲ್ಲೆಯ ತೇಜ್‌ಗಡ್‌ನಲ್ಲಿ ಭಾಷಾ ಕೇಂದ್ರದವರು ಸ್ಥಾಪಿಸಿದ್ದಾರೆ.

ಯಾವ ಯಾವ ಹುದ್ದೆಗಳಿವೆ ಎಂಬುದನ್ನು ತಿಳಿದಿರದ ಮಕ್ಕಳಿಗೆ ನಗರಪಾಲಿಕೆ ಎನ್ನುವ ವಿಷಯವನ್ನು ವಿವರಿಸಿ ಹೇಳಿದ ರೀತಿಯು ತಮಗೆ ತುಂಬಾ ಮೆಚ್ಚುಗೆಯಾಯಿತೆಂದು ಹೇಳಿದರು. ಹಾಗಾದರೆ, ಮಕ್ಕಳಿಗೆ ಅರ್ಥವಾಯಿತೇ? ಹೌದು. ಅರ್ಥಮಾಡಿಕೊಂಡರು. ಬಹಳಷ್ಟು ಮಕ್ಕಳು ಪ್ರಶ್ನೆಗಳನ್ನು ಕೇಳದರಾದರೂ ಅವರ ಪ್ರಶ್ನೆಗಳಿಗೆ ಉತ್ತರವನ್ನು ಯೋಚಿಸಿ ಹೇಳುವ ಕ್ರಿಯೆಯಿಂದಾಗಿ ಶಿಕ್ಷಕರಿಗೆ ಆ ಪರಿಕಲ್ಪನೆಯನ್ನು ಇನ್ನಷ್ಟು ಸ್ಪಷ್ಟವಾಗಿ ವಿವರಿಸಲು ಸಾಧ್ಯವಾಯಿತು.

ತರಗತಿಗಳಲ್ಲಿ ಆ ಶಾಲೆ ಪ್ರಾರಂಭವಾದ ಕೂಡಲೇ ಪಾಠ ಮಾಡಲು ಆರಂಭಿಸಿದರೂ ಮಕ್ಕಳಿಗೆ ಮೊದಲ ವಾರಗಳಲ್ಲಿ ಹೊಸ ವಾತಾವರಣಕ್ಕೆ ಹೊಂದಿಕೊಳ್ಳಲು, ಸ್ವಂತ ತಾವೊಬ್ಬರೇ ಇರಲು, ಬೇರೆ ಮಕ್ಕಳನ್ನು ಸ್ನೇಹಿತರನ್ನಾಗಿ ಮಾಡಿಕೊಳ್ಳಲು, ತರಗತಿಯಲ್ಲಿನ ಅಭ್ಯಾಸ ಚಟುವಟಿಕೆಗಳಿಗೆ ಮರಳಲು, ಶಿಕ್ಷಕರನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು, ಅಕಾಡೆಮಿಯಲ್ಲಿರುವ ಇತರರನ್ನು ಪರಿಚಯಿಸಿಕೊಳ್ಳಲು ಸಮಯವನ್ನು ಕೊಡಲಾಗುತ್ತದೆ. ಸಾಧಾರಣವಾಗಿ, ಹೊಸದಾಗಿ ಸೇರಿದ ಮಕ್ಕಳು ಅಗಸ್ಟ್–ಸೆಪ್ಟೆಂಬರ್ ಹೊತ್ತಿಗೆ ನೆಲೆಯೂರುತ್ತಾರೆ. ಆಗ ಶಿಕ್ಷಕರು ಮತ್ತು ಮಕ್ಕಳು ತಮ್ಮ ಗಮನವನ್ನು ಸಂಪೂರ್ಣವಾಗಿ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಯತ್ತ ನೀಡತೊಡಗುತ್ತಾರೆ. ಆದ್ದರಿಂದ ಈ ಆರು ತಿಂಗಳುಗಳ ಅವಧಿಯಲ್ಲಿ ತರಗತಿಕೊಠಡಿಯ ಕಾರ್ಯ–ಚಟುವಟಿಕೆಗಳು ತೀವ್ರಗೊಳ್ಳುತ್ತವೆ. ಕಲಿಕೆಯ ಪ್ರಕ್ರಿಯೆಗೆ ಪೂರಕವಾಗಿರುವಂತೆ ಪಠ್ಯೇತರ ಚಟುವಟಿಕೆಗಳನ್ನೂ ರೂಪಿಸಲಾಗುತ್ತದೆ.

ಮಕ್ಕಳು ಮೂರೋ ನಾಲ್ಕೋ ಭಾಷಾ ಸಮುದಾಯಗಳಿಗೆ (ರಾಥ್ವಿ, ಭಿಲಿ, ಚೌಧರಿ, ತಾಡ್ವಿ) ಸೇರಿದವರಾಗಿರುವುದರಿಂದ, ಆರಂಭಿಕ ತಿಂಗಳುಗಳಲ್ಲಿ ಮಕ್ಕಳಿಗೆ ಅವರವರ ಮಾತೃಭಾಷೆಯಲ್ಲಿಯೇ ಕಲಿಸಲಾಗುತ್ತದೆ. ವಸಂತಶಾಲಾದಲ್ಲಿ ಅನುಸರಿಸುತ್ತಿರುವ ಕ್ರಮದಂತೆ, ಮಕ್ಕಳು ತರಗತಿ ಕೊಠಡಿಯಲ್ಲಿ ಮತ್ತು ಹೊರಗೆ ಕೂಡ, ಶಿಕ್ಷಕರೊಡನೆ ಹಾಗೂ ಇತರ ಮಕ್ಕಳೊಡನೆ ಮಾತನಾಡುವಾಗ, ಆಟ ಆಡುವಾಗ, ಪಠ್ಯೇತರ ಚಟುವಟಿಕೆಗಳಲ್ಲಿ ತೊಡಗಿಕೊಂಡಾಗ ತಮ್ಮ ಮಾತೃಭಾಷೆಯಲ್ಲಿಯೇ ಮಾತನಾಡುವುದನ್ನು ಸಕ್ರಿಯವಾಗಿ ಉತ್ತೇಜಿಸಲಾಗುತ್ತದೆ. ಈ ಭಾಷೆಗಳನ್ನು ಇತರ ಮಕ್ಕಳು ಹಾಗೂ ಶಿಕ್ಷಕರು ಆಲಿಸುವುದರಿಂದ ನಿಧಾನವಾಗಿ ಅವರೂ ಅದನ್ನು ಉಪಯೋಗಿಸತೊಡಗುತ್ತಾರೆ. ಶಿಕ್ಷಕರು ಅವುಗಳನ್ನು ಭಾಷೆಯೂ ಸೇರಿದಂತೆ ಎಲ್ಲಾ ವಿಷಯಗಳ ಪಾಠ ಮಾಡಲು ಬಳಸುತ್ತಾರೆ. ಇದರಿಂದ ಮಗುವಿಗೆ ತನ್ನ ಭಾಷೆಯ ಕುರಿತಾಗಿ ಹೆಮ್ಮೆಯ ಭಾವನೆ ಮೂಡುತ್ತದೆ ಮತ್ತು ಅದು ಭಾಷೆಯನ್ನು ವಿಶ್ವಾಸಪೂರ್ವಕವಾಗಿ ಬಳಸತೊಡಗುತ್ತದೆ. ಅದಕ್ಕೂ ಮುಖ್ಯವಾದುದೆಂದರೆ, ಮಗುವಿನ ಗ್ರಹಿಕೆಯು ಹೆಚ್ಚಿದಂತೆಲ್ಲ, ಹೆಚ್ಚು ಅರ್ಥವಾದಂತೆಲ್ಲ ಅಧ್ಯಯನದಲ್ಲಿ ಅಂದರೆ, ಓದು, ಬರಹಗಳಲ್ಲಿ ಅದಕ್ಕೆ ಆಸಕ್ತಿಯು ಹುಟ್ಟಲು ಅಥವಾ ಆಸಕ್ತಿ ಮತ್ತೆ ಚಿಗುರಲು ಇದರಿಂದ ನೆರವಾಗುತ್ತದೆ.

ಒಮ್ಮೆ ಮಗುವು ತನ್ನ ಮಾತೃಭಾಷೆಯಲ್ಲಿ ಪ್ರಾಥಮಿಕ ಸಾಕ್ಷರತೆಯನ್ನು ಪಡೆಯಲು ಆರಂಭಿಸಿದ ಮೇಲೆ ನಿಧಾನವಾಗಿ ಗುಜರಾತಿ ಭಾಷೆಯನ್ನು ಪರಿಚಯಿಸಿ ಅದಕ್ಕೆ ವರ್ಗಾಯಿಸ–ಲಾಗುತ್ತದೆ. ನಂತರ ಹಿಂದಿ, ಸಂಸ್ಕೃತ ಹಾಗೂ ಇಂಗ್ಲಿಷ್ ಭಾಷೆಗಳನ್ನು ಒಂದೊಂದಾಗಿ ಪರಿಚಯಿಸಿ, ಆ ಭಾಷೆಗಳಿಗೆ ಬದಲಾಯಿಸಲಾಗುತ್ತದೆ. ತರಗತಿಯ ಮಕ್ಕಳು ಮಾತನಾಡುವ ಎಲ್ಲಾ ಬುಡಕಟ್ಟು ಭಾಷೆಗಳನ್ನೂ ಪರಿಚಯಿಸಲಾಗುತ್ತದೆ. ಇದರಿಂದ ವಸಂತಶಾಲಾದಲ್ಲಿ ನಿಜಕ್ಕೂ ಬಹುಭಾಷಾ ವಾತಾವರಣವನ್ನು ನೋಡಬಹುದು. ಕಳೆದ ಎರಡು ವರ್ಷಗಳಿಂದ, ಜರ್ಮನಿ ದೇಶದ ಇಬ್ಬರು ವಿದ್ಯಾರ್ಥಿಗಳು (Gap-year students) ವಸಂತಶಾಲಾದಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಮಕ್ಕಳು ಅವರಿಂದ ಕೆಲವು ಜರ್ಮನ್ ನುಡಿಗಟ್ಟುಗಳನ್ನು ಹಾಗೂ ಹಾಡುಗಳನ್ನು ಕಲಿತಿದ್ದು, ಅವರಿಗೆ ಗುಜರಾತಿಯನ್ನೂ ಕಲಿಸಿದ್ದಾರೆ!

**ಕಲಿಕೆಯಲ್ಲಿನ ಅಂತರವನ್ನು ನಿವಾರಿಸುವುದು**

ಸೆಪ್ಟೆಂಬರ್ ಮತ್ತು ಮಾರ್ಚ್ ತಿಂಗಳ ನಡುವಿನ ಅವಧಿಯಲ್ಲಿ ಶಿಕ್ಷಕರು, ಯಾವ ಮಕ್ಕಳನ್ನು ಮುಖ್ಯವಾಹಿನಿಯ ಶಾಲೆಗಳಿಗೆ, ಅವರ ವಯಸ್ಸಿಗೆ ಸೂಕ್ತವಾದ ತರಗತಿಗೆ ಸೇರಿಸ–ಬೇಕಾಗುತ್ತದೆಯೋ, ಆ ಮಕ್ಕಳಲ್ಲಿ ಕಂಡುಬಂದ ಕಲಿಕೆಯ ಅಂತರವನ್ನು ಹೋಗಲಾಡಿಸಲು ತಮ್ಮ ಗಮನವನ್ನು ಕೇಂದ್ರೀಕರಿಸುತ್ತಾರೆ. ಈ ಮಕ್ಕಳು ತಮ್ಮ ಶಾಲಾ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲು ಅನುವಾಗುವಂತೆ ಸರ್ಕಾರಿ ವಸತಿ ಶಾಲೆಯಲ್ಲಿ ಅವರವರ ಸಾಮರ್ಥ್ಯಕ್ಕನುಗುಣವಾಗಿ ಐದನೇ ಅಥವಾ ಆರನೆಯ ತರಗತಿಗೆ ಸೇರ್ಪಡೆಗೊಳ್ಳಲು ಸಾಧ್ಯವಾಗುವಂತೆ ಅವರಿಗೆ ತರಬೇತಿ ಕೊಟ್ಟು ತಯಾರು ಮಾಡಲಾಗುತ್ತದೆ. ಮಗುವಿನ ಸ್ವಾಭಾವಿಕ ಸಾಮರ್ಥ್ಯವನ್ನು ಮತ್ತು ಶಾಲೆಯು ಮಗುವಿನ ಕುಟುಂಬವು ನೆಲೆಸಿದ ಹಳ್ಳಿಯಿಂದ ಎಷ್ಟು ಹತ್ತಿರದಲ್ಲಿದೆ ಎಂಬುದನ್ನು ಆಧರಿಸಿ ಈ ಶಾಲೆಗಳನ್ನು ಆಯ್ಕೆ ಮಾಡಲಾಗುತ್ತದೆ. ಪ್ರತಿವರ್ಷ ಸರಾಸರಿ ಮೂವತ್ತು ಮಕ್ಕಳನ್ನು ಮುಖ್ಯವಾಹಿನಿ ಶಾಲೆಗಳಿಗೆ ಸೇರಿಸಲಾಗುತ್ತದೆ. ಅದರಲ್ಲಿ ಬಹುತೇಕ ಮಕ್ಕಳು ಹತ್ತನೆಯ ತರಗತಿಯ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಾರೆ.

**ವಾರ್ಷಿಕ ಯೋಜನೆಯೊಂದರ ಮಾದರಿ**

ವಸಂತಶಾಲಾ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳು ವರ್ಷದಲ್ಲಿ ಸುಮಾರು 300 ದಿನಗಳ ಕಾಲ ಶಾಲಾ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾರೆ. ಸಾಧಾರಣ ವಾರ್ಷಿಕ ಯೋಜನೆ–ಯೊಂದರ (ಜೂನ್ 2016 ರಿಂದ ಏಪ್ರಿಲ್ 2017) ಕಿರುನೋಟ ಇಲ್ಲಿದೆ :

| ತಿಂಗಳು | ಚಟುವಟಿಕೆ |
|---|---|
| ಜೂನ್ | ವಸಂತಶಾಲಾದಲ್ಲಿ ಈಗಾಗಲೇ ಓದುತ್ತಿರುವ ವಿದ್ಯಾರ್ಥಿಗಳ ಆಗಮನ. ಹಿಂದಿನ ಶೈಕ್ಷಣಿಕ ವರ್ಷದಲ್ಲಿ ಮುಖ್ಯವಾಹಿನಿ ಶಾಲೆಗೆ ಸೇರ್ಪಡೆಗೊಂಡ ಮಕ್ಕಳು ತಮ್ಮ ಹೊಸ ಶಾಲೆಗಳಲ್ಲಿ ಚೆನ್ನಾಗಿ ಹೊಂದಿಕೊಂಡಿದ್ದಾರೋ ಇಲ್ಲವೋ ಎಂಬುದನ್ನು ಖಚಿತಪಡಿಸಿಕೊಳ್ಳುವುದು. ಹೊಸ ವಿದ್ಯಾರ್ಥಿಗಳನ್ನು ಗುರುತಿಸಿ ದಾಖಲಿಸಿಕೊಳ್ಳುವುದು. ಪಾಠ ಬೋಧನೆ ಮತ್ತು ಎಲ್ಲಾ ಸಹಪಠ್ಯ ಚಟುವಟಿಕೆಗಳು ಆರಂಭವಾಗುತ್ತವೆ. ಪುಸ್ತಕಗಳು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲಾಗುತ್ತದೆ. ಒಂದು ಜೊತೆ ಹೊಸ ಸಮವಸ್ತ್ರ ಮತ್ತು ಪಾದರಕ್ಷೆಗಳಿಗಾಗಿ ಮಕ್ಕಳ ಅಳತೆಯನ್ನು ಪಡೆಯಲಾಗುತ್ತದೆ. ಮೊದಲನೆಯ ಅವಧಿಯು (First term) ಬಹುಪಾಲು ಶಾಲಾಕಾರ್ಯಗಳ ಮೇಲೆ ಕೇಂದ್ರೀಕೃತವಾಗಿರುತ್ತದೆ. ಏಕೆಂದರೆ, ಮಳೆಯಿಂದಾಗಿ ಹೊರಾಂಗಣ ಚಟುವಟಿಕೆಗಳನ್ನು ಕೈಗೊಳ್ಳಲಾಗುವುದಿಲ್ಲ. |
| ಜುಲೈ | ಪಾಠ ಬೋಧನೆ ಮತ್ತು ಚಟುವಟಿಕೆಗಳು ಮುಂದುವರೆಯುತ್ತವೆ. ಹೊಸ ಮಕ್ಕಳಿಗೆ ನೆಲೆಗೊಳ್ಳಲು ನೆರವು ನೀಡಲಾಗುತ್ತದೆ. |
| ಆಗಸ್ಟ್–ಸೆಪ್ಟೆಂಬರ್ | ಪಾಠ ಮತ್ತು ಚಟುವಟಿಕೆಗಳು ಮುಂದುವರೆಯುತ್ತವೆ. ಹಬ್ಬಗಳನ್ನು ಆಚರಿಸಲಾಗುತ್ತದೆ. ನವರಾತ್ರಿ/ದಸರಾಕ್ಕೆ ಚಿಕ್ಕದೊಂದು ರಜೆಯಿರುತ್ತದೆ. |
| ಅಕ್ಟೋಬರ್ | ಅನೌಪಚಾರಿಕವಾದ ಮಧ್ಯಾವಧಿ ಪರೀಕ್ಷೆಯನ್ನು ನಡೆಸಲಾಗುತ್ತದೆ |
| ಅಕ್ಟೋಬರ್–ನವೆಂಬರ್ | ಅಕ್ಟೋಬರ್ 27 ರಿಂದ ನವಂಬರ್ 9 ರವರೆಗೆ ದೀಪಾವಳಿ ರಜೆ. |
| ನವೆಂಬರ್ | ಎರಡನೆಯ ಅವಧಿಯು (Second term) ಇನ್ನೂ ಅನೇಕ ಹೊರಾಂಗಣ ಚಟುವಟಿಕೆಗಳಿಗೆ ಅನುವು ಮಾಡಿಕೊಡುತ್ತದೆ. ಶಾಲೆಗೆ ಭೇಟಿ ನೀಡುವವರ ಸಂಖ್ಯೆ ಹೆಚ್ಚಿರುತ್ತದೆ. ಜೊತೆಗೆ ಬಹಳಷ್ಟು ಅಕಾಡೆಮಿ ಚಟುವಟಿಕೆಗಳೂ ಇರುತ್ತಿದ್ದು ಕೆಲವೊಂದರಲ್ಲಿ ಮಕ್ಕಳೂ ಪಾಲ್ಗೊಳ್ಳುತ್ತಾರೆ.<br><br>ನವೆಂಬರ್ 19 ರಿಂದ 25 ರವರೆಗೆ 'ಗಿಡ ನೆಡುವ ಸಪ್ತಾಹ'ವನ್ನು ಆಚರಿಸಲಾಗುವುದು. ಆ ಸಮಯದಲ್ಲಿ ಮಕ್ಕಳಿಗೆ ಕೃಷಿ ಮತ್ತು ತೋಟಗಾರಿಕೆಯನ್ನು (ಹೂ ಮತ್ತು ಹಣ್ಣಿನ ತೋಟ) ಪರಿಚಯಿಸಲಾಗುವುದು. ಮಕ್ಕಳು ತೋಟವನ್ನು ನಿರ್ಮಿಸಲು ತಮ್ಮದೇ ಆದ ಭೂಮಿಯ ತುಂಡೊಂದನ್ನು ಆಯ್ದುಕೊಳ್ಳುತ್ತಾರೆ. ಅದರಲ್ಲಿ ಮೆಂತೆ, ಕೊತ್ತಂಬರಿ, ಪಾಲಕ್, ಕಡಲೆ ಮತ್ತು ಬದನೆ ಮುಂತಾದ ನಿರ್ದಿಷ್ಟ ಕಾಲದಲ್ಲಷ್ಟೇ ಬೆಳೆಯುವ ತರಕಾರಿ ಬೀಜಗಳನ್ನು ಬಿತ್ತುವರು.<br><br>ಮಕ್ಕಳು ವಸಂತಶಾಲಾದಲ್ಲಿ ಇರುವಷ್ಟು ದಿನವೂ ತಮ್ಮ ತೋಟವನ್ನು ತಾವೇ ನೋಡಿಕೊಳ್ಳುತ್ತಾರೆ. ಈ ಹಿಂದಿನ ವರ್ಷದ ಮಕ್ಕಳ ತಂಡವೊಂದು ಎರೆಹುಳ ಗೊಬ್ಬರವನ್ನು ಕೂಡ ತಯಾರಿಸಿತ್ತು. ತೋಟಗಾರಿಕೆಯು ಮಕ್ಕಳನ್ನು ಪ್ರಕೃತಿ, ಭೂಮಿ ಹಾಗೂ ಕೃಷಿಯೊಂದಿಗೆ ಸಂಪರ್ಕದಲ್ಲಿರಿಸುತ್ತದೆ. ಜೊತೆಗೆ, ಅದರಿಂದ ಕಲಿಯುತ್ತಲೇ ಕೇಂದ್ರಕ್ಕೆ ಕೊಡುಗೆಯನ್ನು ನೀಡುವ ಅವಕಾಶವನ್ನೂ ಅವರಿಗೆ ಒದಗಿಸುತ್ತದೆ. ಅಕಾಡೆಮಿಗೆ ತನ್ನದೇ ಆದ ಒಂದು ಕ್ಯಾಂಟೀನ್ ಇದ್ದು, ಅಲ್ಲಿ ನಮ್ಮದೇ ಉತ್ಪನ್ನಗಳನ್ನು ಬಳಸಲಾಗುತ್ತದೆ. ಮಕ್ಕಳು ಕ್ಯಾಂಟೀನ್‌ನಲ್ಲಿಯೂ ಕೆಲ ಸಮಯವನ್ನು ಕಳೆಯುವುದನ್ನು ಆ ಮೂಲಕ ಅಡುಗೆಗೆ ಸಂಬಂಧಿಸಿದ ಸಣ್ಣ ಪುಟ್ಟ ಕೆಲಸಗಳನ್ನು ಕಲಿಯುವುದನ್ನು ಪ್ರೋತ್ಸಾಹಿಸಲಾಗುತ್ತದೆ. ಇದು ಮಕ್ಕಳಲ್ಲಿ ಗುಂಪಾಗಿ ಕೆಲಸ ಮಾಡುವ ಮನೋಧರ್ಮವನ್ನು ಹಾಗೂ ಜೀವನ ಕೌಶಲ್ಯಗಳನ್ನು ಮೈಗೂಡಿಸುವಲ್ಲಿ ಸಹಕಾರಿಯಾಗಿದೆ. ನವೆಂಬರ್ 28 ರಂದು ವಸಂತಶಾಲಾದ ಶಿಕ್ಷಕರುಗಳು ತೇಜ್‌ಗಢ್‌ನಲ್ಲಿ ಪ್ರತಿ ಸೋಮವಾರ ನಡೆಯುವ **ಹಾತ್ ಬಜಾರ್** ಅನ್ನು ತೋರಿಸಲು ಮಕ್ಕಳನ್ನು ಅಲ್ಲಿಗೆ ಕರೆದೊಯ್ಯುವರು. ಇದು ಹಳ್ಳಿಯೊಂದರಲ್ಲಿ ವಾರಕ್ಕೊಮ್ಮೆ ನಡೆಯುವ ಸಂತೆ. ಅಲ್ಲಿಗೆ ಸಮುದಾಯಗಳು ತಮ್ಮ ಕುಟುಂಬ ನಿರ್ವಹಣೆ, ಕೃಷಿ, ಪಶುಸಂಗೋಪನೆಗಳಿಗೆ ಸಂಬಂಧಿಸಿ, ದೈನಂದಿನ ಬದುಕಿಗೆ ಬೇಕಾದ ಸಾಮಗ್ರಿಗಳನ್ನು ಕೊಳ್ಳಲು ಮತ್ತು ಮಾರಲು ಬರುತ್ತಾರೆ. ಹಾತ್ ಬಜಾರ್ ಸಮೀಪದ ಹಳ್ಳಿಗಳಿಂದ ಬರುವ ಜನರಿಗೆ ಮದುವೆ ಸಂಬಂಧಗಳ ಬಗ್ಗೆ ಮಾತುಕತೆ ಆಡಲು, ವಿಶೇಷ ಕಾರ್ಯಕ್ರಮಗಳಿಗೆ ಆಮಂತ್ರಣ ನೀಡಲು, ಜಾನುವಾರುಗಳನ್ನು ಮಾರುವುದು ಇತ್ಯಾದಿ ಕೆಲಸಗಳಿಗೆ ಪರಸ್ಪರ ಭೇಟಿಯಾಗಲು ಅಗತ್ಯವಾದ ಒಂದು ಸಾಮಾಜಿಕ ಅವಕಾಶವಾಗಿಯೂ ಕೆಲಸ ಮಾಡುತ್ತದೆ. ಗ್ರಾಮದ ಅರ್ಥವ್ಯವಸ್ಥೆಯಲ್ಲಿ ಹಾಗೂ ಸಾಮಾಜಿಕ ಸಂಬಂಧಗಳನ್ನು ಬೆಸೆಯುವಲ್ಲಿ ಸಂತೆಯು ಎಷ್ಟು ಮಹತ್ವದ ಪಾತ್ರವನ್ನು ಹೊಂದಿದೆ ಎನ್ನುವುದನ್ನು ಮಕ್ಕಳಿಗೆ ಅರ್ಥಮಾಡಿಸಲು ಅಲ್ಲಿಗೆ ಕರೆದೊಯ್ಯಲಾಗುತ್ತದೆ. |

| ತಿಂಗಳು | ಚಟುವಟಿಕೆ |
|---|---|
| ಡಿಸೆಂಬರ್– ಜನವರಿ | ವಸಂತಶಾಲಾದ ಶಿಕ್ಷಕರು ಸರ್ಕಾರಿ ಶಾಲೆಗಳ ಪಠ್ಯಕ್ರಮದ ಜೊತೆಗೆ ಈ ಸಮುದಾಯಗಳ ಸಾಂಪ್ರದಾಯಿಕ ಹಾಡು, ಕತೆ, ನೃತ್ಯ, ಸಂಗೀತ ಹಾಗೂ ಕಲೆಗಳನ್ನು ಸೇರಿಸುತ್ತಾರೆ. ಆದಿವಾಸಿ ಅಕಾಡೆಮಿಗೆ ವರ್ಷಪೂರ್ತಿ ಹಲವಾರು ಸಂಶೋಧಕರು, ವಿದ್ವಾಂಸರು ಹಾಗೂ ವಿದ್ಯಾರ್ಥಿಗಳು ಭೇಟಿ ನೀಡಿ ತಂಗುವುದರಿಂದ ಮಕ್ಕಳಿಗೆ ಅವರೊಡನೆ ಸಂಭಾಷಣೆ ನಡೆಸಲು ಮತ್ತು ಒಡನಾಡಲು ಅವಕಾಶ ಸಿಗುತ್ತದೆ. ಇದರಿಂದ ಅವರಿಗೆ ವಿವಿಧ ಭಾಷೆ ಮತ್ತು ಸಂಸ್ಕೃತಿಗಳ ಪರಿಚಯವಾಗುತ್ತದೆ. ಇದು, ವಿಶಾಲವಾದ ಬಾಹ್ಯಜಗತ್ತಿನೊಡನೆ ಸ್ನೇಹ ವಿಶ್ವಾಸಗಳಿಂದ ಬೆರೆಯಲು ಅವರಿಗೆ ಆತ್ಮವಿಶ್ವಾಸವನ್ನು ಬೆಳೆಸುತ್ತದೆ.<br><br>ಆದಿವಾಸಿ ಅಕಾಡೆಮಿಯು ಕಾಲಕಾಲಕ್ಕೆ ನಡೆಸುವ ಸಂಗೀತ ಮತ್ತು ಕಲೆಗೆ ಸಂಬಂಧಿಸಿದ ಕಾರ್ಯಾಗಾರಗಳಲ್ಲಿ ಭಾಗವಹಿಸುವಂತೆ ಮಕ್ಕಳನ್ನು ಪ್ರೋತ್ಸಾಹಿಸಲಾಗುತ್ತದೆ. ಈ ವರ್ಷ 2016ರ ಡಿಸೆಂಬರ್ 10ರಿಂದ 17ರವರೆಗೆ ಭಾಷಾ ಕೇಂದ್ರವು ಆದಿವಾಸಿ ಅಕಾಡೆಮಿಯಲ್ಲಿ ಆಯಿಲ್ ಆ್ಯಂಡ್ ನ್ಯಾಚುರಲ್ ಗ್ಯಾಸ್ ಕಾರ್ಪೋರೇಷನ್‌ನ (ONGC) ನೆರವಿನೊಂದಿಗೆ ಆಯೋಜಿಸಿದ್ದ ಒಂದು ವಾರದ ಅವಧಿಯ ಕಲಾವಿದರ ಕಾರ್ಯಾಗಾರದಲ್ಲಿ ಮಕ್ಕಳು ಕೂಡಾ ಭಾಗವಹಿಸಿದ್ದರು. ಭಾಷಾ ಕೇಂದ್ರವು ತಮಿಳುನಾಡು, ಗುಜರಾತ್, ಮಹಾರಾಷ್ಟ್ರ ಮತ್ತು ರಾಜಸ್ಥಾನಗಳಿಂದ ಆದಿವಾಸಿ ಕಲಾವಿದರನ್ನು ಆಹ್ವಾನಿಸಿತ್ತು. ಮಕ್ಕಳು ತಮ್ಮ ತರಗತಿಗಳೆಲ್ಲ ಮುಗಿದ ಮೇಲೆ ಈ ಕಲಾವಿದರೊಡನೆ ಬೆರೆತು, ಚಿತ್ರ ಬಿಡಿಸುವುದು, ಜೇಡಿಮಣ್ಣಿನ ಆಕೃತಿಗಳನ್ನು ನಿರ್ಮಿಸುವುದು, ಮಣಿಗಳಿಂದ ಆಭರಣಗಳನ್ನು ತಯಾರಿಸುವುದು ಮುಂತಾದವುಗಳನ್ನು ಕಲಿತರು. ಕಲಾವಿದರು ತಮ್ಮ ಕೆಲಸಕಾರ್ಯಗಳು ಮುಗಿದ ನಂತರ ಮಕ್ಕಳಿಗೆ ತಮ್ಮ ಕಲೆಯನ್ನು ಹೇಳಿಕೊಡಲು ವಿಶೇಷ ಅವಧಿಯನ್ನು ನಡೆಸುತ್ತಿದ್ದರು. ಕಾರ್ಯಾಗಾರವು ಭಾರತದ ಇನ್ನಿತರ ಪ್ರಾಂತಗಳಲ್ಲಿ ರೂಢಿಯಲ್ಲಿರುವ ಆದಿವಾಸಿ ಕಲೆಗಳನ್ನು ಮಕ್ಕಳಿಗೆ ಪರಿಚಯಿಸಿತು. ಇದು ಭಾಷೆ ಹಾಗೂ ಸಂಸ್ಕೃತಿಗಳಲ್ಲಿನ ವೈವಿಧ್ಯತೆಯ ಬಗ್ಗೆ ತಿಳುವಳಿಕೆಯನ್ನು ಹಾಗೂ ಗೌರವವನ್ನು ಅವರಲ್ಲಿ ಮೈಗೂಡಿಸುತ್ತದೆ. ಕಾರ್ಯಾಗಾರದ ಅವಧಿಯಲ್ಲಿ, ವಿಶೇಷ ಸೃಜನಶೀಲ ಪ್ರತಿಭೆಯನ್ನು ಹೊಂದಿರುವಂಥ ಮತ್ತು ಅವರ ಪ್ರತಿಭೆಗಳನ್ನು ಪೋಷಿಸಿ ಬೆಳೆಸಬೇಕಾದಂತಹ ನಾಲ್ಕು ಮಕ್ಕಳನ್ನು ಕಲಾವಿದರು ಗುರುತಿಸಿದರು. |
| ಫೆಬ್ರವರಿ | ಸಮೀಪದ ಒಂದು ಸ್ಥಳಕ್ಕೆ ಒಂದು ದಿನದ ವನ ಭೋಜನ ಎಂಬ ಚಿಕ್ಕ ಪ್ರವಾಸವನ್ನು ಆಯೋಜಿಸಲಾಗಿತ್ತು. ಕೆಲವು ಹಿರಿಯ ಮಕ್ಕಳು ತಮ್ಮ ಶಿಕ್ಷಕರು ಮತ್ತು ಅಕಾಡೆಮಿಯ ಇತರರೊಡನೆ ಐದು ಕಿ.ಮೀ. ದೂರದ ವಡೋದರಾ ಮ್ಯಾರಥಾನ್‌ನಲ್ಲಿ ಭಾಗವಹಿಸಲು ವಡೋದರಾಕ್ಕೆ ಹೋಗುತ್ತಾರೆ. ಆ ಓಟದಲ್ಲಿ, ಶಿಕ್ಷಣ, ಭಾಷಾ ವೈವಿಧ್ಯತೆ ಹಾಗೂ ಬುಡಕಟ್ಟು ಜನರ ಹಕ್ಕುಗಳ ಮಹತ್ವವನ್ನು ಸಾರುವ ಫಲಕಗಳನ್ನು ಅವರು ಹಿಡಿದಿದ್ದರು. |
| ಮಾರ್ಚ್– ಏಪ್ರಿಲ್ | ಹೋಳಿಹಬ್ಬವು ಬುಡಕಟ್ಟು ಸಮುದಾಯಗಳಿಗೆ ಅತ್ಯಂತ ಪ್ರಮುಖವಾದ ಒಂದು ಹಬ್ಬವಾಗಿರುವುದರಿಂದ ಈ ಸಮಯದಲ್ಲಿ ಮಕ್ಕಳು ಮನೆಗೆ ತೆರಳಿ ತಮ್ಮ ಕುಟುಂಬಗಳೊಂದಿಗೆ ಹಬ್ಬವನ್ನು ಆಚರಿಸಲು ಅನುವಾಗುವಂತೆ ಚಿಕ್ಕದೊಂದು ರಜೆ ವಿರಾಮವನ್ನು ವಸಂತಶಾಲಾ ನೀಡುತ್ತದೆ. ಬೇಸಿಗೆ ಸಮೀಪಿಸಿದಂತೆ ಓದು, ಅಭ್ಯಾಸದತ್ತ ಮತ್ತು ವಾಡಿಕೆಯ ಶಾಲೆಗಳಲ್ಲಿ ದಾಖಲಾತಿ ಪಡೆದು ಮುಖ್ಯವಾಹಿನಿಗೆ ಸೇರಿಸಬೇಕಾದ ಮಕ್ಕಳನ್ನು ಪರೀಕ್ಷೆಗೆ ತಯಾರು ಮಾಡುವುದರತ್ತ ಗಮನ ಕೇಂದ್ರೀಕರಿಸಲಾಗುತ್ತದೆ. |



**ಸಂಧ್ಯಾ ಗಜ್ಜರ್** ಅವರು ಎಮ್.ಎಸ್. ಯೂನಿವರ್ಸಿಟಿ, ಬರೋಡಾದಲ್ಲಿ (ವಡೋದರಾ) ಇಂಗ್ಲಿಷ್ ಸಾಹಿತ್ಯ, ಭಾಷಾವಿಜ್ಞಾನ ಹಾಗೂ ಕಲಾ ಇತಿಹಾಸವನ್ನು ವ್ಯಾಸಂಗ ಮಾಡಿದ್ದಾರೆ. ಬಹಳ ವರ್ಷಗಳಿಂದ ಇವರು ಅಭಿವೃದ್ಧಿ, ಜನಪ್ರಿಯ ವಿಜ್ಞಾನ ಹಾಗೂ ಸಂಸ್ಕೃತಿಗೆ ಸಂಬಂಧಿಸಿದಂತೆ ವೃತ್ತಪತ್ರಿಕೆ ಮತ್ತು ನಿಯತಕಾಲಿಕೆಗಳಿಗೆ ಹವ್ಯಾಸಿ ಲೇಖಕರಾಗಿ ಲೇಖನಗಳನ್ನು ಬರೆಯುತ್ತಾರೆ. ಇವರು, ಭಾಷಾ ಸಂಶೋಧನೆ ಮತ್ತು ಪ್ರಕಾಶನ ಕೇಂದ್ರದ ವಿಶ್ವಸ್ಥ ಮಂಡಳಿಯ ಸ್ಥಾಪಕ ಸದಸ್ಯರಲ್ಲೊಬ್ಬರು. 2015ರಿಂದ ಅದರ ಉಸ್ತುವಾರಿ ವ್ಯವಸ್ಥಾಪಕ ಟ್ರಸ್ಟಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ನವರಚನಾ ಎಜುಕೇಷನ್ ಸೊಸೈಟಿಯ (ಸ್ಥಾಪನೆ;1965) ವಿಶ್ವಸ್ಥ ಮಂಡಳಿಯ ಸದಸ್ಯರೂ ಆಗಿದ್ದು ಅದರ ಕಾರ್ಯಕಾರಿ ಸಮಿತಿಯ ಸಕ್ರಿಯ ಸದಸ್ಯರೂ ಆಗಿದ್ದಾರೆ. ಈ ಸಂಸ್ಥೆಯು ವಡೋದರಾದಲ್ಲಿ ನಾಲ್ಕು ಶಾಲೆಗಳು ಮತ್ತು ಒಂದು ವಿಶ್ವವಿದ್ಯಾಲಯವನ್ನು ನಡೆಸುತ್ತಿದೆ. ಇವರನ್ನು sandhyagajjar@gmail.com ಮೂಲಕ ಸಂಪರ್ಕಿಸಬಹುದು.



**ಸೋನಲ್ ಬಕ್ಷಿ** ಇವರು ಸಾಹಿತ್ಯದ ಹಿನ್ನೆಲೆಯನ್ನು ಹೊಂದಿದ್ದು ಸಮಾಜ ವಿಜ್ಞಾನದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ. ಆದಿವಾಸಿಗಳು, ಅಧಿಸೂಚಿತ ಪಟ್ಟಿಯಲ್ಲಿರುವ ಬುಡಕಟ್ಟುಗಳು ಹಾಗೂ ಅಲೆಮಾರಿ ಸಮುದಾಯಗಳೊಡನೆ ನಿಕಟವಾಗಿ ಕೆಲಸ ಮಾಡಿದ ಅನುಭವ ಇವರಿಗಿದೆ. ಸಂಶೋಧನೆಯ ಜೊತೆಗೆ ಶಿಕ್ಷಣ, ಕಲೆ, ಸಂಸ್ಕೃತಿ, ಮಾನವ ಹಕ್ಕುಗಳು ಹಾಗೂ ಅಭಿವೃದ್ಧಿಗಳಂತಹ ವೈವಿಧ್ಯಮಯ ಕ್ಷೇತ್ರಗಳಲ್ಲಿ ತಳಮಟ್ಟದಲ್ಲಿ ದುಡಿದ ಅನುಭವವನ್ನೂ ಇವರು ಹೊಂದಿದ್ದಾರೆ. ನಿಧಿ ಸಂಗ್ರಹಣೆ, ಯೋಜನೆಯ ನಿರ್ವಹಣೆ ಹಾಗೂ ಪ್ರಕಾಶನ ಕ್ಷೇತ್ರದಲ್ಲಿಯೂ ವಿಶೇಷ ಪರಿಣತಿಯನ್ನು ಇವರು ಹೊಂದಿದ್ದಾರೆ. ಇವರನ್ನು sonal.bhasha@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ಶಿಕ್ಷಣ ನೀತಿ ಮತ್ತು ಆಚರಣೆಯಲ್ಲಿ | ಒಂದು ವಿಮರ್ಶಾತ್ಮಕ ದೃಷ್ಟಿಕೋನ

ಡಾ. ಶಾಶ್ವತಿ ಪೈಕ್

ಎಲ್ಲಾ ಮಕ್ಕಳು ಕಲಿಯಬಲ್ಲರೆಂಬುದು ಸತ್ಯ ಸಂಗತಿ. ಕಲಿಕೆಯು ಯಾವುದೇ ಸ್ಥಳದಲ್ಲ ಮತ್ತು ಯಾವುದೇ ಸಮಯದಲ್ಲ ಆಗಬಹುದು. ಮಕ್ಕಳ ಕಲಿಕೆಯ ಅವಕಾಶಗಳು ಹಲವಾರು ಕಾರಣಗಳಿಂದ ವಿಭಿನ್ನವಾಗಿರುತ್ತವೆ. ಕಲಿಕೆಯನ್ನು ಆಸಕ್ತಿದಾಯಕ ರೀತಿಯಲ್ಲಿ ಸುಗಮಗೊಳಿಸುವ ಶಾಲೆಗಳಿಗೆ ಪ್ರವೇಶವನ್ನು ಪಡೆಯುವ ಹಾಗೂ ಎಲ್ಲಾ ಆಧುನಿಕ ಕಲಿಕಾ ಸಾಧನಗಳನ್ನು ಕೈಗೆಟುಕಿಸಿಕೊಳ್ಳುವ ಮಕ್ಕಳಿದ್ದಾರೆ. ಹಾಗೆಯೇ, ತಮ್ಮ ಪರಿಸ್ಥಿತಿ ಅಥವಾ ಸಂದರ್ಭದ ಕಾರಣಗಳಿಂದಾಗಿ ಇಂತಹ ಅವಕಾಶಗಳು ಸಿಗದಿರುವ, ಸವಲತ್ತು ಹೊಂದಿರದ ಶಾಲೆಗೆ ಹೋಗುತ್ತಿರುವ ಮೊದಲ ಪೀಳಿಗೆಯ ಮಕ್ಕಳೂ ಇದ್ದಾರೆ. ಅವರಿಗೆ ಕಲಿಕೆಯಲ್ಲಿ ಶಾಲೆಯು ಅನೇಕ ವಿಧಗಳಲ್ಲಿ ದೊಡ್ಡ ಪಾತ್ರವನ್ನು ವಹಿಸುತ್ತದೆ. ಅಂಥ ಒಂದು ಸ್ಥಳ ರಾಜಸ್ಥಾನದ ಬಾಡ್‌ಮೇರ್ ಜಿಲ್ಲೆಯ ಶಿವ್ ಬ್ಲಾಕ್. ಈ ಶಾಲೆಯಲ್ಲಿ ಮೂರು ವರ್ಷಗಳ ಒಂದು ಸಂಶೋಧನಾ ಅಧ್ಯಯನವನ್ನು ಕೈಗೊಳ್ಳಲಾಯಿತು. ಈ ಲೇಖನವು ಪ್ರಮುಖವಾಗಿ ಆ ಸಂಶೋಧನೆಯನ್ನು ಆಧರಿಸಿದ್ದು, ಈ ಕೆಳಗಿನ ಮುಖ್ಯಾಂಶಗಳನ್ನು ಸೂಚಿಸುತ್ತದೆ:

- ಎಲ್ಲ ಸಾಮಾಜಿಕ ಅಭಿವೃದ್ಧಿಯ ಮಾನದಂಡದ ಸ್ಥಾನಮಾನಗಳು ಮಕ್ಕಳ ಕಲಿಕೆಗೆ ತಡೆಯೊಡ್ಡುತ್ತವೆಯೋ ಅದಕ್ಕೆ ಸಂಬಂಧಿಸಿದ ವಿಚಾರಗಳು – ಅನಕ್ಷರತೆಯನ್ನೂ ಒಳಗೊಂಡಂತೆ– ಬಹಳ ಆತಂಕಕಾರಿಯಾಗಿವೆ.

- ಕಲಿಯಲು ಉತ್ಸುಕರಾಗಿರುವ ಆದರೆ ಸಾಕಷ್ಟು ಅವಕಾಶವಿಲ್ಲದೆ ದಶಕಗಳಷ್ಟು ಹಿಂದಕ್ಕೆ ಉಳಿಯುವ ಮಕ್ಕಳಿಗೆ ವ್ಯವಸ್ಥೆಯ ಸಮಸ್ಯೆಗಳು ಮತ್ತೂ ದೊಡ್ಡ ಅಡಚಣೆಯನ್ನುಂಟುಮಾಡುತ್ತವೆ.

- ಅಂತಹ ಮಕ್ಕಳ ಕಲಿಕೆಯನ್ನು ಹೆಚ್ಚಿಸಲು ಸರ್ಕಾರ ಮತ್ತು ಅಥವಾ ಇತರ ಏಜೆನ್ಸಿಗಳು ಆದ್ಯತೆ ನೀಡಬೇಕಾದ ತಾತ್ಕಾಲಿಕ ವಲಯಗಳು ಅಥವಾ ಕ್ಷೇತ್ರಗಳು.

**ಮಕ್ಕಳ ಕಲಿಕೆಗೆ ಅಡ್ಡಿಯಾಗುವ ಸನ್ನಿವೇಶ**

ನೀವು ಅಲ್ಲಿನ ಒಂದು ಶಾಲೆಗೆ ಭೇಟಿ ನೀಡಿದರೆ, ಪ್ರಾಥಮಿಕ ತರಗತಿಯಲ್ಲಿ (1ನೇ ತರಗತಿಯಿಂದ 7ನೇ ತರಗತಿ) ಕಲಿಯುತ್ತಿರುವ ಮಕ್ಕಳು ಅವರಿಗೆ ಪರಿಚಯವಿಲ್ಲದಿದ್ದರೂ ನಿಮ್ಮನ್ನು ತರಗತಿಯಲ್ಲಿ 'ಏನನ್ನಾದರೂ' ಕಲಿಸಿ ಎಂದು ಕೇಳಬಹುದು. ಇದನ್ನು ನಾನು ರಾಜಸ್ಥಾನದ ಥಾರ್ ಮರುಭೂಮಿ ಅಂಚಿನಲ್ಲಿರುವ ಶಿವ ಬ್ಲಾಕ್‌ನ ಶಾಲೆಗಳಲ್ಲಿ ಪದೇಪದೇ ಅನುಭವಿಸಿದ್ದೇನೆ. ಈ ಶಾಲೆಗಳು ಸಣ್ಣ ಕುಗ್ರಾಮಗಳನ್ನು (ಸ್ಥಳೀಯವಾಗಿ ಧಾನಿ ಎನ್ನುತ್ತಾರೆ) ಒಳಗೊಂಡಿರುವ ದೂರದ ಹಳ್ಳಿಗಳಲ್ಲಿವೆ. ಇಲ್ಲಿ ಸಾರಿಗೆ ಮತ್ತು ಸಂಪರ್ಕದ ವ್ಯವಸ್ಥೆ ಸರಿಯಾಗಿಲ್ಲ, ಆಗಾಗ್ಗೆ ವಿದ್ಯುತ್ ಸಂಪರ್ಕ ಕಡಿತವಿರುತ್ತದೆ ಅಥವಾ ಸಂಪರ್ಕವೇ ಇರುವುದಿಲ್ಲ ಮತ್ತು ಇಂಟರ್ನೆಟ್ ಒಂದು ಕನಸೇ ಸರಿ. ಅನೇಕ ಮಕ್ಕಳ ಹೆತ್ತವರು ಅನಕ್ಷರಸ್ಥರು ಅಥವಾ ಅಲ್ಪಸ್ವಲ್ಪ ಕಲಿತವರಷ್ಟೇ. ಇಲ್ಲಿ ಹೆಣ್ಣು ಭ್ರೂಣಹತ್ಯೆ ಮತ್ತು ಬಾಲ್ಯವಿವಾಹ ತೀರಾ ಸಾಮಾನ್ಯ. ಇಲ್ಲಿನ ಅಂಗನವಾಡಿಗಳು ಕೆಲಸ ಮಾಡುವುದೇ ಅಪರೂಪ ಮತ್ತು ಗ್ರಂಥಾಲಯವಂತೂ ಇಲ್ಲವೇ ಇಲ್ಲ.

ಈ ಮಕ್ಕಳು ಅಪರಿಚಿತರನ್ನು ತಮಗೆ ಏನಾದರೂ ಕಲಿಸಬೇಕೆಂದು ಏಕೆ ಕೋರುತ್ತಾರೆ? ಇದಕ್ಕೆ ಒಂದು ಕಾರಣವೆಂದರೆ ಇಂತಹ ಅನೇಕ ಶಾಲೆಗಳ ತರಗತಿಗಳಲ್ಲಿ ಶಿಕ್ಷಕರು ಇರುವುದಿಲ್ಲ, ಕೆಲವೊಮ್ಮೆ ಇಡೀ ದಿನ ಯಾರೂ ಇರುವುದೇ ಇಲ್ಲ. ಶಾಲಾ ಸಮಯದಲ್ಲಿ ಶಿಕ್ಷಕರು ಬೇರೆ ಯಾವುದಾದರೂ ಕೆಲಸದಲ್ಲಿ 'ಕಾರ್ಯನಿರತರಾಗಿರಬಹುದು', ಅದು ಪಾಠ ಹೇಳಿಕೊಡುವುದೇ ಆಗಿರಬೇಕಿಲ್ಲ. ವರ್ಷದಲ್ಲಿ ಅನೇಕ ಸಲ ಈ ಪರಿಸ್ಥಿತಿಯಿದ್ದರೆ ಮಕ್ಕಳಿಗೆ ಶಾಲೆಯಲ್ಲಿ ಕಲಿಯಲು ಅವಕಾಶ ಸಿಗುವುದಿಲ್ಲ. ಎಲ್ಲಿ ಬೇಕಾದರೂ ಕಲಿಯಬಹುದು ಎಂದು ಯಾರಾದರೂ ವಾದಿಸಿದರೆ ಖಂಡಿತವಾಗಿಯೂ ನಾನು ಅದನ್ನು ಒಪ್ಪುತ್ತೇನೆ. ಆದರೆ ಈ ಸ್ಥಳದಲ್ಲಿ ಕಲಿಕೆಗೆ ನಿರ್ದಿಷ್ಟ ಮಿತಿಗಳಿರುವ ಸನ್ನಿವೇಶವಿರುವುದರಿಂದ ಕಲಿಕೆಯು ಔಪಚಾರಿಕ ಶೈಕ್ಷಣಿಕ ಸ್ಥಳಗಳಲ್ಲಿ ಆಗುತ್ತದೆ ಎಂಬುದು ಪ್ರಶ್ನಾರ್ಹವಾಗುತ್ತದೆ. ಈ ಮಕ್ಕಳಿಗೆ ಅವರ ಮನೆಗಳಲ್ಲಿ ಔಪಚಾರಿಕ ಕಲಿಕೆಗೆ ಪೋಷಕರ ಬೆಂಬಲವಂತೂ ಇಲ್ಲ. ಅವರು ಏನು ಕಲಿಯುತ್ತಾರೆಂದರೆ ತಮ್ಮ ಸಮಾಜದ ಪಿತೃಪ್ರಧಾನ ಸಂಪ್ರದಾಯಗಳಾದ ಲಿಂಗ ತಾರತಮ್ಯ, ಬಾಲ್ಯ–ವಿವಾಹ ಇತ್ಯಾದಿ ಆಚರಣೆಗಳನ್ನು ಪೋಷಿಸುವ ನಂಬಿಕೆ ವ್ಯವಸ್ಥೆಗಳನ್ನು. ಈ ಬ್ಲಾಕ್‌ನ ಬಹುತೇಕ ಹಳ್ಳಿಗಳಿಗೆ ಹತ್ತಿರದ ಸರ್ಕಾರಿ ಪದವಿ ಕಾಲೇಜು 50 ಕಿ.ಮೀ. ದೂರದಲ್ಲಿದೆ. ಆದ್ದರಿಂದ ಇಲ್ಲಿನ ವಿದ್ಯಾರ್ಥಿಗಳಿಗೆ ಹನ್ನೆರಡನೇ ತರಗತಿಯ ನಂತರ ಶಿಕ್ಷಣವು ಕನಸಾಗಿ ಉಳಿದಿದೆ.

ರಾಜಸ್ಥಾನದ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಂಕದ (Human Development Index -HDI) ಪ್ರಕಾರ ಬಾಡ್‌ಮೇರ್ ಅತ್ಯಂತ ಕೆಳಸ್ಥಾನದಲ್ಲಿದೆ. ಅದರ ಎಚ್‌ಡಿಐ ಮೌಲ್ಯ ಕೇವಲ 0.4035, ಅದೇ ಜೈಪುರ ಜಿಲ್ಲೆಯ ಎಚ್‌ಡಿಐ ಮೌಲ್ಯ 0.7308 ಆಗಿದ್ದು ಪ್ರಥಮ ಸ್ಥಾನದಲ್ಲಿದೆ. (ಸಿಂಗ್ ಮತ್ತು ಕೇಸರಿ, 2016). ಸಾಕ್ಷರತೆ ಪ್ರಮಾಣ 2011ರ ಜನಗಣತಿಯಲ್ಲಿ ರಾಜಸ್ಥಾನ ರಾಜ್ಯದ ಒಟ್ಟು ಸರಾಸರಿ 66.1ರಷ್ಟಿದ್ದಾಗ ಬಾಡ್‌ಮೇರ್ ಜಿಲ್ಲೆಯಲ್ಲಿ ಶೇಕಡ 56.5ರಷ್ಟಿತ್ತು. ಸಾಕ್ಷರತೆಯಲ್ಲಿ ಬಾಡ್‌ಮೇರ್‌ನ ಲಿಂಗಾನುಪಾತವು ಶೇಕಡಾ 30.3ರಷ್ಟಿತ್ತು. ಈ ಕೆಳಗಿನ ಕೋಷ್ಟಕದಲ್ಲಿ 2011ರ ಜನಗಣತಿ ಪ್ರಕಾರ ಬಾರ್ಮರ್‌ನ ಶೇಕಡಾವಾರು ಅನಕ್ಷರಸ್ಥ ವಯಸ್ಕರ ಸಂಖ್ಯೆ ಬಹಳ ಹೆಚ್ಚು ಎಂದು ಸೂಚಿಸುತ್ತದೆ ಮತ್ತು ಆ ಕುಟುಂಬಗಳಲ್ಲಿ ಮಕ್ಕಳ ಕಲಿಕೆಗೆ ಅವಕಾಶ ಕಡಿಮೆ ಎಂಬುದನ್ನು ಈ ಆತಂಕಕಾರಿ ವಿಷಯವು ತೋರಿಸುತ್ತದೆ.

ಕೋಷ್ಟಕ 1: 2011ರ ಜನಗಣತಿಯ ಪ್ರಕಾರ ವಯಸ್ಕರ ಅನಕ್ಷರತೆ

| ಪ್ರದೇಶಗಳು | ವಯೋಗುಂಪು | ಒಟ್ಟು | ಗಂಡು | ಹೆಣ್ಣು |
|---|---|---|---|---|
| ಎಲ್ಲಾ ಪ್ರದೇಶಗಳು | 15-34 | 35.89 | 18.93 | 55.83 |
| | 35+ | 70.99 | 53.91 | 88.67 |
| ಗ್ರಾಮಾಂತರ | 15-34 | 37.68 | 19.88 | 58.69 |
| | 35+ | 74.23 | 57.34 | 91.63 |
| ನಗರ | 15-34 | 15.27 | 7.71 | 23.73 |
| | 35+ | 34.24 | 15.98 | 54.10 |

**ನೀತಿನಿಯಮಗಳಲ್ಲಿ ಕಂಡುಬರುವಂತೆ ವ್ಯವಸ್ಥೆಯ ಸಮಸ್ಯೆಗಳು**

ಶೈಕ್ಷಣಿಕ ಆಡಳಿತವು ಮೂರು ಪ್ರಮುಖ ಸ್ತಂಭಗಳನ್ನು ಹೊಂದಿದೆ: ನಿಬಂಧನೆಗಳು, ನಿಯಮಗಳು ಮತ್ತು ಧನಸಹಾಯ. ಭಾರತದಲ್ಲಿ ಶಿಕ್ಷಣವು ಸಹವರ್ತಿ ಪಟ್ಟಿಯ ಒಂದು ವಿಷಯವಾಗಿದೆ. ಆದ್ದರಿಂದ, ಈ ಸ್ತಂಭಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ನಿರ್ವಹಿಸಬೇಕು. ವಿಶೇಷ ಪ್ರಕರಣವೇನೂ ಅಲ್ಲದ ಬಾರ್ಮರ್–ನಂತಹ ದೂರ ಸ್ಥಳಗಳಲ್ಲಿ ಕಲಿಯುವ ಮಕ್ಕಳು ಮತ್ತು ಅವರ ಕಲಿಕೆಗಾಗಿ ಗಮನಹರಿಸುವ ಮುಖ್ಯ ಅಗತ್ಯಗಳನ್ನು ಸೂಚಿಸುವ ಕೆಲವು ಅತ್ಯಂತ ಪ್ರಮುಖ ಮಾನದಂಡಗಳನ್ನು ನೋಡೋಣ. ಆಡಳಿತದಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಮಕ್ಕಳಿರುವ ಹಲವಾರು ರಾಜ್ಯಗಳಿರುವುದು ವಾಸ್ತವ ಪರಿಸ್ಥಿತಿ.

2009ರ ಶಿಕ್ಷಣ ಹಕ್ಕು (Right to Education Act 2009-RTE) ಕಾಯ್ದೆಯು ವಿದ್ಯಾರ್ಥಿ ಹಾಗೂ ಶಿಕ್ಷಕರ ನಡುವಿನ ಅನುಪಾತ 1:30 ಎಂದು ನಿಗದಿಪಡಿಸಿದೆ. ರಾಜಸ್ಥಾನವನ್ನೂ ಸೇರಿದಂತೆ ಅನೇಕ ರಾಜ್ಯಗಳ ಶಿಕ್ಷಣ ಇಲಾಖೆಗಳು ಸರ್ಕಾರಿ ಶಾಲೆಗಳ ಬೆಂಬಲ ಸಿಬ್ಬಂದಿಗಳನ್ನು ತೆಗೆದು ಹಾಕಿವೆ. ಅಂತಹ ನಿರ್ಧಾರಗಳು ಶಿಕ್ಷಣದ ಮೇಲೆ ಭಾರೀ ಪರಿಣಾಮ ಬೀರಿವೆ. ಒಂದು ಶಾಲೆಯಲ್ಲಿ 30 ವಿದ್ಯಾರ್ಥಿಗಳಿದ್ದರೆ ಆ ಶಾಲೆಗೆ ಒಬ್ಬ ಶಿಕ್ಷಕ ಮಾತ್ರ ಇರುತ್ತಾರೆ. ಆದರೆ ದಾಖಲಾತಿ ಹೆಚ್ಚಿದರೆ ಉನ್ನತ ಅಧಿಕಾರಿಗಳ ಮಂಜೂರಾತಿಯ ಮೇಲೆ ಶಿಕ್ಷಕರ ಸಂಖ್ಯೆ ಹೆಚ್ಚಬಹುದು. ಶಿವ್ ಬ್ಲಾಕ್‌ನ ಅನೇಕ ಪ್ರಾಥಮಿಕ ಶಾಲೆಗಳಲ್ಲಿ ಕೇವಲ ಒಬ್ಬರು ಅಥವಾ ಇಬ್ಬರು ಶಿಕ್ಷಕರು ಇದ್ದಾರೆ. ಮಾಧ್ಯಮಿಕ ಶಾಲೆಯಲ್ಲಿ ಬಹುತೇಕ ಸಂದರ್ಭದಲ್ಲಿ ನಿರ್ದಿಷ್ಟ ವಿಷಯ ಸಂಬಂಧಿತ ಶಿಕ್ಷಕರು ಇಲ್ಲ. ಆದರೆ ಅಂತಹ ಶಾಲೆಗಳ ಮಕ್ಕಳು ಕಲಿಯಲು ಉತ್ಸುಕರಾಗಿದ್ದಾರೆ. ಆದ್ದರಿಂದ, ಅವರು ಶಿಕ್ಷಿತರೆಂದು ತೋರುವ ಯಾವುದೇ ಅಪರಿಚಿತರನ್ನು ತಮ್ಮ ತರಗತಿಯಲ್ಲಿ ಕಲಿಸಿ ಎಂದು ಕೇಳಿಕೊಳ್ಳುತ್ತಾರೆ.

ಸರ್ಕಾರದ ಎರಡು ಕಲ್ಪಿತ ವಿಷಯಗಳನ್ನು ನೋಡೋಣ ಮೊದಲಿಗೆ, ಒಬ್ಬ ಶಿಕ್ಷಕ 30 ವಿದ್ಯಾರ್ಥಿಗಳನ್ನು, ಅದರೊಂದಿಗೆ ಶಾಲೆಗೆ ಸಂಬಂಧಿಸಿದ ಚಟುವಟಿಕೆಗಳು ಮತ್ತು ಶಾಲಾಭಿವೃದ್ಧಿಯತ್ತ ಗಮನ ಹರಿಸಬೇಕು. ಎರಡನೆಯದಾಗಿ, ಪ್ರಾಥಮಿಕ ಶಾಲೆಗಳಲ್ಲಿ ಯಾವುದೇ ಬೆಂಬಲ ಸಿಬ್ಬಂದಿ ಇಲ್ಲದ ಕಾರಣ, ಬಹುಶಃ ವ್ಯವಸ್ಥೆಯು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಶಾಲೆಯ ನಿರ್ವಹಣೆಯ ಸಂಪೂರ್ಣ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕೆಂದು ಬಯಸುತ್ತದೆನಿಸುತ್ತದೆ. ಈ ಕಲ್ಪನೆಗಳನ್ನು ವಿಶ್ಲೇಷಿಸಿದರೆ ಅವು ಬಹಳ ಅಸಮಂಜಸವಾಗಿ ಕಾಣುತ್ತವೆ.

ನಿಮ್ಮನ್ನೇ ನೀವು ಬೇರೆಬೇರೆ ತರಗತಿಗಳಲ್ಲಿರುವ ಮತ್ತು ಬೇರೆಬೇರೆ ರೀತಿಯ ಗಮನಹರಿಸ–ಬೇಕಾದ ಅಗತ್ಯವಿರುವ 30–40 ಮಕ್ಕಳ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದಿರೆಂದು ಕಲ್ಪಿಸಿಕೊಳ್ಳಿ. ಶಿಕ್ಷಕರಾಗಿ ನೀವು ಸುಗಮಗೊಳಿಸಿದರೆ ಮಾತ್ರ ಮಕ್ಕಳು ಕಲಿಯಲು ಸಾಧ್ಯ. ನೀವು ಒಬ್ಬಂಟಿಯಾಗಿ ಏನು ಮಾಡುತ್ತೀರಾ? ಎಲ್ಲವನ್ನೂ ನೀವೇ ನಿರ್ವಹಿಸಬೇಕು. ಶಾಲೆಯ ದಾಖಲೆಗಳನ್ನು ತುಂಬಬೇಕು, ಮಧ್ಯಾಹ್ನದ ಊಟವನ್ನು ನೋಡಿಕೊಳ್ಳಬೇಕು. ಅಡುಗೆಯವ–ರೊಂದಿಗೆ ಸಹಕರಿಸಬೇಕು. ಜೊತೆಗೆ ಅದೇ ಸಮಯದಲ್ಲಿ, ನೀವು ಬೇರೆಬೇರೆ ತರಗತಿಯ ಮಕ್ಕಳಿಗೆ ಪಾಠ ಕಲಿಸಬೇಕು. ಈ ಎಲ್ಲವನ್ನೂ ಸಮನ್ವಯಗೊಳಿಸಬೇಕಾಗುತ್ತದೆ. ಈ ಎಲ್ಲಾ ಜವಾಬ್ದಾರಿಗಳನ್ನು ಹೊಂದಿರುವ ನೀವು ಶೈಕ್ಷಣಿಕ ವರ್ಷದಲ್ಲಿ ಎಷ್ಟರಮಟ್ಟಿಗೆ ಉತ್ತಮವಾಗಿ ಕೆಲಸವನ್ನು ಮಾಡಬಲ್ಲಿರಿ?

- ಏಕಕಾಲದಲ್ಲಿ ಹಲವು ತರಗತಿಗಳಲ್ಲಿ ಪಾಠ ಮಾಡಲು ಈ ಶಿಕ್ಷಕರು ಅರ್ಹರು ಎಂದು ನಾವು ಭಾವಿಸಿದರೂ ಅವರ ಶೈಕ್ಷಣಿಕ ಅರ್ಹತೆ ಮತ್ತು ಕೆಲಸದ ಅನುಭವವನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಸರ್ಕಾರದ ಅವಶ್ಯಕತೆಗಳ ನಿಯಮದ ಪ್ರಕಾರ ಪ್ರಾಥಮಿಕ ಶಾಲಾ ಶಿಕ್ಷಕರು (4ನೇ ತರಗತಿಯವರೆಗೆ ಕಲಿಸುವವರು) ಪದವೀಧರರು (ಯಾವುದೇ ಶಾಲಾ ವಿಷಯವನ್ನು ವಿಶೇಷ ಕಲಿತಿರಬೇಕೆಂಬುದೇನೂ ಇಲ್ಲ) ಅಥವಾ ಹನ್ನೆರಡನೇ ತರಗತಿ ಪಾಸಾಗಿದ್ದು ಶಿಕ್ಷಕ ತರಬೇತಿಯ ಡಿಪ್ಲೊಮಾ ಹೊಂದಿರಬೇಕು. ಇತರ ಆಡಳಿತ ಕಾರ್ಯಗಳನ್ನು ನಡೆಸುತ್ತಾ ಏಕಕಾಲಕ್ಕೆ ಹಲವು ತರಗತಿಗಳನ್ನು ನಿರ್ವಹಿಸಲು ಅವರು ಸಾಕಷ್ಟು ಪ್ರಬುದ್ಧರಾಗಿದ್ದಾರೆಯೇ?
- ಯಾವುದೇ ಬೆಂಬಲ ಸಿಬ್ಬಂದಿಯಿಲ್ಲದಿದ್ದರೆ ಶಾಲೆಯ ಆವರಣವನ್ನು ಯಾರು ನೋಡಿಕೊಳ್ಳುತ್ತಾರೆ? ಸಹಜವಾಗಿ ನಿರ್ವಹಣೆಯ ಜವಾಬ್ದಾರಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳದ್ದು ಎಂದರ್ಥವಾಗುತ್ತದೆ. ಅಂದರೆ ಶೌಚಾಲಯಗಳು, ಮಧ್ಯಾಹ್ನದ ಬಿಸಿಊಟ ಮಾಡುವ ಸ್ಥಳ, ತರಗತಿ ಕೊಠಡಿಗಳು, ಆಟದ ಮೈದಾನ, ಶಿಕ್ಷಕರ ಕೊಠಡಿಯ (ಇದ್ದರೆ?) ನಿರ್ವಹಣೆ ಯಾರದ್ದು? ಇಂತಹ ಸಂದರ್ಭದಲ್ಲಿ ಬಹುತೇಕ ಕೆಳಜಾತಿಯ ಮಕ್ಕಳು ಶುಚಿಮಾಡುವ ಕೆಲಸದ ಉಸ್ತುವಾರಿ ವಹಿಸಿಕೊಳ್ಳಬೇಕಾಗುತ್ತದೆ. ಇದು ಕಾನೂನುಬದ್ಧವೇ?

ಮಾಧ್ಯಮಿಕ ಶಾಲೆಗಳಲ್ಲಿ ಈ ಎಲ್ಲಾ ಸಮಸ್ಯೆಗಳ ಜೊತೆಗೆ ಪ್ರತಿಯೊಂದು ಪಠ್ಯವಿಷಯದಲ್ಲಿ ನಿರ್ದಿಷ್ಟ ಶಿಕ್ಷಕರ ಕೊರತೆಯೂ ಸೇರಿದೆ.

ಈ ಎಲ್ಲಾ ಕಲ್ಪಿತ ಭಾವನೆಗಳು ಅನೇಕರು ಭಾವಿಸುವಂತೆ ಕೇವಲ ಸವಲತ್ತಿಲ್ಲದ ಬಡ ಮಕ್ಕಳು ಮಾತ್ರ ಸರ್ಕಾರಿ ಶಾಲೆಗಳಿಗೆ ಹೋಗುತ್ತಾರೆ ಮತ್ತು ಈ ಶಾಲೆಗಳನ್ನು ಸುಧಾರಿಸುವ ಯಾವುದೇ ಪ್ರಯತ್ನ ಅನಗತ್ಯ ಎಂಬ ಸರ್ಕಾರಿ ಶಾಲೆಗಳ ಬಗೆಗಿನ ಧೋರಣೆಯನ್ನು ತೋರಿಸುತ್ತದೆ. ಕೆಲವು ದಿನಗಳ ಹಿಂದೆ, ಬಹಳ ಸಂಕಷ್ಟದ ಸನ್ನಿವೇಶಗಳಿಂದ ಬರುವ ಮಕ್ಕಳು ಇರುವ ಅಂತಹ ಒಂದು ಶಾಲೆಯಲ್ಲಿ ಕೆಲಸ ಮಾಡುವ ಒಬ್ಬ ವ್ಯಕ್ತಿ ನನಗೆ ಹೀಗೆ ಹೇಳಿದರು, 'ಮೇಡಂ, ಇವರು ಶಾಲೆಗೆ ಬರಲು ಅವಕಾಶವನ್ನು ಪಡೆಯುತ್ತಾರೆ. ಇಲ್ಲಿ ಅವರಿಗೆ ಊಟ ಸಿಗುತ್ತದೆ. ಇಷ್ಟು ಸಾಕಲ್ಲವೇ ಅವರಿಗೆ? ಇದಕ್ಕೆ ಬದಲಿಗೆ ಅವರು ಶಾಲೆಯ ಆವರಣವನ್ನು ಮತ್ತು ಶೌಚಾಲಯಗಳನ್ನು ಏಕೆ ಶುಚಿಗೊಳಿಸಬಾರದು?'

ನನಗೆ ಈ ವಾದವನ್ನು ಜೀರ್ಣಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಶಿಕ್ಷಣದ ಹಕ್ಕಿನ ಹೆಸರಿನಲ್ಲಿ ಈ ರೀತಿಯಾಗಿ ಮಕ್ಕಳ ಜೊತೆಗೆ ವರ್ತಿಸುವುದು ಸರಿಯಾದ ಕಾರಣವೇ? ನೀತಿನಿರೂಪಕರು ಮತ್ತು ಅದರ ಅನುಷ್ಠಾನಕಾರರು ತಮ್ಮ ಮಕ್ಕಳನ್ನು ಸರಿಯಾಗಿ ಶಿಕ್ಷಕರಿಲ್ಲದ, ಬೆಂಬಲ ಸಿಬ್ಬಂದಿಗಳಿಲ್ಲದ, ನಿಯತವಾಗಿ ಮಕ್ಕಳ ಶೌಚಾಲಯಗಳು, ಶಿಕ್ಷಕರ ಶೌಚಾಲಯಗಳು, ತರಗತಿ ಕೊಠಡಿಗಳು, ಶಾಲಾ ಆವರಣಗಳು ಹಾಗೂ ಬಿಸಿ ಊಟದ ಪಾತ್ರೆಗಳನ್ನೂ ತೊಳೆದು ಶುಚಿಮಾಡಬೇಕಾದ ಶಾಲೆಗೆ ಕಳುಹಿಸುತ್ತಾರೆಯೇ?

**ವಾಸ್ತವ ಆಚರಣೆಯಲ್ಲಿ ಕಂಡುಬರುವಂತೆ ವ್ಯವಸ್ಥೆಯ ಸಮಸ್ಯೆಗಳು**

ತೀರಾ ಇತ್ತೀಚಿನ ಬೆಳವಣಿಗೆಯಾಗಿ ಕೇಂದ್ರದಿಂದ ಪ್ರಾಯೋಜಿತವಾದ ಸಮಗ್ರ ಶಿಕ್ಷಣ ಯೋಜನೆಯ ಅಡಿಯಲ್ಲಿ ಸಮಗ್ರ ಶಿಕ್ಷಾ ತರಬೇತಿ ಕಾರ್ಯಕ್ರಮವಾದ (Integrated Teacher Training Programme) 'ನಿಷ್ಠಾ' ಪ್ರಾರಂಭವಾಗಿದೆ. (2019–2020). ಇದು ಪ್ರಾಥಮಿಕ ಹಂತದಲ್ಲಿ ಕಲಿಕೆಯ ಫಲಿತಾಂಶಗಳನ್ನು ಸುಧಾರಿಸಲು ಶಾಲಾ ಶಿಕ್ಷಣ ಮತ್ತು ಸಾಕ್ಷರತೆ ಇಲಾಖೆಯು ಪ್ರಾರಂಭಿಸಿದ ರಾಷ್ಟ್ರೀಯ ಯೋಜನೆಯಾಗಿದೆ. ಸರ್ಕಾರಿ ಜಾಲತಾಣವು ಇದು 'ಸಮಗ್ರ ಶಿಕ್ಷಕರ ತರಬೇತಿ ಕಾರ್ಯಕ್ರಮದ ಮೂಲಕ ಶಾಲಾ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವ ಸಾಮರ್ಥ್ಯ ವೃದ್ಧಿಸುವ ಕಾರ್ಯಕ್ರಮ' ಎಂದು ಹೇಳುತ್ತದೆ. 'ನಿಷ್ಠಾ' (NISHTHA) ಎಂಬುದು ವಿಶ್ವದ ಅತಿದೊಡ್ಡ ಶಿಕ್ಷಕ ತರಬೇತಿ ಕಾರ್ಯಕ್ರಮವಾಗಿದ್ದು ಪ್ರಾಥಮಿಕ ಹಂತದಲ್ಲಿ ಎಲ್ಲಾ ಶಿಕ್ಷಕರು ಮತ್ತು ಶಾಲೆಯಲ್ಲಿ ಪ್ರಾಂಶುಪಾಲರ ಸಾಮರ್ಥ್ಯಗಳನ್ನು ರೂಪಿಸುವ ಗುರಿಯನ್ನು ಹೊಂದಿದೆ. ವಿದ್ಯಾರ್ಥಿಗಳಲ್ಲಿ ವಿಮರ್ಶಾತ್ಮಕ ಚಿಂತನೆಯನ್ನು ರೂಪಿಸಲು ಪ್ರೋತ್ಸಾಹಿಸುವಂತೆ ಶಿಕ್ಷಕರನ್ನು ಸಜ್ಜುಗೊಳಿಸುವುದು ಈ ಬೃಹತ್ ತರಬೇತಿ ಕಾರ್ಯಕ್ರಮದ ಉದ್ದೇಶವಾಗಿದೆ. ಇದು ಎಲ್ಲ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೂ ಸೇರಿದಂತೆ ಇಡೀ ರಾಷ್ಟ್ರ ಮಟ್ಟದಲ್ಲಿ (www.india.gov.in) ಒಂದು ಪ್ರಮಾಣೀಕೃತ ತರಬೇತಿ ಕಾರ್ಯವಿಧಾನ (ಮಾಡ್ಯೂಲ್)ಗಳನ್ನು ಅಭಿವೃದ್ಧಿಗೊಳಿಸಲಾಗಿರುವ ಮೊಟ್ಟ ಮೊದಲ ಉಪಕ್ರಮವಾಗಿದೆ.

ಶಿಕ್ಷಕರು ಪರಸ್ಪರ ಬೆರೆತು ವಿಚಾರ ವಿನಿಮಯ ಮಾಡಿಕೊಳ್ಳಲು ಈ ಕಾರ್ಯಕ್ರಮವು ಒಂದು ಉತ್ತಮವಾದ ವೇದಿಕೆಯನ್ನು ಒದಗಿಸುತ್ತದೆ. ಈ ತರಬೇತಿ ಘಟಕಗಳು (Training Modules) ಉತ್ತಮವಾಗಿ ವಿನ್ಯಾಸಗೊಳಿಸಲ್ಪಟ್ಟಿದ್ದು ಇದನ್ನು ರೂಪಿಸಲು ನಡೆದ ಪ್ರಯತ್ನಗಳು ಬಹಳ ಸ್ಪಷ್ಟವಾಗಿ ಗೋಚರಿಸುತ್ತವೆ. ಈ ಕಾರ್ಯಕ್ರಮವು ನಿರ್ದಿಷ್ಟ ಅಗತ್ಯದ ಪ್ರಕಾರ ವಿವಿಧ ಹಂತಗಳ ಕ್ರಮವಿಧಾನದಲ್ಲಿ ನಡೆಸುವಂತಹದ್ದು, ಅಂದರೆ ಇಲ್ಲಿ ರಾಷ್ಟ್ರ ಮಟ್ಟದ ಸಂಪನ್ಮೂಲ ತಜ್ಞರ ತಂಡವು (National Resource Group of Experts) ಪ್ರಮುಖ ಸಂಪನ್ಮೂಲ ವ್ಯಕ್ತಿಗಳಿಗೆ (Key Resource Persons -KRP) (ತದನಂತರದ ತರಬೇತಿಗಾಗಿ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಗುರುತಿಸಲ್ಪಟ್ಟವರು) ಮತ್ತು ರಾಜ್ಯ ಸಂಪನ್ಮೂಲ ವ್ಯಕ್ತಿಗಳಿಗೆ (State Resource Persons -SRP) (ರಾಜ್ಯ ಅಥವಾ ಕೇಂದ್ರ ಪ್ರದೇಶಗಳ ಶಾಲಾ ಪ್ರಾಂಶುಪಾಲರು ಮತ್ತು ಇತರ ಸಿಬ್ಬಂದಿಗಳಿಗೆ ಮತ್ತಷ್ಟು ಹೆಚ್ಚಿನ ತರಬೇತಿಗಾಗಿ ಗುರುತಿಸಲ್ಪಟ್ಟವರು) ತರಬೇತಿ ನೀಡುತ್ತಾರೆ. ಈ ಕೆಆರ್‌ಪಿ ಮತ್ತು ಎಸ್‌ಆರ್‌ಪಿಗಳು ನೇರವಾಗಿ ಶಿಕ್ಷಕರು ಮತ್ತು ಶಾಲಾ ಪ್ರಾಂಶುಪಾಲರಿಗೆ ತರಬೇತಿ ನೀಡುತ್ತಾರೆ ಎಂದು ಹೇಳಲಾಗಿದೆ (itpd.ncert.gov.in). ಈ ಹಿಂದೆ ಹಲವಾರು ಹಂತಗಳಿದ್ದ ಕಾರಣ ಸಂವಹನ ಅಥವಾ ಸಂಪರ್ಕ ಕೊರತೆಯಿಂದಾಗುವ ನಷ್ಟವನ್ನು ಕಡಿಮೆ ಮಾಡಲು ಈ ತರಬೇತಿ ನೆರವು ನೀಡುತ್ತದೆ ಎಂದು ಹೇಳಲಾಗಿದೆ. ಈ ಎಲ್ಲಾ ಭರವಸೆಗಳ ಹೊರತಾಗಿಯೂ ಇನ್ನೂ ಕೆಲವು ಸಮಸ್ಯೆಗಳನ್ನು ಗುರುತಿಸ–ಬೇಕಾಗಿದೆ ಮತ್ತು ಸೂಕ್ತವಾಗಿ ಪರಿಹರಿಸಬೇಕಾಗಿದೆ. ಅವುಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

**ದೊಡ್ಡ ಸಂಖ್ಯೆಯನ್ನು ಒಳಗೊಂಡ ದೊಡ್ಡ ಪ್ರಮಾಣದ ಗುರಿ**

ಸರ್ಕಾರದ ಜಾಲತಾಣ/ವೆಬ್‌ಸೈಟ್ 'ಪ್ರಾಥಮಿಕ ಹಂತದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲ ಶಿಕ್ಷಕರು, ಪ್ರಾಂಶುಪಾಲರು, ಬ್ಲಾಕ್ ಸಂಪನ್ಮೂಲ ಸಂಯೋಜಕರು, ಕ್ಲಸ್ಟರ್ ಸಂಪನ್ಮೂಲ ಸಂಯೋಜಕರಿಗೆ ಕಲಿಕೆಯ ಕೇಂದ್ರಿತವಾದ ಕಲಿಕಾ ಕಲೆ, ಕಲಿಕೆಯ ಫಲಿತಾಂಶಗಳು, ಮಕ್ಕಳ ಸಾಮಾಜಿಕ ವೈಯಕ್ತಿಕ ವ್ಯಕ್ತಿಗತ ಗುಣಮಟ್ಟ ಸುಧಾರಣೆ, ಶಾಲಾಧಾರಿತ ಮೌಲ್ಯಮಾಪನ, ಹೊಸ ಉಪಕ್ರಮಗಳು, ಶಾಲಾ ಸುರಕ್ಷತೆ ಮತ್ತು ಭದ್ರತೆ, ಕಲಿಕಾ ಕಲೆಯ ಅಥವಾ ಜ್ಞಾನದ ಬೇರೆಬೇರೆ ವಿಷಯಗಳ ಬಗ್ಗೆ ತರಬೇತಿ ಸಮಯಯಲ್ಲಿ ಅರಿವು ಮೂಡಿಸಲಾಗುತ್ತದೆ' ಎಂದು ಘೋಷಿಸಿದೆ.

ಇಲ್ಲಿಯವರೆಗೆ ನೀಡಿದ ಭರವಸೆಯ ಪ್ರಕಾರ 42 ಲಕ್ಷ ಶಿಕ್ಷಕರ ಸಾಮರ್ಥ್ಯ ವೃದ್ಧಿಗಾಗಿ ಹಲವಾರು ಕ್ಷೇತ್ರಗಳನ್ನು ಒಳಗೊಳ್ಳುವ ತರಬೇತಿ ನಡೆಸುವುದು ನಿಜಕ್ಕೂ ಕಠಿಣ ಕೆಲಸ. ಹೀಗಾಗಿ ಹೊಣೆಗಾರಿಕೆಯಲ್ಲಿ ದೊಡ್ಡ ತೊಡಕುಗಳಿರುವುದರಿಂದ ಮತ್ತು ಹಲವಾರು ಪಾಲುದಾರರನ್ನು ಭಾಗಿಯಾಗಿಸುವುದರಿಂದ ಗುರಿಯು ದೊಡ್ಡ ಪ್ರಮಾಣದಲ್ಲಿದ್ದಾಗ ಸಾಧನೆಯು ಪ್ರಶ್ನಾರ್ಹವಾಗಿ ಉಳಿಯುತ್ತದೆ. ಇಷ್ಟೇ ಅಲ್ಲದೆ, 'ಒಂದೇ ಅಂಗಿ ಎಲ್ಲರಿಗೂ ಹೊಂದುತ್ತದೆ' ಎಂಬ ಧೋರಣೆಯು ಸಮಸ್ಯೆಯೇ ಆಗಿದೆ. ದೊಡ್ಡ ಸಂಖ್ಯೆಯ ಮಟ್ಟದ ಗುರಿಯಿಟ್ಟುಕೊಳ್ಳುವ ಬದಲು ಹಂತಹಂತವಾಗಿ ಮುನ್ನಡೆಯುವುದು ಉತ್ತಮ. ಇದು ಯಶಸ್ವಿಯಾಗಲು ಬಹಳ ಎಚ್ಚರಿಕೆಯಿಂದ ಆದ್ಯತೆಗಳನ್ನು ನಿರ್ಧರಿಸಬೇಕು. ಅಪರೂಪಕ್ಕೆ ಎನ್‌ಜಿಒ ಅಥವಾ ಸಿಎಸ್‌ಆರ್ ಬೆಂಬಲ ಹೊಂದುವ ಅದೃಷ್ಟವಿರುವ ಕುಗ್ರಾಮಗಳ ಶಾಲೆಗಳು ಇಂತಹ ಯೋಜನೆಯಲ್ಲಿ ಆದ್ಯತೆ ಪಡೆಯಬೇಕು ಮತ್ತು ಇಂತಹ ಶಾಲೆಗಳ ಶಿಕ್ಷಕರಿಗೆ ಭಿನ್ನವಾಗಿ ಯೋಜನೆಯನ್ನು ರೂಪಿಸಬೇಕು.

**ಸುತ್ತಮುತ್ತಲಿನ ಸನ್ನಿವೇಶವನ್ನು ಗಮನದಲ್ಲಿರಿಸಿಕೊಳ್ಳದ ದೃಷ್ಟಿಕೋನದ ಪರಿಕಲ್ಪನೆಗಳು**

ಬಹುಬಾರಿ ಇಂತಹ ತರಬೇತಿಗಳು ಎನ್‌ಜಿಒ ಸಿಬ್ಬಂದಿಗಳ ಮತ್ತು ಶಿಕ್ಷಣ ಕಾರ್ಯಕರ್ತರ ಅನುಕೂಲಕ್ಕೆ ಅನುಗುಣವಾಗಿ ಒಂದು ಸಾಮಾನ್ಯ ಸ್ಥಳದಲ್ಲಿ ನಡೆಯುತ್ತವೆ. ದೈನಂದಿನ ಶಾಲಾ ಜೀವನದ ಏಕತಾನತೆಯಿಂದ ಮುಕ್ತರಾಗಿ ಇಂತಹ ಆರಾಮದಾಯಕ ಹಾಗೂ

ಉಪಶಮನ ಸ್ಥಿತಿಯನ್ನು ಕೆಲವು ಶಿಕ್ಷಕರು ಸ್ವಾಗತಿಸಬಹುದು. ಆದರೆ ವಿಶೇಷವಾಗಿ ಸ್ವಯಂಪ್ರೇರಿತರಾದ ಮತ್ತು ಪ್ರಾಮಾಣಿಕ ಬದ್ಧತೆಯುಳ್ಳ ಅನೇಕರಿಗೆ ಇದು ಅನನುಕೂಲವೆನಿಸುತ್ತದೆ. ಇಂತಹ ತರಬೇತಿಗಳಿಂದಾಗಿ ಶಿಕ್ಷಕರು ಒಂದು ವರ್ಷದಲ್ಲಿ ಹಲವು ವಾರಗಳ ಕಾಲ ತಮ್ಮ ಬೋಧನಾ ಸಮಯವನ್ನು ಕಳೆದುಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಇದರ ಜೊತೆಗೆ ಕಲಿಯಲು ಉತ್ಸುಕರಾಗಿರುವ ಮಕ್ಕಳು ತಮ್ಮ ಪಾಠವನ್ನು ಕಳೆದುಕೊಳ್ಳುತ್ತಾರೆ. ತರಬೇತಿಯ ಸಂಘಟಕರು ಈ ಸಮಸ್ಯೆಯನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

'ನಿಷ್ಠಾ' ತರಬೇತಿಯ ಒಂದು ಮಾಡ್ಯೂಲ್‌ನಲ್ಲಿ ಮಹಾತ್ಮ ಗಾಂಧಿಯವರ ನುಡಿಯ ಉಲ್ಲೇಖವಿದೆ. 'ಒಂದು ನೈಜ ಶಿಕ್ಷಣವು ಸುತ್ತಮುತ್ತಲಿನ ಸನ್ನಿವೇಶಗಳಿಗೆ ಹೊಂದಿಕೊಂಡಿರಬೇಕು..' ಆ ಆಲೋಚನೆಯಂತೆ ಇಂತಹ ತರಬೇತಿ ಕಾರ್ಯಕ್ರಮಗಳನ್ನು ಶಾಲೆಗಳಲ್ಲಿಯೇ ಏರ್ಪಡಿಸಬೇಕು. ಅಲ್ಲಿ ವಿದ್ಯಾರ್ಥಿಗಳೊಂದಿಗೆ ಶಿಕ್ಷಕರಿಗೆ ಪ್ರಾತ್ಯಕ್ಷಿಕೆ ತರಗತಿಗಳನ್ನು (Demo classes) ತರಬೇತಿಯಲ್ಲಿ ತೊಡಗಿರುವ ತಜ್ಞರು ತೆಗೆದುಕೊಳ್ಳಬೇಕು. ಉತ್ತಮ ಕಾರ್ಯ ವ್ಯವಸ್ಥೆಗಾಗಿ ನಾಲ್ಕು ಅಥವಾ ಐದು ಶಾಲೆಗಳನ್ನು ಗುರುತಿಸಬೇಕು. ಒಂದು ವಾರಕ್ಕೆ ಮೀರದಂತೆ ಯಾವುದಾದರೂ ಒಂದು ಕ್ಲಸ್ಟರ್ ಶಾಲೆಯಲ್ಲಿ ಶಿಕ್ಷಕರನ್ನು ಒಟ್ಟಿಗೆ ಸೇರಿಸಬೇಕು ಮತ್ತು ತರಬೇತಿಯ ಸ್ಥಳವನ್ನು ಸರದಿಯ ಪ್ರಕಾರ ಬದಲಾಯಿಸಬೇಕು. ಪ್ರತಿಯೊಬ್ಬ ಶಿಕ್ಷಕರು ಸಮರ್ಪಕವಾದ ರೀತಿಯಲ್ಲಿ ಪ್ರಾತ್ಯಕ್ಷಿಕೆ ತರಬೇತಿ ತರಗತಿಯನ್ನು ತಮ್ಮ ಶಾಲೆಯಲ್ಲಿಯೇ ಕನಿಷ್ಠ ಒಂದು ದಿನವಾದರೂ ತರಬೇತಿಯ ಪ್ರತಿ ಹಂತದಲ್ಲಿ ಪಡೆಯಬಹುದು. ಆದರೆ ಇದನ್ನು ಮಾಡುವುದಕ್ಕೆ ಮುಂಚೆ ಒಬ್ಬ ಶಿಕ್ಷಕರು ಒಂದು ವಾರದ ತರಬೇತಿಯನ್ನು ಪಡೆಯುವಾಗ ಇನ್ನೊಬ್ಬ ಶಿಕ್ಷಕರು ಶಾಲೆಯನ್ನು ನಡೆಸಿಕೊಂಡು ಹೋಗುವಂತೆ ಅನುವು ಮಾಡಲು ಪ್ರತಿಯೊಂದು ಏಕಶಿಕ್ಷಕ ಶಾಲೆಗಳಲ್ಲಿ ಇನ್ನೊಬ್ಬ ಶಿಕ್ಷಕರನ್ನು ನೇಮಿಸಬೇಕು.

'ನಿಷ್ಠಾ' ತರಬೇತಿಯು ಶಿಕ್ಷಕರನ್ನು ತರಗತಿಗಳಿಗೆ ಪ್ರಯೋಜನ ತಲುಪುವುದನ್ನು ಖಾತ್ರಿಪಡಿಸುವುದು ಚಿಂತನಶೀಲ ಅಭ್ಯಾಸಿಗರನ್ನಾಗಿ ರೂಪಿಸುವ ಗುರಿಯನ್ನು ಹೊಂದಿದೆ. ಆದ್ದರಿಂದ ಮಾಡ್ಯೂಲಿನ ಎಲ್ಲ ವಿಷಯಗಳ ಬಗ್ಗೆ ತರಬೇತುದಾರರು ಚೆನ್ನಾಗಿ ಸುಸಜ್ಜಿತರಾಗುವುದು ಅತ್ಯಗತ್ಯ. ತುಂಬಾ ಕಡಿಮೆ ಅಥವಾ ಯಾವುದೇ ಬೋಧನಾ ಅನುಭವವನ್ನು ಹೊಂದಿರದ ಅನೇಕ ಶಿಕ್ಷಕರಿಗೆ ಈ ಮಾಡ್ಯೂಲುಗಳನ್ನು ಕಡಿಮೆ ಬೋಧನಾನುಭವ ಹೊಂದಿರುವ ಅಥವಾ ಅನನುಭವಿಗಳಿಗೆ ಗ್ರಹಿಸುವುದು ಬಹಳ ಸುಲಭವಲ್ಲ. ಉದಾಹರಣೆಗೆ, ಇಲ್ಲಿ ಪರಿಸರವಿಜ್ಞಾನದ ಒಂದು ಮಾಡ್ಯೂಲಿನ (Environmental Science Module) ಒಂದು ಚಿಂತನಶೀಲ ಪ್ರಶ್ನೆಯಿದೆ: 'ಎನ್‌ಸಿಇಆರ್‌ಟಿ, ಇವಿಎಸ್ (ಪರಿಸರ ವಿಜ್ಞಾನ) ಪಠ್ಯಪುಸ್ತಕಗಳಲ್ಲಿನ ಕೆಲವು ಅಭ್ಯಾಸಗಳನ್ನು ಗುರುತಿಸಿ ಪರಿಸರ ವಿಜ್ಞಾನ ವಿಷಯದ ಬಗ್ಗೆ ತಿಳುವಳಿಕೆ ಹಾಗೂ ಕಾಳಜಿ ಉಂಟುಮಾಡಲು ಕೆಲವು ನಿರ್ಣಾಯಕ ವಿಮರ್ಶಾತ್ಮಕ ವಿಷಯಗಳ ಬಗ್ಗೆ ಮಕ್ಕಳೊಂದಿಗೆ ಚರ್ಚೆ ಮಾಡಿ' ಎಂದು. ಈ ನಿರೀಕ್ಷೆಯಂತೆ ತಮ್ಮ ತರಗತಿಯಲ್ಲಿ ಚರ್ಚೆ ನಡೆಸಲು ಒಬ್ಬ ಶಿಕ್ಷಕರು ಗಹನವಾದ ಅಧ್ಯಯನ ನಡೆಸಬೇಕಾಗುತ್ತದೆ. ಇಲ್ಲಿ ಶಿಕ್ಷಕರ ವರ್ಚಸ್ಸು ಪ್ರಮುಖವಾಗುತ್ತದೆ. ಶಿಕ್ಷಕರು ಮಾಡ್ಯೂಲ್‌ಗಳನ್ನು ಬಳಸಿಕೊಳ್ಳಲು ನಿಯಮಿತವಾಗಿ ಸ್ವಯಂ ಕಲಿಕೆಯ ಅಭ್ಯಾಸವನ್ನು ಮಾಡಬೇಕಾಗುತ್ತದೆ. ಆಗ ಮಾತ್ರ ಅವರು ಮಕ್ಕಳನ್ನು ತಲುಪಲು ಸಾಧ್ಯ. ಶಿವ್ ಬ್ಲಾಕ್‌ನಂತಹ ಪ್ರದೇಶಗಳಲ್ಲಿ ಕೆಲಸ ಮಾಡುವ ನಿಯಮಿತವಾಗಿ ಬೋಧಿಸುವುದನ್ನು ಹೊರತುಪಡಿಸಿ ಅನೇಕ ಕೆಲಸಗಳೊಂದಿಗೆ ಸೆಣಸಾಡುವ ಶಿಕ್ಷಕರು ತಮ್ಮ ಶಾಲೆಗಳಲ್ಲಿ ಇದನ್ನು ಮಾಡಲು ಸಾಧ್ಯವೇ?

**ಆದ್ಯತೀಕರಣಕ್ಕೆ ಸಲಹೆಗಳು**

ಮಾನವ ಅಭಿವೃದ್ಧಿ ಮಾನದಂಡಗಳನ್ನು (Human development parameters) ಒಂದು ದೇಶದ ಅಭಿವೃದ್ಧಿಗೆ ಪ್ರಮುಖವೆಂದು ಪರಿಗಣಿಸುವುದಾದರೆ, ನಿರ್ದಿಷ್ಟ ಸನ್ನಿವೇಶದ ಅವಶ್ಯಕತೆಗಳಿಗೆ ಸಂಬಂಧಿಸಿ ಗೋಚರಿಸುವಂತೆ ಹಿಂದೆ ಉಳಿದಿರುವ ಬಾಡ್‌ಮೇರ್ ಮತ್ತು ಶಿವ್‌ನಂತಹ ಬ್ಲಾಕುಗಳಿಗೆ ವಿಶೇಷ ಆದ್ಯತೆ ಸಿಗಬೇಕು. ದುರದೃಷ್ಟವಶಾತ್, ದಶಕಗಳಿಂದ ಈ ರೀತಿಯ ಆದ್ಯತೆಯು ಕನಸಾಗಿಯೇ ಉಳಿದಿದೆ. ಇಂತಹ ಸಂದರ್ಭದಲ್ಲಿ, ಉಂಟು–ಮಾಡಬೇಕಾದ ಅವಕಾಶದಲ್ಲಿ ತೀವ್ರ ಕೊರತೆಯಿರುವುದರಿಂದ ಕಲಿಕೆಯ ಅಗತ್ಯ ಮತ್ತು ಕಲಿಯುವ ಬಯಕೆ ಇವೆರಡನ್ನೂ ಹೊಂದಿದ್ದರೂ ಈ ಮಕ್ಕಳು ಕಲಿಕೆಯಿಂದ ವಂಚಿತರಾಗಿದ್ದಾರೆ. ತಮ್ಮ ದೈನಂದಿನ ಬದುಕಿನಲ್ಲಿ ಅಡೆತಡೆಗಳನ್ನು ಎದುರಿಸುವ ಈ ಪ್ರದೇಶದ ವಿದ್ಯಾರ್ಥಿಗಳಲ್ಲಿ ಭಾರೀ ಸಾಧನಾ ಶಕ್ತಿಯಿದೆ. ಇಷ್ಟೆಲ್ಲಾ ಅಡೆತಡೆಗಳನ್ನು ಹೊಂದಿದ್ದರೂ ಕೆಲವು ಶಾಲೆಗಳಲ್ಲಿ ಬಹಳ ಬದ್ಧತೆಯುಳ್ಳ ಶಿಕ್ಷಕರೂ ಇದ್ದಾರೆ ಮತ್ತು ಅವರು ತಮ್ಮ ಸೀಮಿತ ಸಂಪನ್ಮೂಲಗಳೊಂದಿಗೆ ಎಲ್ಲ ಅಡೆತಡೆಗಳನ್ನೂ ದಾಟಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಲು ಸಿದ್ಧರಾಗಿದ್ದಾರೆ. ಇದು ಬಹಳ ಸಂತೋಷದ ಸಂಗತಿ. ಶಿಕ್ಷಕರ ಪೈಕಿ ಇಂತಹ 'ಕಿಡಿಗಳನ್ನು' ಗುರುತಿಸುವುದು ಮುಖ್ಯ ಮತ್ತು ಅವರ ನಾಯಕತ್ವವನ್ನು ವಿವಿಧ ಸ್ವರೂಪಗಳಲ್ಲಿ ಸೂಕ್ತ ಕಾರ್ಯಕಾರಿ ನಾಯಕತ್ವ ಗುಣವನ್ನಾಗಿ ಬೆಳೆಸಿ ಬಳಸುವ ಅಗತ್ಯವಿದೆ. ಇದು ಖಂಡಿತವಾಗಿಯೂ ಶಿಕ್ಷಣದ ಗುಣಮಟ್ಟಕ್ಕೆ ಹೆಚ್ಚಿನ ಮೌಲ್ಯವನ್ನು ಸೇರಿಸುತ್ತದೆ. ನಮ್ಮ ದೇಶವೇ ಹೆಮ್ಮೆಪಡುವಂತೆ ಈ ಶಾಲೆಗಳಲ್ಲಿ ಕೆಲವು ಅತ್ಯುತ್ತಮ ಕ್ರೀಡಾಪಟುಗಳು ಎಂಜಿನಿಯರ್‌ಗಳು, ಸಮಾಜವಿಜ್ಞಾನಿಗಳು, ಗೀತರಚನೆಕಾರರು, ವೈದ್ಯರು ಮತ್ತು ಎಲ್ಲಾ ರೀತಿಯ ವೃತ್ತಿಪರರು ಹೊರಬರುವಂತೆ ತಯಾರುಮಾಡಬಹುದು. ಇದನ್ನು ಸಾಧಿಸಲು ಸರ್ಕಾರವು ಪರಿಗಣಿಸಬೇಕಾದ ಕೆಲವು ಕಾರ್ಯನಿಬಂಧನೆಗಳ ಸಂಕ್ಷಿಪ್ತ ಪರಿಶೀಲನಾಪಟ್ಟಿ ಇಲ್ಲಿದೆ:

- ಈ ಶಾಲೆಗಳಿಗೆ ಬೆಂಬಲ ಸಿಬ್ಬಂದಿಗಳನ್ನು ನೇಮಿಸಬೇಕು.

- ಪ್ರತಿಯೊಂದು ಶಾಲೆಗೂ ತರಗತಿಗಳ (ಶ್ರೇಣಿಗಳ) ಅಗತ್ಯಕ್ಕೆ ತಕ್ಕಂತೆ ಶಿಕ್ಷಕರನ್ನು ನೇಮಿಸಬೇಕು ಮತ್ತು ವಿದ್ಯಾರ್ಥಿ–ಶಿಕ್ಷಕರ ಅನುಪಾತದ ಪ್ರಕಾರವಲ್ಲ.

- ದೂರ ಪ್ರದೇಶಗಳಿಂದ ಪ್ರಯಾಣ ಮಾಡಿ ಶಾಲೆಗಳಿಗೆ ಬರಲು ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಗೆ ಸಾರಿಗೆ ಸೌಲಭ್ಯಗಳನ್ನು ಒದಗಿಸಬೇಕು.

- ಶಿಕ್ಷಕರಲ್ಲಿ ನಾಯಕತ್ವ ಗುಣ ಬೆಳೆಸಿ ಪ್ರೋತ್ಸಾಹಿಸಲು ಶಿಕ್ಷಕ ತರಬೇತುದಾರರ ನಿಯಮಿತ ಭೇಟಿ ಮತ್ತು ಆಯಾ ಶಾಲೆಗಳಲ್ಲಿಯೇ ಪ್ರಾತ್ಯಕ್ಷಿಕೆ ತರಗತಿಗಳು ನಡೆಯಬೇಕು (ಶಾಲಾ ಮಕ್ಕಳು ತಮ್ಮ ನಿಯಮಿತ ತರಗತಿಗಳಿಂದ ವಂಚಿತರಾಗುವಂತೆ ಸಂಪರ್ಕವಿಲ್ಲದ ಪ್ರದೇಶಗಳಲ್ಲಿ ಸ್ಥಳ ಮತ್ತು ಊಟದ ವ್ಯವಸ್ಥೆಗಾಗಿ ಅನಗತ್ಯವಾಗಿ ಖರ್ಚು ಮಾಡುವುದರ ಬದಲಿಗೆ).

ಬಾಡ್‌ಮೇರ್‌ನ ಶಿವ್ ಮತ್ತು ಅಂತಹ ಇನ್ನೂ ಅನೇಕ ಕುಗ್ರಾಮದ ಶಾಲೆಗಳಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿ ಕಿಡಿಗಳು ಭರವಸೆಯ ಆಶಾಕಿರಣಗಳಾಗಿ ಜ್ಞಾನದೀಪವನ್ನು ಹೊತ್ತಿಸಲಿ.

## ಉಲ್ಲೇಖಗಳು

Singh, Padam and Satyendra Keshari (2016). Development of Human Development Index at District Level for EAG States. *Statistics and Applications*, Volume 14, Nos. 1 & 2, 2016 (New Series) pp. 43-61.

*www.censusindia.gov.in/2011census/C-series/C08.html*

*www.india.gov.in*

*udise.in*



**ಡಾ. ಶಾಶ್ವತಿ ಪೈಕ್** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದಾರೆ. ಅವರು ಭೂಗೋಳಶಾಸ್ತ್ರದಲ್ಲಿ ಪದವಿ ಪಡೆದಿದ್ದಾರೆ ಮತ್ತು ನವದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದಿಂದ ಎಂಫಿಲ್ ಮತ್ತು ಪಿಎಚ್‌ಡಿ ಮುಗಿಸಿದ್ದಾರೆ. ಅವರ ಆಸಕ್ತಿಯ ಎರಡು ಸಂಶೋಧನಾ ಕ್ಷೇತ್ರಗಳು: (1) ವಯಸ್ಕರ ಶಿಕ್ಷಣ ಮತ್ತು ಅದರ ಪ್ರಸ್ತುತತೆ (2) ದುರ್ಗಮ ಪ್ರದೇಶಗಳಲ್ಲಿನ ಶಾಲೆಗಳ ವಾಸ್ತವತೆಯನ್ನು ಅನ್ವೇಷಿಸುವುದು, ಅದರಲ್ಲೂ ವಿಶೇಷವಾಗಿ ನೈಸರ್ಗಿಕ ಅಪಾಯಗಳಿಗೆ ತುತ್ತಾಗುವ ಮತ್ತು ಅಂತಹ ಕ್ಷೇತ್ರಗಳಲ್ಲಿ ಪ್ರಸ್ತುತ ಶಿಕ್ಷಣ ನೀತಿಗಳು ಮತ್ತು ಆಚರಣೆಗಳ ಪ್ರಸ್ತುತತೆಯನ್ನು ಅರಿಯುವುದು. ತಮ್ಮ ಸಂಶೋಧನೆಯನ್ನಾಧರಿಸಿ ಅನೇಕ ಪುಸ್ತಕಗಳು ಮತ್ತು ಲೇಖನಗಳನ್ನು ಪ್ರಕಟಿಸಿದ್ದಾರೆ. ಅವರನ್ನು saswati@azimpremjifoundaton.orgನಲ್ಲಿ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ವಲಸೆ ಕಾರ್ಮಿಕರ ಮಕ್ಕಳಿಗೆ ಅವಕಾಶಗಳು

ಶೋಭಾ ಎಲ್. ಕವ್ಲೂರಿ ಮತ್ತು ಶುಭಾ ಹೆಚ್.ಕೆ.

**ಪೀಠಿಕೆ**

ವಿಶಾಲ ಹಾಗೂ ಸೈದ್ಧಾಂತಿಕವಾದ ಅರ್ಥದಲ್ಲಿ ಹೇಳುವುದಾದರೆ ಪ್ರತಿಯೊಂದು ಮಗುವೂ ತನ್ನ ಪೂರ್ಣ ಸಾಮರ್ಥ್ಯವನ್ನು ತಲುಪುವಂತೆ ಅದರ ಸಾಮರ್ಥ್ಯವರ್ಧನೆ ಮಾಡುವುದೇ ನಿಸ್ಸಂದೇಹವಾಗಿ ಶಿಕ್ಷಣದ ಮಹದುದ್ದೇಶ. ಕಲಿಕಾ ಪ್ರಕ್ರಿಯೆಗಳು ಪ್ರತಿಯೊಂದು ಮಗುವಿನ ಬೆಳವಣಿಗೆಯ ಹಂತ, ಕಲಿಯುವ ವೇಗ ಮತ್ತು ಕಲಿಕೆಗೆ ದೊರೆಯುವ ಪ್ರೇರಣೆಗೆ ತಕ್ಕಂತೆ ಬದಲಾಗುತ್ತಾ ಹೋಗುತ್ತವೆ ಎಂಬುದನ್ನು ಮನಸ್ಸಿನಲ್ಲಿ ಇಟ್ಟುಕೊಂಡರೂ, 'ಪ್ರತಿಯೊಂದು ಮಗುವೂ ಕಲಿಯಬಲ್ಲುದು' (Every child can learn) ಎಂಬ ದೃಢ ನಂಬಿಕೆಯು ಈ ಸಂವೇದನೆಯನ್ನು ವ್ಯಕ್ತಪಡಿಸಲು ಪ್ರಯತ್ನಿಸುತ್ತದೆ. ಇಲ್ಲಿ ಹೇಳಲೇಬೇಕಾದ ಇನ್ನೊಂದು ವಾಸ್ತವ ಆಯಾಮವೆಂದರೆ ಆ ಮಗುವು ಕಲಿಕೆಯನ್ನು ಎಲ್ಲಿ ಅನುಭವಿಸುತ್ತದೋ ಮತ್ತು ವ್ಯವಹರಿಸುತ್ತದೋ ಆ ಬಾಹ್ಯ ಪರಿಸರ. ಉದಾಹರಣೆಗೆ ಮಗುವಿನ ಸಾಮಾಜಿಕ-ಆರ್ಥಿಕ ಹಿನ್ನೆಲೆ ಅನೇಕ ಬಾರಿ ಇದೇ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆಯುತ್ತದೆ ಮತ್ತು ಕಲಿಕಾ ಬೆಳವಣಿಗೆಯ ಮೇಲೆ ನಿರ್ಣಾಯಕವಾದ ಪರಿಣಾಮವನ್ನು ಬೀರುತ್ತದೆ. ಮಕ್ಕಳ ಕಲಿಕಾ ಸಾಮರ್ಥ್ಯಗಳ ಮೇಲೆ ಸನ್ನಿವೇಶಗಳು ನಿರ್ಬಂಧಗಳನ್ನು ಹೇರುವ ಬಗ್ಗೆ ಮತ್ತು ಅವರಿಗಾಗಿ ಸಾಂಸ್ಥಿಕ ಪ್ರಕ್ರಿಯೆಗಳನ್ನು ಕ್ರೋಡೀಕರಿಸುವಲ್ಲಿ ಎದುರಾಗುವ ಸವಾಲುಗಳ ಬಗ್ಗೆ ಒಂದು ಗಮನಾರ್ಹ ನಿದರ್ಶನವನ್ನು ಬೃಹತ್ ಮೆಟ್ರೋ ನಗರಗಳಲ್ಲಿರುವ ವಲಸೆ ಕಾರ್ಮಿಕರ ಮಕ್ಕಳ ಅನುಭವದಲ್ಲಿ ನಾವು ಕಾಣಬಹುದು. ನಿರ್ಮಾಣ ಕಾರ್ಯಗಳಲ್ಲಿ ಕೆಲಸ ಮಾಡಲು ನಾನಾ ರಾಜ್ಯಗಳ ಗ್ರಾಮೀಣ ಜನರು ಬೃಹತ್ ಪ್ರಮಾಣದಲ್ಲಿ ವಲಸೆ ಬರುತ್ತಾರೆ. ಇಂತಹ ಕಾಮಗಾರಿಗಳಲ್ಲಿ ತೊಡಗಿಕೊಳ್ಳುವವರಿಗೆ ಜೀವನಾಧಾರ ಹಾಗೂ ಭೌತಿಕ ಅಸ್ತಿತ್ವವೇ ಅನಿಶ್ಚಿತವಾಗಿರುತ್ತದೆ. ಹೀಗಿರುವಾಗ ಶಿಕ್ಷಣಕ್ಕಾಗಿ ಹಣ ವ್ಯಯ ಮಾಡುವುದು ಅವರ ಕಟ್ಟಕಡೆಯ ಆದ್ಯತೆಯಾಗಿರುತ್ತದೆ. ಇಷ್ಟು ಮಾತ್ರವಲ್ಲದೆ ಕೆಲಸಕ್ಕಾಗಿ ಮಕ್ಕಳ ಪಾಲಕರು ಊರಿಂದೂರಿಗೆ ಪ್ರವಾಸ ಮಾಡುತ್ತಲೇ ಇರಬೇಕಾಗುತ್ತದೆ. ಇದು ಮಕ್ಕಳ ಪಾಲಿಗೆ ಸ್ಥಿರತೆಯನ್ನು (ರಚನಾತ್ಮಕವಾಗಿಯೂ, ಸಮಯದ ಹಿನ್ನೆಲೆಯಲ್ಲಿಯೂ) ನೀಡುವುದಿಲ್ಲ. ಹಾಗಾಗಿ ಇವೆಲ್ಲವೂ ವ್ಯವಸ್ಥಿತವಾದ ಶೈಕ್ಷಣಿಕ ಪ್ರಕ್ರಿಯೆಯನ್ನು ರೂಪಿಸುವುದಕ್ಕೆ ಹತ್ತಾರು ಅಡ್ಡಿ ಆತಂಕಗಳನ್ನು ತಂದೊಡ್ಡುತ್ತವೆ.

ಇವನ್ನೆಲ್ಲ ಮನಸ್ಸಿನಲ್ಲಿ ಇಟ್ಟುಕೊಂಡೇ ಅಜೀಂ ಪ್ರೇಮ್‌ಜಿ ಫೌಂಡೇಷನ್ 2007ರಲ್ಲಿ ಕಟ್ಟಡ ಕಾರ್ಮಿಕರ ಮಕ್ಕಳಿಗಾಗಿ **ವಲಸೆ ಕಾರ್ಮಿಕರ ಮಕ್ಕಳಿಗೆ ಶಿಕ್ಷಣ** (Education for Children of Migrant Labour- ECML) ಎಂಬ ಕಾರ್ಯಕ್ರಮವನ್ನು ಕಟ್ಟಡ ನಿರ್ಮಾಣಕಾರರ ನೆರವು ಮತ್ತು ಸಹಭಾಗಿತ್ವದಲ್ಲಿ ಬೆಂಗಳೂರಿನಲ್ಲಿರುವ ಎರಡು ನಿವೇಶನಗಳಲ್ಲಿ ಕೇಂದ್ರಗಳನ್ನು ಸ್ಥಾಪಿಸಿ ಆರಂಭಿಸಿತು. ಒಂದು ವರ್ಷದ ಅವಧಿಯಲ್ಲಿ ಈ ಗುಂಪಿನ ಪ್ರಾಥಮಿಕ ಶಾಲಾ ಮಕ್ಕಳನ್ನು ಅವರ ಅಗತ್ಯಗಳಿಗೆ ತಕ್ಕಂತೆ ಸರ್ಕಾರದ ಆದೇಶಾನುಸಾರ ವಿಶೇಷವಾಗಿ ರೂಪಿಸಲಾದ ಪಠ್ಯಕ್ರಮವನ್ನು ಕಾರ್ಯಗತಗೊಳಿಸಿ ಮುಖ್ಯವಾಹಿನಿಗೆ ತರುವುದು ಈ ಕಾರ್ಯಕ್ರಮದ ಗುರಿ. ಈ ಕೇಂದ್ರಗಳಿಗೆ ಬರುವ ಬಹುತೇಕ ವಿದ್ಯಾರ್ಥಿಗಳು ಈ ಹಿಂದೆ ಸರ್ಕಾರಿ ದಾಖಲೆಗಳಲ್ಲಿ ಶಾಲೆ ತೊರೆದವರ ಪಟ್ಟಿಯಲ್ಲಿ ಇದ್ದವರು. ಈ ಮಕ್ಕಳಿಗೆ ಶಾಲಾ ಶಿಕ್ಷಣ ಎಂದೂ ಖುಷಿಯ ಅನುಭವವನ್ನು ಕೊಟ್ಟಿರುವುದಿಲ್ಲ. ಸರಿಯಾಗಿ ಶಾಲೆಗೆ ಬಾರದೇ ಇದ್ದುದಕ್ಕೆ, ಸರಿಯಾಗಿ ಅವರಿಗೆ ಓದಲು ಬಾರದಿರುವುದಕ್ಕೆ, ಹೋಮ್‌ವರ್ಕ್ ಪೂರ್ಣಗೊಳಿಸಲು ಅವರಿಂದ ಸಾಧ್ಯವಾಗದಿರುವುದಕ್ಕೆ ಅವರನ್ನು ತರಾಟೆಗೆ ತೆಗೆದು-ಕೊಳ್ಳಲಾಗಿರುತ್ತದೆ, ಏಕೆಂದರೆ ಅನಿವಾರ್ಯವಾಗಿ ಇಂತಹ ಮಕ್ಕಳಿಗೆ ನಿರಂತರವಾಗಿ ಶಾಲೆಗೆ ಹಾಜರಾಗುವುದೇ ದೊಡ್ಡ ಸವಾಲಾಗಿರುತ್ತದೆ ಮತ್ತು ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಿರುತ್ತದೆ. ಹೀಗಾಗಿ ಕಲಿಕೆಯಲ್ಲಿ ಅಂತರ ನಿಶ್ಚಿತವಾಗಿ ಇರುತ್ತದೆ. ಇಂಥ ಮಕ್ಕಳು ಶಾಲೆಗೆ ಹೋಗುವುದರಲ್ಲಿ ಮತ್ತು ಕಲಿಕೆಯಲ್ಲಿ ಆಸಕ್ತಿಯನ್ನು ಕಳೆದುಕೊಂಡರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಕಾರಣದಿಂದ ಅವರ ಶೈಕ್ಷಣಿಕ ಅಗತ್ಯಗಳನ್ನು ಒದಗಿಸುವ ಸಂದರ್ಭದಲ್ಲಿ ಅವರಿಗಿರುವ ನಿರ್ಬಂಧದ ಸನ್ನಿವೇಶಗಳು ಮತ್ತು ಅನಿಶ್ಚಿತತೆಯನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ.

ಈ ಕೇಂದ್ರಗಳಲ್ಲಿ ಕಲಿಯುತ್ತಿರುವ ಕೆಲವು ಮಕ್ಕಳ ಉದಾಹರಣೆಗಳನ್ನೇ (ಬಾಕ್ಸ್ ನೋಡಿ) ತೆಗೆದುಕೊಂಡರೆ, ಇಸಿಎಂಎಲ್ ಕಾರ್ಯಕ್ರಮವು ಅವರಿಗೆ ನಿಸ್ಸಂದೇಹವಾಗಿ ಕಲಿಕೆಯನ್ನು ಗಣನೀಯವಾಗಿ ಸುಧಾರಿಸಿಕೊಳ್ಳಲು ಮತ್ತು ತಮ್ಮ ಸಾಮರ್ಥ್ಯವನ್ನು ಅರ್ಥಮಾಡಿಕೊಳ್ಳಲು ಅವಕಾಶ ದೊರಕಿಸಿಕೊಟ್ಟಿದೆ. ವಿಶಾಲ ವ್ಯಾಪ್ತಿಯಲ್ಲಿ ಸಹ ಉತ್ತಮ ಶೈಕ್ಷಣಿಕ ಫಲಿತಾಂಶಗಳಿಂದ ಈ ಕಾರ್ಯಕ್ರಮವು ಮಕ್ಕಳ ಜೀವನದ ಮೇಲೆ ಉತ್ತಮ ಪ್ರಭಾವ ಬೀರಿದೆ ಎಂದು ಅಂಕಿ-ಅಂಶಗಳು ತೋರಿಸುತ್ತವೆ. ದಾಖಲೆಗಳ ಪ್ರಕಾರ ಕಳೆದ 12 ವರ್ಷಗಳ ಅವಧಿಯಲ್ಲಿ ಈ ಸೇತುಬಂಧ ಕಾರ್ಯಕ್ರಮವು (Bridge Programme) ಸುಮಾರು 1700 ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಒದಗಿಸಿದೆ. ಇವರಲ್ಲಿ 745 ಮಕ್ಕಳು ಯಶಸ್ವಿಯಾಗಿ ಮುಖ್ಯವಾಹಿನಿಯ ಶಿಕ್ಷಣ ವ್ಯವಸ್ಥೆಗೆ ಸೇರಿ ಕಲಿಯುತ್ತಿದ್ದಾರೆ. ಇಷ್ಟು ಮಾತ್ರವಲ್ಲದೆ, ಮಕ್ಕಳ ಕುಟುಂಬ ನಿರಂತರವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವ ಕಾರಣದಿಂದ ಈ ಮಕ್ಕಳು ಮುಂದೆ ಏನು ಮಾಡುತ್ತಿದ್ದಾರೆ ಎಂದು ಜಾಡು ಹಿಡಿಯುವುದಕ್ಕೆ ವಾಸ್ತವ ಇತಿಮಿತಿಗಳಿರುವುದರಿಂದ ಈ ಮಕ್ಕಳು ಇನ್ನೆಲ್ಲೋ ಶಿಕ್ಷಣವನ್ನು ಮುಂದುವರಿಸಿರಬಹುದು. ಆದರೆ ನಮ್ಮ ಕೇಂದ್ರಗಳ ದಾಖಲೆಗಳಲ್ಲಿ ಅವರ ಹೆಸರು ಲಭ್ಯವಿರುವುದಿಲ್ಲ.

**ನಾನು ಕಲಿಯಬೇಕು ಮತ್ತು ನನಗೆ ಗೊತ್ತಿದೆ ನಾನದನ್ನು ಮಾಡಬಲ್ಲೆ**

ಕೇಂದ್ರದಲ್ಲಿದ್ದ ಮಕ್ಕಳ ಬದುಕಿನ ಇಣುಕುನೋಟ.*

ಸುಮತಿ ರಾಯಚೂರಿನಿಂದ ತನ್ನ ಪಾಲಕರೊಂದಿಗೆ ಬಂದಿದ್ದಳು. ಬೆಂಗಳೂರಿನಲ್ಲಿ ಆಕೆ ತನ್ನ ಅಕ್ಕನ/ಅಣ್ಣನ

ಮಗುವನ್ನು ನೋಡಿಕೊಳ್ಳಬೇಕಾಗಿತ್ತು. ಆ ಮಗುವನ್ನು ನಮ್ಮ ಕೇಂದ್ರದಲ್ಲಿ ದಾಖಲೆ ಮಾಡಿಕೊಂಡಾಗ ನಾವು ಆಕೆಯ ಪಾಲಕರಲ್ಲಿ, ಸುಮತಿಯನ್ನು ಸರ್ಕಾರಿ ಶಾಲೆಯಲ್ಲಿ ನೋಂದಣಿ ಮಾಡಿಸುವಂತೆ ಮನವೊಲಿಸಿದೆವು. ತದನಂತರ ಆಕೆಯು ವಾಡಿಕೆಯ ಶಾಲಾ ಶಿಕ್ಷಣಕ್ಕೆ ಸೇರಿಕೊಳ್ಳುವುದು ಸಾಧ್ಯವಾಗುವಂತೆ ಸಿದ್ಧವಾಗಲು ಕೇಂದ್ರಕ್ಕೆ ಒಂದು ವರ್ಷ ಬಂದು ಕಲಿತಳು. ಹಿಂಜರಿಕೆ, ನಾಚಿಕೆ ಮತ್ತು ಶಾಲೆ ಬಿಟ್ಟಾಕೆ ಎಂಬ ಹಣೆಪಟ್ಟಿಗೆ ಒಳಗಾಗಿದ್ದ ಸುಮತಿ ಇಂದು ಪಿಯುಸಿ ವಿದ್ಯಾರ್ಥಿನಿ ಮತ್ತು ವೇದಿಕೆಯ ಮೇಲೆ ನಿಂತು ಸಂತೋಷದಿಂದ ಕೆಲಸ ಮಾಡುತ್ತಾಳೆ. ತನ್ನ ಶಾಲೆಯಲ್ಲಿ ಹಾಗೂ ಕೇಂದ್ರದಲ್ಲಿ ನಡೆಯುವ ವಾರ್ಷಿಕ ಕಾರ್ಯಕ್ರಮದಲ್ಲಿ ಆಕೆಯೇ ಮುಂದೆ ನಿಂತು ಕಾರ್ಯಕ್ರಮಗಳನ್ನು ನಡೆಸಿ-ಕೊಡುವ ಹಂತಕ್ಕೆ ಬೆಳೆದಿದ್ದಾಳೆ.

ಆಂಧ್ರದಿಂದ ಬಂದಿದ್ದ ಏಳು ವರ್ಷ ವಯಸ್ಸಿನ ಭೀಮಾ ಈ ಹಿಂದೆ ಶಾಲೆಯನ್ನು ತೊರೆದಿದ್ದ. ಒಮ್ಮೆ ಕಟ್ಟಡ ನಿರ್ಮಾಣ ಮಾಡುವ ಸ್ಥಳದಲ್ಲಿ ಆತನ ಪಾಲಕರು ಭೀಮ ಮತ್ತು ಆತನ ಇಬ್ಬರು ಸಹೋದರರನ್ನು ಕೇಂದ್ರಕ್ಕೆ ಕರೆತಂದರು. ಭೀಮ ಮತ್ತು ಆತನಿಗಿಂತ ಒಂದುವರ್ಷ ಚಿಕ್ಕವನಾದ ತಮ್ಮನನ್ನು ಸ್ಥಳೀಯ ಸರ್ಕಾರಿ ಶಾಲೆಯಲ್ಲಿ ನೋಂದಣಿ ಮಾಡಿಸಿದೆವು. ಕಿರಿಯ ತಮ್ಮ ಸಹ ಕೇಂದ್ರಕ್ಕೆ ಬಂದು ಪ್ಲೇಗ್ರೂಪ್‌ಗೆ ಸೇರಿಕೊಂಡನು. ವಾಡಿಕೆ ಶಾಲೆಗೆ ವರ್ಗಾವಣೆ ಹೊಂದುವ ಮುನ್ನ ಅವರಲ್ಲಿ ಪ್ರತಿಯೊಬ್ಬರೂ ಒಂದೆರಡು ವರ್ಷ ಕೇಂದ್ರದಲ್ಲಿ ಶಿಕ್ಷಣ ಪಡೆದರು. ಇಂದು ಮೂವರೂ ಸಹೋದರರು ಇಂಗ್ಲಿಷ್ ಮಾಧ್ಯಮದಲ್ಲಿ ಪದವಿ ಕೋರ್ಸ್‌ಗಳನ್ನು ಅಧ್ಯಯನ ಮಾಡುತ್ತಿದ್ದಾರೆ. ಭೀಮ ಉದಯೋನ್ಮುಖ ನೃತ್ಯ-ಸಂಯೋಜಕ, ಆತನ ಇನ್ನೊಬ್ಬ ಸಹೋದರ ಕಲಾವಿದ, ಕಂಪ್ಯೂಟರ್ ಸೈನ್ಸ್ ಪದವಿ ಅಧ್ಯಯನ ಮಾಡುತ್ತಿದ್ದಾನೆ. ಮೂರನೆಯವ ವಾಣಿಜ್ಯಕೋರ್ಸ್ ಆಯ್ಕೆ ಮಾಡಿಕೊಂಡಿದ್ದಾನೆ.

ವಿಷ್ಣು ಈ ಕೇಂದ್ರಕ್ಕೆ ಬಂದಾಗ ಆತನಿಗಿನ್ನೂ ಏಳು ವರ್ಷ. ಈ ಹಿಂದೆ ಒಂದು ವರ್ಷ ಆತ ಶಾಲೆಗೆ ಹೋಗಿರಲಿಲ್ಲ. ಸರ್ಕಾರಿ ಶಾಲೆಯ ನಾಲ್ಕನೇ ತರಗತಿಗೆ ಆತನನ್ನು ನೋಂದಣಿ ಮಾಡಿಸಲಾಯಿತು. ಕೇಂದ್ರದಲ್ಲಿಯೂ ಕೆಲಕಾಲ ಶಿಕ್ಷಣವನ್ನು ಪಡೆದನು. ಮುಂದೆ ಪಿಯೂವರೆಗೂ ಆತ ಶಿಕ್ಷಣವನ್ನು ಮುಂದುವರಿಸಿದನು. ಆತನಿಗೆ ಪದವಿ ಮುಗಿಸಲು ಸಾಧ್ಯವಾಗದೇ ಇದ್ದರೂ ಕುಟುಂಬ ನಿರ್ವಹಣೆಗಾಗಿ ಆತ್ಮವಿಶ್ವಾಸದಿಂದ ಕಂಟ್ರಾಕ್ಟರ್ ಆಗಿ ತನ್ನದೇ ಆದ ಉದ್ಯಮವನ್ನು ಆರಂಭಿಸಿದ್ದಾನೆ.

* ಮಕ್ಕಳ ಹೆಸರುಗಳನ್ನು ಬದಲಿಸಲಾಗಿದೆ

** ಆ ಸಮಯದಲ್ಲಿ ಸೇತುಬಂಧ ಕೋರ್ಸ್‌ಗಳಿಗೆ ಒಂದು ವರ್ಷ ಕಡ್ಡಾಯ ಎಂಬ ಸರ್ಕಾರಿ ನಿಯಮ ಇರಲಿಲ್ಲ.

**ಕಾರ್ಯಕ್ರಮದ ಬಹುಮುಖ್ಯ ಆಂಶಗಳು**

ಈ ಲೇಖನವು ಇಸಿಎಂಎಲ್ ಕಾರ್ಯಕ್ರಮದ ಮೂರು ವಿಭಿನ್ನ ಆದರೆ ಒಂದಕ್ಕೊಂದು ಸಂಬಂಧವನ್ನು ಹೊಂದಿರುವ ಅಂಶಗಳನ್ನು ಕುರಿತು ಹೇಳುತ್ತದೆ; ಈ ಕೇಂದ್ರಗಳಲ್ಲಿ ಅನುಸರಿಸುವ ಸಂಸ್ಕೃತಿ ಮತ್ತು ದಿನನಿತ್ಯದ ಪರಿಪಾಠಗಳು, ಪಠ್ಯಕ್ರಮಗಳು ಮತ್ತು ಮಕ್ಕಳ ಕಲಿಕಾ ಪ್ರಕ್ರಿಯೆಯಲ್ಲಿ ಎಲ್ಲ ಹಿತಾಸಕ್ತಿದಾರರ ಸಹಭಾಗಿತ್ವದಂತಹ ನಿರ್ಣಾಯಕ ಅಂಶಗಳು. ಈ ಮಕ್ಕಳಲ್ಲಿ ಅನೇಕರು ಕಲಿಯಲು ಬೆಳವಣಿಗೆ ಹೊಂದಲು ಮತ್ತು ಶಿಕ್ಷಣವನ್ನು ಮುಂದುವರಿಸಿಕೊಂಡು ಹೋಗಲು ಯಾಕೆ ಸಾಧ್ಯವಾಗಿದೆ ಎಂಬುದರ ಬಗ್ಗೆ ಚಿಂತನೆ ನಡೆಸುವುದಕ್ಕೆ ಈ ಅಂಶಗಳು ಸಾಕ್ಷಿ ಒದಗಿಸುತ್ತವೆ.

ನಂಬಿಕೆ ಮತ್ತು ಆತ್ಮವಿಶ್ವಾಸವನ್ನು ಬೆಳೆಸುವ ಸಂಸ್ಕೃತಿ

ಮಕ್ಕಳಿಗೆ ತಮ್ಮದೇ ವೇಗದಲ್ಲಿ ಕಲಿಯಲು ಅವಕಾಶವನ್ನು ಒದಗಿಸಿದರೆ ಹಾಗೂ ಸಾಕಷ್ಟು ಬೆಂಬಲವನ್ನು ನೀಡಿದರೆ ಪ್ರತಿಯೊಂದು ಮಗುವು ಕೂಡ ಕಲಿಯುವ ಸಾಮರ್ಥ್ಯವನ್ನು ಹೊಂದಿದೆ ಮತ್ತು ತನ್ನ ಕಲಿಕೆ ಹಾಗೂ ಬೆಳವಣಿಗೆಯಲ್ಲಿ ಯಶಸ್ಸನ್ನು ಕಾಣಬಲ್ಲದು ಎಂಬ ನಂಬಿಕೆಯೇ ಇಸಿಎಂಎಲ್ ಕೈಗೊಂಡಿರುವ ಈ ಉಪಕ್ರಮದ ತಾಯಿಬೇರು. ಇಲ್ಲಿ ಬರುವ ಹೆಚ್ಚಿನ ಮಕ್ಕಳ ಶಾಲಾ ಶಿಕ್ಷಣ ಕ್ರಮರಹಿತವಾಗಿ ಆಗಿರುತ್ತದೆ. ಹಾಗಾಗಿಯೇ ಅವರ ಅನುಭವವೂ ಕಳಪೆಯಾಗಿರುತ್ತದೆ. ಆದ್ದರಿಂದ ಮಕ್ಕಳಿಗೆ ಎಲ್ಲಿ ಸುರಕ್ಷಿತ ಹಾಗೂ ಕಾಳಜಿ ಇರುವ ವಾತಾವರಣ ಸಿಗುವುದೋ ಅಲ್ಲಿಯೇ ಅವರು ಕಲಿಕೆಯ ಕಾರ್ಯವನ್ನು ನಡೆಸುವ ಅವಕಾಶಗಳನ್ನು ನೀಡುವುದು ಈ ಕಾರ್ಯಕ್ರಮದ ಅತ್ಯಂತ ಮುಖ್ಯವಾದ ಅಂಶವಾಗಿದೆ.

ಅತ್ಯಂತ ಪ್ರಜ್ಞಾಪೂರ್ವಕ ಪ್ರಯತ್ನಗಳ ಫಲವಾಗಿ ಕಾಲಾನು-ಕ್ರಮದಲ್ಲಿ ಈ ಸಂಸ್ಕೃತಿ ಹೇಗೆ ಬೆಳೆಯಿತು ಎಂಬುದನ್ನು ಈ ಮುಂದಿನ ಪ್ಯಾರಾಗಳು ಚಿತ್ರಿಸುತ್ತವೆ.

- ಶಿಕ್ಷಕರಿಗೆ ವಿಶ್ವಾಸ ಗಳಿಸುವುದರ ಮೇಲೆ ಹೆಚ್ಚಿನ ಗಮನ ನೀಡಲಾಗುತ್ತದೆ. ಆದ್ದರಿಂದ ಶಿಸ್ತು ಕಲಿಸುವುದಕ್ಕಾಗಲೀ ಅಥವಾ ಪ್ರೇರಣೆ ನೀಡುವುದಕ್ಕಾಗಲೀ ಭಯ ಪ್ರಯೋಗ ಅಥವಾ ಬೆದರಿಕೆಯನ್ನು (ಸೂಚ್ಯವಾಗಿಯಾದರೂ) ಮಕ್ಕಳಿಗೆ ಯಾವತ್ತೂ ಮಾಡುವುದಿಲ್ಲ. ಹೊಸದಾಗಿ ನೇಮಕಗೊಂಡ ಶಿಕ್ಷಕರು ಇತರರು ಹೇಗೆ ಪರಿಸ್ಥಿತಿಗಳನ್ನು ನಿಭಾಯಿಸುತ್ತಾರೆ ಎಂಬುದನ್ನು ನೋಡಿ ಕಲಿತುಕೊಳ್ಳುತ್ತಾರೆ. ಮಕ್ಕಳು ಶಿಕ್ಷಕರ ಮೇಲೆ ನಂಬಿಕೆಯನ್ನು ಇಡುತ್ತಾರೆ ಮತ್ತು ಅವರೊಂದಿಗೆ ತಮ್ಮ ಯೋಚನೆಗಳು ಮತ್ತು ಸಮಸ್ಯೆಗಳನ್ನು ಹಂಚಿಕೊಳ್ಳುತ್ತಾರೆ.

- ಪರಿಣಾಮವಾಗಿ ತರಗತಿಯಲ್ಲಿ ಅಳವಡಿಸಿಕೊಳ್ಳಲಾದ ಬೋಧನಾ ವಿಧಾನವು ನಿರಂತರ ಜೊತೆಜೊತೆಯಾಗಿ ಕಲಿಯುವುದು, ಮಕ್ಕಳಿಗೆ ಹೊಸದರ ಶೋಧನೆಗೆ ಅವಕಾಶ ನೀಡುವುದು, ಮುಕ್ತವಾಗಿ ಚರ್ಚೆ ಮಾಡುವುದು ಮತ್ತು ಮಾತನಾಡುವುದಕ್ಕೆ ಹೆಚ್ಚಿನ ಒತ್ತು ನೀಡುತ್ತದೆ. ಉದಾಹರಣೆಗೆ ಅಸೆಂಬ್ಲಿಯಲ್ಲಿ ವಾರಕ್ಕೆ ಎರಡು ಬಾರಿ ನಡೆಯುವ ಅನುಭವ ಹಂಚಿಕೆ ಸಭೆಗಳಲ್ಲಿ ಮಕ್ಕಳು ಅನೇಕ ಬಾರಿ ಮನೆಯಲ್ಲಿನ ಸಮಸ್ಯೆಗಳ ಬಗ್ಗೆ ಬೇಸರಗೊಂಡ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಾರೆ. ತಂದೆತಾಯಿಗಳ ನಡುವಿನ ಜಗಳಗಳು, ಅಪ್ಪನ ಕುಡಿಯುವ ಚಟ, ಅಮ್ಮನಿಗೆ ಹೊಡೆಯುವುದು ಅಥವಾ ನೆರೆಹೊರೆಯವರೊಂದಿಗೆ ನಡೆಯುವ ಜಗಳಗಳ ಬಗ್ಗೆ ಅವರು ಪ್ರಸ್ತಾಪ ಮಾಡುತ್ತಾರೆ. ಇಂತಹ ಸಭೆಗಳಲ್ಲಿ ಸಾಮಾನ್ಯವಾಗಿ ವಾತಾವರಣ ಶಾಂತ, ಕಳಕಳಿ ಹಾಗೂ ಅಕ್ಕರೆಯದಾಗಿರುತ್ತದೆ. ಶಿಕ್ಷಕರು ಈ ಸಂದರ್ಭದಲ್ಲಿ ಯಾವುದೇ ತೀರ್ಪು ನೀಡದೇ ಮಕ್ಕಳು ಹೇಳುವುದನ್ನು ಕೇಳಿಸಿಕೊಳ್ಳುತ್ತಾರೆ. ಕೆಲ ಸಮಯದ ಬಳಿಕ ಶಿಕ್ಷಕರು ಮಕ್ಕಳ ಮನೆಗೆ ಭೇಟಿ ನೀಡಿ ಪಾಲಕರ

ನಡವಳಿಕೆಯು ಮಕ್ಕಳ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎಂಬುದನ್ನು ಮನವರಿಕೆ ಮಾಡಬಹುದು.

- ಮಕ್ಕಳು ಈ ಕೇಂದ್ರಕ್ಕೆ ಸೇರ್ಪಡೆಗೊಂಡಾಗ ಅವರಲ್ಲಿ ಎಲ್ಲ ವಯೋಮಾನದ ಮತ್ತು ಕಲಿಕೆಯ ನಾನಾ ಹಂತಗಳಲ್ಲಿರುವವರು ಇರುತ್ತಾರೆ. ಇಲ್ಲಿ ಅವರು ತಮ್ಮ ವಯಸ್ಸಿನ ಹೊರತಾಗಿಯೂ ಕಲಿಕೆಮಟ್ಟ ಆಧಾರಿತ ಗುಂಪುಗಳಲ್ಲಿ ಜೊತೆಯಾಗಿ ಕೆಲಸ ಮಾಡುತ್ತಾರೆ. ಹೀಗೆ ಎಲ್ಲರೂ ಒಟ್ಟಿಗೆ ಸೇರಿ ಕೆಲಸ ಮಾಡುವ ವ್ಯವಸ್ಥೆಗೆ ಸಂಬಂಧಿಸಿದಂತೆ ಚಿಕ್ಕವರು ಮತ್ತು ದೊಡ್ಡ ಮಕ್ಕಳ ನಡುವೆ ನಡೆಯುವ ಮಿಶ್ರ ಭಾವನೆಗಳನ್ನು ನಿಭಾಯಿಸುವ ದೃಷ್ಟಿಯಿಂದ ಶಿಕ್ಷಕರು ನಾನಾ ಕಾರ್ಯತಂತ್ರಗಳನ್ನು ಬಳಸುತ್ತಾರೆ. ಆ ಗುಂಪಿನ ಒಳಗೇ ಕೆಲವು ನಿರ್ದಿಷ್ಟ ಜವಾಬ್ದಾರಿಗಳನ್ನು ಮಕ್ಕಳಿಗೆ ವಹಿಸಲಾಗುತ್ತದೆ. ಪ್ರತಿಯೊಂದು ಹಂತದಲ್ಲಿಯೂ ಪ್ರತಿ ಮಗುವಿಗೂ ಗುಣಾತ್ಮಕ ಬಲವರ್ಧನೆ ನೀಡುವ ಕಡೆಗೆ ಮುತುವರ್ಜಿ ವಹಿಸಲಾಗುತ್ತದೆ. ಮಕ್ಕಳು ತಮ್ಮ ಕಲಿಕೆಯಲ್ಲಿ ಮುಂದಕ್ಕೆ ಕ್ರಮಿಸುತ್ತಲೇ ಅವರ ಗುಂಪುಗಳಲ್ಲಿಯೂ ಬದಲಾವಣೆಗಳಾಗುತ್ತವೆ. ಅಂತಿಮವಾಗಿ ಮಕ್ಕಳಿಗೆ ಮಿಶ್ರ ವಯೋಮಿತಿಯ ಗುಂಪುಗಳಲ್ಲಿ ಇರುವುದು ಏನೂ ಅನ್ನಿಸುವುದಿಲ್ಲ.

- ಕೇಂದ್ರದಲ್ಲಿ ಮೂರು ವಯೋಮಿತಿಯ ಗುಂಪುಗಳಿದ್ದು, ಪ್ರತಿಯೊಂದು ಗುಂಪಿಗೂ ನಿರ್ದಿಷ್ಟ ಪಠ್ಯಕ್ರಮವಿರುತ್ತದೆ. ಆದರೂ ಎಳೆಯ ವಯಸ್ಸಿನ ಮಕ್ಕಳು ತಮ್ಮ ಅಕ್ಕಅಣ್ಣಂದಿರ ಜೊತೆಗೆ ಕುಳಿತುಕೊಳ್ಳುವುದಕ್ಕೆ ಯಾವುದೇ ಅಭ್ಯಂತರ ಇರುವುದಿಲ್ಲ. ಆ ಕಿರಿಯ ಮಕ್ಕಳು ಕೇಂದ್ರಕ್ಕೆ ಹೊಂದಿಕೊಳ್ಳುವ ತನಕ ಇದನ್ನು ಮುಂದುವರಿಸಬಹುದು. ಇಂತಹ ಒಂದು ಕಾರ್ಯತಂತ್ರ ಮಕ್ಕಳ ನಡುವೆ ಅಕ್ಕರೆ ಹಾಗೂ ಕಾಳಜಿಯ ಸಂಸ್ಕೃತಿಯನ್ನು ಬೆಳೆಸುವಲ್ಲಿ ಸಹಾಯ ಮಾಡಿದೆ.

- ಮಕ್ಕಳಿಗೆ ಬೆಳಗ್ಗೆ ಹಾಲು ನೀಡಲಾಗುತ್ತದೆ, ಮಧ್ಯಾಹ್ನದ ಊಟ ಹಾಗೂ ಸಂಜೆ ಅವರು ಮನೆಗೆ ಮರಳುವುದಕ್ಕೆ ಮುನ್ನ ತಿಂಡಿ ನೀಡಲಾಗುತ್ತದೆ. ಶಿಕ್ಷಕರು ಮಕ್ಕಳ ಜೊತೆಗೇ ತಿಂಡಿ ಸೇವನೆ ಮಾಡುತ್ತಾರೆ. ಇದು ಅವರ ನಡುವೆ ಗಟ್ಟಿ ಬಾಂಧವ್ಯವನ್ನು ಬೆಸೆಯಲು ನಾಂದಿಯಾಗುತ್ತದೆ.

- ಕೆಲವು ಮಕ್ಕಳು ಆರಂಭದಲ್ಲಿ ಮಕ್ಕಳಿಗೆ ಹೊಡೆಯುವುದು, ಎಲ್ಲೆಂದರಲ್ಲಿ ಓಡಾಡುವುದು, ವಸ್ತುಗಳನ್ನು ಎಸೆಯುವುದು ಹಾಗೂ ಆಟಿಕೆಗಳು ಮತ್ತಿತರ ವಸ್ತುಗಳನ್ನು ಮರಳಿ ಅದೇ ಜಾಗದಲ್ಲಿ ಇಡದೇ ಇರುವುದು ಮುಂತಾದ ನಡವಳಿಕೆ ಸಮಸ್ಯೆಗಳನ್ನು ತೋರಿಸುತ್ತಾರೆ. ಇಂತಹ ನಡವಳಿಕೆಗಳನ್ನು ತಿದ್ದಲು ಶಿಕ್ಷಕರು ಮಕ್ಕಳಿಗೆ ಸಕಾರಣ ತಿಳಿವಳಿಕೆಗಳನ್ನು ನೀಡಿ, ಅವರು ಹೇಗೆ ನಡೆದುಕೊಳ್ಳಬೇಕು, ಯಾಕೆ ಹಾಗೆ ನಡೆದುಕೊಳ್ಳಬೇಕು ಎಂಬುದನ್ನು ಮೃದುವಾಗಿ ಮನವರಿಕೆ ಮಾಡಿಸುತ್ತಾರೆ. ಕೆಲವು ವೇಳೆ ಹಿರಿಯ ಮಕ್ಕಳು ಕೂಡ ಅವರೊಡನೆ ಮಾತನಾಡಿ ತಿಳಿಹೇಳುವುದರಲ್ಲಿ ಸಹಾಯ ನೀಡುತ್ತಾರೆ.

- ಅಲ್ಲಿಂದ ಮುಂದೆ ಮುಖ್ಯವಾಹಿನಿ ಶಿಕ್ಷಣಕ್ಕೆ ಸೇರಿಕೊಂಡ ಮಕ್ಕಳಿಗೆ ಈ ಕೇಂದ್ರದ ಬಗ್ಗೆ ಇದು ನಮ್ಮದು ತಮ್ಮದೇ ಇನ್ನೊಂದು ಮನೆ ಎಂಬ ಅಕ್ಕರೆಯ ಭಾವನೆ ಇರುತ್ತದೆ. ಹೆಚ್ಚಿನ ಮಕ್ಕಳು ತಮ್ಮ ಶಾಲೆಗೆ ಹೋಗುವ ಮುನ್ನ ಮತ್ತು ಶಾಲೆಯಿಂದ ಮನೆಗೆ ತೆರಳುವ ಮೊದಲು ಈ ಕೇಂದ್ರಕ್ಕೆ ಭೇಟಿ ನೀಡುತ್ತಾರೆ. ಇತರರ ಜೊತೆ ಸಂಜೆಯ ತಿಂಡಿ ತಿನ್ನುತ್ತಾರೆ ಮತ್ತು ತಮ್ಮ ಹೋಮ್‌ವರ್ಕ್ ಅನ್ನು ಇಲ್ಲಿಯೇ ಮುಗಿಸುತ್ತಾರೆ. ಊಟ ಬಡಿಸುವುದು, ಸ್ವಚ್ಛಗೊಳಿಸುವುದು ಮುಂತಾದ ಕೆಲಸಗಳ ಮೂಲಕ ಅವರು ತಮಗಿಂತ ಚಿಕ್ಕವರ ಬಗ್ಗೆ ಕಾಳಜಿ ವಹಿಸುತ್ತಾರೆ. ಶಾಲೆಗೆ ರಜೆ ಇದ್ದಾಗ ಈ ಕೇಂದ್ರದ ಕ್ಲಾಸ್‌ರೂಮ್‌ನಲ್ಲಿ ಶಿಕ್ಷಕರಿಗೂ ನೆರವಾಗುತ್ತಾರೆ.

**ಪಠ್ಯಕ್ರಮ: ಮಾಡ್ಯೂಲರ್ ವಿಧಾನ**

ಈ ಕಾರ್ಯಕ್ರಮದಲ್ಲಿ ಬೆಳವಣಿಗೆ ಆಧಾರಿತ ಪಠ್ಯಕ್ರಮ ವಿಧಾನವನ್ನು ಅನುಸರಿಸಲಾಗಿದೆ. ಮಕ್ಕಳ ಸಾಮರ್ಥ್ಯ ಏನೇ ಇರಲಿ, ಎಲ್ಲರನ್ನೂ ಇದರಲ್ಲಿ ಒಳಗೊಳ್ಳುವಂತೆ ಮಾಡಲಾಗುತ್ತದೆ. ಮಕ್ಕಳನ್ನು ಅವರ ವಯಸ್ಸಿಗೆ ತಕ್ಕುದಾದ ಗುಂಪಿನಲ್ಲಿ ಸೇರಿಸಲಾಗುತ್ತದೆ– ಹಸುಗೂಸುಗಳು ಮತ್ತು ಅಂಬೆಗಾಲಿಡುವ ಮಗು (ಆರು ತಿಂಗಳಿಂದ 3 ವರ್ಷಗಳು), ಪ್ರೀ–ಸ್ಕೂಲ್ ಅಥವಾ ಶಾಲಾ ಪೂರ್ವದ ಮಕ್ಕಳು (3ರಿಂದ 6 ವರ್ಷ), ಪ್ರಾಥಮಿಕ ಶಾಲಾ ಗುಂಪು (6 ಮತ್ತು ಅದಕ್ಕಿಂತ ಹೆಚ್ಚಿನ ವರ್ಷಗಳ ಮಕ್ಕಳು). ಚಿಕ್ಕ ವಯಸ್ಸಿನ ಗುಂಪುಗಳಲ್ಲಿ ಪ್ರಾಥಮಿಕವಾಗಿ ಆರೋಗ್ಯ ಮತ್ತು ಪೌಷ್ಟಿಕಾಂಶದ ಬಗ್ಗೆ ಹೆಚ್ಚಿನ ಗಮನಹರಿಸಲಾಗುತ್ತದೆ. ಕೆಲವೊಂದು ಉತ್ತೇಜಕ ಅನುಭವ ನೀಡುವುದು ಮತ್ತು ಮಾತನಾಡುವುದನ್ನು ಕಲಿಸುವುದು ಮುಂತಾದ ಪ್ರಕ್ರಿಯೆಗಳು ಇಲ್ಲಿ ನಡೆಯುತ್ತವೆ.

ಕಲಿಕೆಯ ನಾನಾ ಕ್ಷೇತ್ರಗಳನ್ನು ಒಳಗೊಂಡ ಮತ್ತು ಮಕ್ಕಳಿಗೆ ಹೊಂದಿಕೆಯಾಗುವಂತಹ ಪಠ್ಯಕ್ರಮವನ್ನು ರೂಪಿಸುವ ಪ್ರಯತ್ನವನ್ನು ಮಾಡಲಾಗುತ್ತದೆ. ಹೊಸದಾಗಿ ಸೇರ್ಪಡೆ–ಗೊಂಡಿರುವ ಮಕ್ಕಳಿಗೆ ಸುತ್ತಲಿನ ಚಟುವಟಿಕೆಗಳು ಮತ್ತು ಪರಿಸರದ ಪರಿಚಯ ಮಾಡಿಸುವ ದೃಷ್ಟಿಯಿಂದ ಕೇಂದ್ರದ ಸುತ್ತಮುತ್ತ ಅಡ್ಡಾಡಿಕೊಂಡಿರಲು ಉತ್ತೇಜನ ನೀಡಲಾಗುತ್ತದೆ. ನಿರ್ಮಾಣ ಕಾಮಗಾರಿ ನಡೆಯುವ ನಿವೇಶನದಲ್ಲಿ ಅವರು ಕೆಲಕಾಲ ಇರುವುದು ಖಾತರಿಯಾದರೆ ಅವರನ್ನು ಹತ್ತಿರದ ಸರ್ಕಾರಿ ಶಾಲೆಯಲ್ಲಿ ನೋಂದಣಿ ಮಾಡಲಾಗುತ್ತದೆ. ಇದಾದ ಬಳಿಕ, ಆ ಮಕ್ಕಳೊಂದಿಗೆ ಸಂಪರ್ಕದಲ್ಲಿರುವ ಕೇಂದ್ರದ ಶಿಕ್ಷಕರು ಅವರ ಕಲಿಕಾ ಮಟ್ಟಗಳನ್ನು ಅಳೆಯುವ ಕಾರ್ಯವನ್ನು ಮುಗಿಸಿದ ನಂತರ ಅವರನ್ನು ಸೂಕ್ತವಾದ ಕಲಿಕಾ ಉಪ–ಗುಂಪುಗಳಲ್ಲಿ ಸೇರ್ಪಡೆ ಮಾಡುತ್ತಾರೆ.

ಈ ಗುಂಪಿನಲ್ಲಿರುವ ಮಕ್ಕಳನ್ನು ಮುಂದಿನ ಒಂದು ವರ್ಷದ ಅವಧಿಯಲ್ಲಿ ಶಿಕ್ಷಣದ ಮುಖ್ಯವಾಹಿನಿಗೆ ಸೇರಿಸಬೇಕಾಗಿರುವುದರಿಂದ ಮಾಡ್ಯೂಲರ್ ವಿಧಾನವನ್ನು ಅಳವಡಿಸಿಕೊಳ್ಳಲಾಗುತ್ತದೆ. ಪಾಲಕರು ಕೆಲಸ ಮಾಡುವ ನಿವೇಶನದಲ್ಲಿ ಮಕ್ಕಳು ಬಹಳ ಕಾಲ ಇರುವುದು ಅನಿಶ್ಚಿತವಾದ ಕಾರಣ ಪ್ರತಿಯೊಂದು ಮಾಡ್ಯೂಲ್ ಕೂಡ ಒಂದು ಪರಿಪೂರ್ಣ ಘಟಕವಾಗಿರುತ್ತದೆ; ಇಲ್ಲಿ ಕನ್ನಡ ಮತ್ತು ಇಂಗ್ಲಿಷ್, ಗಣಿತ ಹಾಗೂ ಪರಿಸರ ಅಧ್ಯಯನಗಳು ಇರುತ್ತವೆ. ಬೋಧನೆಯು ಸಾಗುತ್ತಿರುವಾಗಲೇ ಮೂಲ ಪರಿಕಲ್ಪನೆಗಳನ್ನು ಮತ್ತೆ ಮತ್ತೆ ಪರಿಚಯಿಸಲಾಗುತ್ತದೆ. ಇಂತಹುದೊಂದು ಪ್ರಕ್ರಿಯೆಯಿಂದ ಆಗಷ್ಟೇ ಸೇರಿಕೊಂಡ ಮಗುವಿಗೆ ಪರಿಕಲ್ಪನೆಯನ್ನು ಪರಿಚಯಿಸಿದಂತಾಗುತ್ತದೆ ಮತ್ತು ಇತರರಿಗೆ ಪುನರ್‌ಮನನ ಮಾಡಿಸಿದಂತಾಗುತ್ತದೆ. ಬುನಾದಿ ಅಕ್ಷರ ಜ್ಞಾನ ಮತ್ತು ಲೆಕ್ಕಾಚಾರದ ಕೌಶಲ್ಯ ಒದಗಿಸುವ ಕಡೆಗೆ ಹೆಚ್ಚಿನ ಗಮನಹರಿಸಲಾಗುತ್ತದೆ.

ಮಕ್ಕಳನ್ನು ಆಲಿಸುವುದು, ಚರ್ಚೆ, ಆಟ, ರಚನೆ, ನಾಟಕ, ಕಲೆ ಮತ್ತಿತರ ಚಟುವಟಿಕೆಗಳಲ್ಲಿ ತೊಡಗಲು ಅವಕಾಶ ಕಲ್ಪಿಸಿ ಅವರು

ಕುತೂಹಲಗಳು, ಚುರುಕಾದ ಮತ್ತು ಲವಲವಿಕೆಯುಳ್ಳ ವಿದ್ಯಾರ್ಥಿಗಳಾಗಲು ಉತ್ತೇಜನ ನೀಡಲಾಗುತ್ತದೆ. ವಿವಿಧ ವಿಷಯಗಳನ್ನು ಕಲಿಸಲು ನಮ್ಮ ನಡುವೆ ದಿನನಿತ್ಯ ಸಿಗುವ ವಸ್ತುಗಳು ಮತ್ತು ಸಂಪನ್ಮೂಲಗಳನ್ನೇ ಬಳಸಿಕೊಳ್ಳಲಾಗುತ್ತದೆ. ಇಂತಹ ವಸ್ತುಗಳನ್ನು ರಚಿಸುವ ಪ್ರಕ್ರಿಯೆಯಲ್ಲಿ ಶಿಕ್ಷಕರೂ ಭಾಗಿಯಾಗಿರುತ್ತಾರೆ. ಪರಿಣಾಮವಾಗಿ ಇವುಗಳನ್ನು ವಿಷಯ ಅರಿತು ಬಳಸುತ್ತಾರೆ.

ಕೆಲವು ಕೌಶಲಗಳ ನೆರವಿನಿಂದ ಗಣಿತದ ಪರಿಕಲ್ಪನೆಗಳನ್ನು ಅರ್ಥ ಮಾಡಿಸಲಾಗುತ್ತದೆ. ಈ ಸಂದರ್ಭದಲ್ಲಿ ವಿದ್ಯಾರ್ಥಿಗಳು ಅನೇಕ ವಸ್ತುಗಳನ್ನು ಬಳಸಿಕೊಳ್ಳುತ್ತಾರೆ; ಕರೆನ್ಸಿ ನೋಟುಗಳ ಬಗೆಗೆ ಕಲಿಯುವಾಗ 'ಕಾಗದದ ನಕಲಿ ನೋಟು'ಗಳನ್ನು ಬಳಸುವುದು, ಸ್ಥಾನ ಮೌಲ್ಯವನ್ನು ಅರಿತುಕೊಳ್ಳುವ ಸಲುವಾಗಿ ಕಡ್ಡಿಗಳ ಕಟ್ಟುಗಳನ್ನು ಬಳಸುವುದು, ಸಮಯದ ವಿವರವನ್ನು ತಿಳಿಯಲು ನಿಜವಾದ ಗಡಿಯಾರವನ್ನು ಬಳಕೆ ಮಾಡುವುದು. ಕಲ್ಲಿನ ಹರಳುಗಳು, ಮಣಿಗಳು ಮತ್ತು ಬಳೆಗಳಂತಹ ವಸ್ತುಗಳನ್ನು ಬಳಸಿಕೊಂಡು ವಿವಿಧ ಪರಿಕಲ್ಪನೆಗಳನ್ನು ಮಕ್ಕಳಿಗೆ ತಿಳಿಸಿ-ಕೊಡಲಾಗುತ್ತದೆ.

ಇವಿಎಸ್ ತರಗತಿಗಳಲ್ಲಿ ಮಕ್ಕಳಿಗೆ ಅವರ ಸುತ್ತಲಿನ ಪರಿಸರದ ಬಗ್ಗೆ ಅರಿವು ಮೂಡಿಸಲು, ಬುದ್ಧಿಗೆ ಕಸರತ್ತು ಮತ್ತು ಗುಂಪು ಚರ್ಚೆ, ಪಾತ್ರಾಭಿನಯ, ಬ್ಯಾಂಕುಗಳಿಗೆ, ಅಂಚೆ ಕಚೇರಿ, ರೈಲು ನಿಲ್ದಾಣ, ಬಸ್ ನಿಲ್ದಾಣ ಮತ್ತು ಪೆಟ್ರೋಲ್ ಬಂಕ್‌ಗಳಿಗೆ ಭೇಟಿ ಮುಂತಾದವು ಸೇರಿರುತ್ತವೆ. ಈ ಹಂತದಲ್ಲಿ ಮಕ್ಕಳಿಗೆ ಹೆಚ್ಚು ಪ್ರಶ್ನೆಗಳನ್ನು ಕೇಳಲು ಮತ್ತು ತಮ್ಮ ಅರಿವು ಹಾಗೂ ಅನುಭವವನ್ನು ಹಂಚಿಕೊಳ್ಳಲು ಪ್ರೋತ್ಸಾಹ ನೀಡುವುದಕ್ಕೆ ಒತ್ತು ನೀಡಲಾಗುತ್ತದೆ.

ಕನ್ನಡವು ಮುಖ್ಯ ಭಾಷಾ ಮಾಧ್ಯಮವಾಗಿರುತ್ತದೆ. ಜೊತೆಗೆ ಒಂದಿಷ್ಟು ಪ್ರಾಥಮಿಕ ಇಂಗ್ಲಿಷ್ ಅನ್ನು ಮಕ್ಕಳಿಗೆ ಕಲಿಸಲಾಗುತ್ತದೆ. ಹಿಂದಿ ಮಾತೃಭಾಷೆಯಾಗಿರುವ ಮಕ್ಕಳಿಗೆ ಶಿಕ್ಷಕರು ಹಿಂದಿಯಲ್ಲಿ ವಿವರಣೆ ನೀಡುತ್ತಾರೆ. ಕಥೆಗಳು, ಕವನಗಳು, ಒಗಟುಗಳನ್ನು ಅಭಿನಯದ ಮೂಲಕ ಹೇಳುವುದು ಮತ್ತು ಭಾಷಾ ಕಲಿಕೆಯಲ್ಲಿ ವೃತ್ತಪತ್ರಿಕೆ, ಕಾಗದದ ಹೊದಿಕೆಗಳು ಇತ್ಯಾದಿ 'ಅಧಿಕೃತ' ಸಾಮಗ್ರಿಗಳನ್ನು ಬಳಸಿಕೊಳ್ಳುವುದು ಇಲ್ಲಿನ ಇನ್ನೊಂದು ವಿಶೇಷ. ದಿನಕ್ಕೊಂದು ಪದ (Word for the Day)ದಂತಹ ಚಟುವಟಿಕೆಗಳು ಮಕ್ಕಳಿಗೆ ಪ್ರಯೋಜನಕಾರಿ ಮತ್ತು ಮಕ್ಕಳು ಅದನ್ನು ಆನಂದಿಸುತ್ತಾರೆ.

ತಾವು ಕೇಳಿದ ಅಥವಾ ಓದಿದ ಹೊಸ ಪದಗಳನ್ನು ತರಲು ಮಕ್ಕಳನ್ನು ಪ್ರೋತ್ಸಾಹಿಸಲಾಗುತ್ತದೆ. ಇದು ಚರ್ಚೆಯನ್ನು ಉತ್ತೇಜಿಸುತ್ತದೆ ಮತ್ತು ಮಕ್ಕಳು ತಮ್ಮ ಅನುಭವದ ಬಗ್ಗೆ ಮಾತನಾಡಲು ಅವಕಾಶವನ್ನು ಪಡೆಯುತ್ತಾರೆ. ಆಯಾ ದಿನದ ಪದವನ್ನು ಕನ್ನಡ, ಇಂಗ್ಲಿಷ್ ಮತ್ತು ಅಗತ್ಯವಿದ್ದರೆ ಹಿಂದಿಯಲ್ಲೂ ಪ್ರದರ್ಶಿಸಲಾಗುವುದು. ಮಕ್ಕಳು ವಸ್ತುಗಳ, ಭಾವನೆಗಳ ಅಥವಾ ಘಟನೆಯನ್ನು ಕುರಿತ ಪದಗಳನ್ನು ಹಂಚಿಕೊಳ್ಳಬಹುದು. ಉದಾಹರಣೆಗೆ, ಆರಂಭಿಕ ಹಂತದಲ್ಲಿ, ಮಕ್ಕಳು ಸಂತೋಷ, ಕಾಲುಗೆಜ್ಜೆ ಅಥವಾ ಮೇಳಕ್ಕೆ ಹೋಗುವಂತಹ ಅನುಭವದ ಪದವನ್ನು ಎಲ್ಲಾ ಮೂರು ಭಾಷೆಗಳಲ್ಲಿ ಕೇಳುತ್ತಾರೆ. ನಂತರ ಅವರು ದಿನದ ಪದವನ್ನು ಬಳಸಿ ಕನ್ನಡದಲ್ಲಿ ಮತ್ತು ಸ್ವಲ್ಪ ಇಂಗ್ಲಿಷ್‌ನಲ್ಲಿ ಸರಳವಾದ ವಾಕ್ಯಗಳನ್ನು ಮಾಡುವ ಮೂಲಕ ಎರಡನೇ ಹಂತಕ್ಕೆ ಹೋಗುತ್ತಾರೆ.

ಪಠ್ಯಕ್ರಮದಲ್ಲಿ ಅಳವಡಿಸಲಾಗಿರುವ ಆರೋಗ್ಯದ ಘಟಕವು ಪೌಷ್ಟಿಕಾಂಶ ಮತ್ತು ಸ್ವಚ್ಛತೆ ಬಗೆಗಿನ ಚರ್ಚೆಗಳಿಗೆ ಪ್ರೋತ್ಸಾಹ ನೀಡುತ್ತದೆ. ಇದರ ಜೊತೆಗೆ ಕೈತೋಟ ಮತ್ತು ಅಡುಗೆ ಮಾಡುವುದು ಮಕ್ಕಳಿಗೆ ಯಾವತ್ತೂ ಖುಷಿ ಹಾಗೂ ಮೋಜಿನ ಸಂಗತಿ. ಇಂತಹ ಚಟುವಟಿಕೆಗಳ ಮೂಲಕ ಮಕ್ಕಳು ಸಮತೋಲಿತ ಆಹಾರ ಹಾಗೂ ಕಾಳುಗಳ ಮೊಳಕೆ ಬರಿಸುವುದು, ತರಕಾರಿ ಬೇಯಿಸುವುದು ಅಥವಾ ಚಪಾತಿ ಮಾಡುವುದು ಮುಂತಾದ ಅಡುಗೆಯ ಮೂಲಭೂತ ಕೆಲಸಗಳನ್ನು ಕಲಿಯುತ್ತಾರೆ. ಅಡುಗೆ ಕಾರ್ಯದಲ್ಲಿ ಭಾಷಾ ಕೌಶಲ್ಯಗಳನ್ನು ಬೆಳೆಸಿಕೊಳ್ಳುವುದರ ಜೊತೆಗೇ, ಅಂದಾಜು ಮಾಡುವ ಮತ್ತು ಅಳತೆ ಮಾಡುವ ಕೌಶಲ್ಯಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ.

ಕೈತೋಟ ನಿರ್ವಹಣೆಯ ಸಂದರ್ಭದಲ್ಲಿ ಮಕ್ಕಳು ತರಕಾರಿ ಪಾತಿಗಳನ್ನು ಬೆಳೆಯುವುದನ್ನು ಮತ್ತು ಆರೈಕೆ ಮಾಡುವುದನ್ನು ಕಲಿಯುತ್ತಾರೆ. ಬೆಳೆದ ತರಕಾರಿಯನ್ನು ಹಂಚಿಕೊಳ್ಳುವುದನ್ನು ಕಲಿಯುತ್ತಾರೆ. ಕೆಲ ವರ್ಷಗಳ ಹಿಂದೆ ಮಕ್ಕಳು ನೆಟ್ಟ ಮಾವಿನ ಗಿಡ ಈ ವರ್ಷ ಫಲ ಕೊಟ್ಟಿದೆ. ಮಕ್ಕಳು ದೊಡ್ಡವರೊಂದಿಗೆ ಸೇರಿಕೊಂಡು ಮಾವಿನಕಾಯಿ ಉಪ್ಪಿನಕಾಯಿ ತಯಾರು ಮಾಡಿ ತಮ್ಮೊಳಗೆ ಹಂಚಿಕೊಂಡರು. ಇವೆಲ್ಲವನ್ನೂ ಪ್ರತಿಯೊಂದು ಮಾಡ್ಯೂಲ್-ನಲ್ಲಿಯೂ ಸೇರ್ಪಡೆ ಮಾಡಲಾಗಿದೆ ಮತ್ತು ಬಹುತೇಕ ರೂಪಾತ್ಮಕವಾಗಿವೆ.

ಪ್ರತಿಯೊಂದು ಮಗುವೂ ತನ್ನದೇ ಆದ ವೇಗದಲ್ಲಿ ಕಲಿಯುವುದರಿಂದ ಪ್ರತಿಯೊಂದು ಮಗುವಿನ ಪ್ರಗತಿಯನ್ನು ದಾಖಲು ಮಾಡಲು ಮೌಲ್ಯಮಾಪನವನ್ನು ಬಳಸಲಾಗುತ್ತದೆ. ನಾನಾ ವಿಧಗಳಲ್ಲಿ ತಮ್ಮ ಕಲಿಕೆಯನ್ನು ಪ್ರದರ್ಶಿಸಲು ಮಕ್ಕಳಿಗೆ ಅವಕಾಶಗಳು ಸಿಗುತ್ತವೆ. ಶಿಕ್ಷಕರ ನಿರಂತರ ಅವಲೋಕನ ಮತ್ತು ವಿಸ್ತೃತ ಟಿಪ್ಪಣಿಗಳು ಯೋಜನೆ ಮತ್ತು ಸಿದ್ಧತೆ ಮಾಡಿಕೊಳ್ಳಲು ಅನುಕೂಲ ಮಾಡಿಕೊಡುತ್ತವೆ. ಪ್ರತಿಯೊಂದು ಮಗುವಿಗೂ ಆತನ ಕೆಲಸ ಮತ್ತು ಪ್ರತ್ಯೇಕ ಖಾತೆಗಳ ಜೊತೆಗೆ ದಾಖಲೆಗಳನ್ನು ನಿರ್ವಹಿಸಿಕೊಂಡು ಬರಲಾಗುತ್ತದೆ. ಮಕ್ಕಳು ಒಮ್ಮೆ ಶಾಲೆಗೆ ಸೇರಿದ ಬಳಿಕ ಪೆನ್ನು ಮತ್ತು ಕಾಗದದ ಪರೀಕ್ಷೆಗಳಿಗೆ ಸಿದ್ಧಗೊಳ್ಳಬೇಕು ಎಂಬ ಒಂದೇ ಕಾರಣಕ್ಕೆ ಪ್ರತಿ ಮಾಡ್ಯುಲ್‌ನ ಕೊನೆಯಲ್ಲಿ ಒಟ್ಟಾರೆ ಮೌಲ್ಯಮಾಪನವನ್ನು ಮಾಡಲಾಗುತ್ತದೆ.

ಪಾಲುದಾರರ ಸಹಭಾಗಿತ್ವ

ಶಿಕ್ಷಕರು

ಶಿಕ್ಷಕರು ನಿಯತವಾಗಿ ಮತ್ತು ಬದ್ಧತೆಯಿಂದ ಮಕ್ಕಳ ಕಲಿಕೆಯಲ್ಲಿ ತೊಡಗಿ ಭಾವನಾತ್ಮಕವಾಗಿ ಮಕ್ಕಳಿಗೆ ಬೆಂಬಲ ನೀಡುತ್ತಾರೆ. ನಿರಂತರ ಮಾತುಕತೆ, ಅನುಭವ ಹಂಚಿಕೆ ಮತ್ತು ಪಾಲ್ಗೊಳ್ಳುವ ಪ್ರಕ್ರಿಯೆಯ ಮೂಲಕ ಆತ್ಮವಿಶ್ವಾಸವೃದ್ಧಿ, ಗುಂಪುಗಳಲ್ಲಿ ಕೆಲಸ ಮಾಡುವುದು, ಹಂಚಿಕೊಳ್ಳುವುದು ಹಾಗೂ ಹೊಸ ವಿದ್ಯಾರ್ಥಿಗಳನ್ನು ಸ್ನೇಹದಿಂದ ಸ್ವೀಕರಿಸುವುದು ಮತ್ತು ಅವರೊಡನೆ ಹೊಂದಿಕೊಳ್ಳುವ ಪ್ರಕ್ರಿಯೆಯನ್ನು ನಡೆಸಲಾಗುತ್ತದೆ. ಇಂತಹ ಎಲ್ಲ ಪ್ರಕ್ರಿಯೆಯಿಂದ ಮಕ್ಕಳು ಮುಖ್ಯವಾಹಿನಿಯ ಶಾಲಾ ಶಿಕ್ಷಣಕ್ಕೆ ಸುಗಮವಾಗಿ ಹಾಗೂ ಆತ್ಮವಿಶ್ವಾಸದಿಂದ ವರ್ಗಾವಣೆ ಆಗುವುದು ಸಾಧ್ಯವಾಗುತ್ತದೆ.

ಈ ಕೇಂದ್ರಗಳಿಗೆ ದೇಶದ ನಾನಾ ಭಾಗಗಳಿಂದ ನಾನಾ ಭಾಷೆಗಳನ್ನು ಮಾತನಾಡುವ ಮಕ್ಕಳು ಬರುವುದರಿಂದ ಇಲ್ಲಿನ

ಶಿಕ್ಷಕರು ಕನಿಷ್ಠ ಮೂರು ಭಾಷೆಗಳನ್ನು ಮಾತನಾಡುತ್ತಾರೆ ಮತ್ತು ಹೊಸದಾಗಿ ಬಂದ ಮಕ್ಕಳಿಗೆ ಯಾವುದೇ ಸಮಸ್ಯೆಯಾಗದಂತೆ ನೋಡಿಕೊಳ್ಳಲಾಗುತ್ತದೆ. ಅವರು ಪ್ರತಿಯೊಂದು ಮಗುವಿನ ಪ್ರಗತಿಯ ದಾಖಲೆಗಳನ್ನು ನಿರ್ವಹಿಸಿಕೊಂಡು ಬರುತ್ತಾರೆ. ಮಕ್ಕಳ ಪಾಲಕರು ಕೆಲಕಾಲದ ಮಟ್ಟಿಗೆ ತಮ್ಮ ಗ್ರಾಮಗಳಿಗೆ ಹಿಂದಿರುಗುವುದರಿಂದ ಮಕ್ಕಳು ಮಾಡ್ಯುಲ್‌ನ ಮಧ್ಯದಲ್ಲಿಯೇ ಬಿಟ್ಟು ತೆರಳುವ ಸಾಧ್ಯತೆಯೂ ಇರುತ್ತದೆ. ಇಂತಹ ಸಂದರ್ಭದಲ್ಲಿ ಮಕ್ಕಳು ಮರಳಿ ಕೇಂದ್ರಕ್ಕೆ ಬಂದಾಗ ಈ ದಾಖಲೆಗಳು ಅತ್ಯಂತ ಮುಖ್ಯವಾಗಿರುತ್ತವೆ.

ಶಿಕ್ಷಕರು ಯೋಜನೆ ರಚಿಸುವುದು ಮತ್ತು ವಿಚಾರಗಳನ್ನು ಹಂಚಿಕೊಳ್ಳುವುದು ಇಸಿಎಂಎಲ್ ಕಾರ್ಯಕ್ರಮದ ಅನಿವಾರ್ಯ ಭಾಗವಾಗಿರುತ್ತದೆ. ಪ್ರತಿ ಹದಿನೈದು ದಿನಗಳಿಗೊಮ್ಮೆ ಶಿಕ್ಷಕರು ಸಭೆ ಸೇರಿ ಹಿಂದಿನ ಹದಿನೈದು ದಿನಗಳ ಅನುಭವವನ್ನು ಹಂಚಿಕೊಳ್ಳುತ್ತಾರೆ ಮತ್ತು ಮುಂದಿನ ಹದಿನೈದು ದಿನಗಳ ಯೋಜನೆಯನ್ನು ರೂಪಿಸುತ್ತಾರೆ. ಅವರು ಸಮುದಾಯ, ಆರೋಗ್ಯ ಮತ್ತು ಪೌಷ್ಟಿಕಾಂಶ, ಮಕ್ಕಳ ಪ್ರಗತಿ ನಿರ್ವಹಣೆ, ಆಡಳಿತ ಇತ್ಯಾದಿ ವಿಷಯಗಳ ಬಗೆಗೂ ಚರ್ಚೆ ನಡೆಸುತ್ತಾರೆ.

ಮಕ್ಕಳ ಪ್ರಗತಿಯನ್ನು ತಿಳಿದುಕೊಳ್ಳಲು ಮತ್ತು ಅವರ ದಾಖಲೆಗಳನ್ನು ನವೀಕರಿಸಲು ಮಕ್ಕಳು ನೋಂದಣಿ ಆಗಿರುವ ಸರ್ಕಾರಿ ಶಾಲೆಯ ಮುಖ್ಯೋಪಾಧ್ಯಾಯರ ಜೊತೆಗೆ ಶಿಕ್ಷಕರು ನಿರಂತರ ಸಂಪರ್ಕದಲ್ಲಿರಲು ಒಟ್ಟುಗೂಡಿ ಪ್ರಯತ್ನ ಮಾಡುತ್ತಿರುತ್ತಾರೆ. ಕೇಂದ್ರದಲ್ಲಿ ಈ ಮಕ್ಕಳಿಗೆ ನಿರಂತರ ಬೆಂಬಲ ದೊರಕುತ್ತಿರುತ್ತದೆ. ಸರ್ಕಾರಿ ಶಾಲೆಯ ಸಿಬ್ಬಂದಿಯೊಂದಿಗೆ ಕೇಂದ್ರದಲ್ಲಿ ಅನುಸರಿಸಲಾಗುತ್ತಿರುವ ಪಠ್ಯಕ್ರಮ ಮತ್ತು ಸಂಸ್ಕೃತಿಯ ವಿವರಗಳನ್ನು ಹಂಚಿಕೊಳ್ಳುತ್ತಾರೆ. ಮಕ್ಕಳಿಗೆ ದೈಹಿಕವಾಗಿ ಯಾವುದೇ ಶಿಕ್ಷೆ ನೀಡಬಾರದೆಂಬುದರ ಬಗ್ಗೆ ಒತ್ತು ನೀಡುತ್ತಾರೆ.

ಸಂಸ್ಥೆಗಳ ನಡುವಿನ ಈ ಅನ್ಯೋನ್ಯ ಸಂಬಂಧ ಮಕ್ಕಳಿಗೆ ಪ್ರೇರಣೆ ನೀಡುವಲ್ಲಿ ಮತ್ತು ಯಾವುದೇ ಭಯ ಇಲ್ಲದೆ ವಾಡಿಕೆಯ ಶಾಲಾ ಶಿಕ್ಷಣ ಮುಂದುವರಿಸುವಂತೆ ಮಾಡುವಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆ. ಈ ಮಕ್ಕಳು ಹೋಗುವ ಸರ್ಕಾರಿ ಶಾಲೆಯ ಸಿಬ್ಬಂದಿ ಗಮನಿಸುವ ಬಹುಮುಖ್ಯ ಅಂಶವೇನೆಂದರೆ, ಕೇಂದ್ರದ ಸಂಪರ್ಕವನ್ನು ಹೊಂದಿರುವ ಮಕ್ಕಳು ಶಾಲೆಗೆ ಸೇರ್ಪಡೆಗೊಂಡಾಗ ಎಲ್ಲರೂ ತರಗತಿಯಲ್ಲಿ ನಿರೀಕ್ಷಿತ ಮಟ್ಟದಲ್ಲಿ ಇಲ್ಲದೇ ಇದ್ದರೂ ಕೂಡ ಹೆಚ್ಚು ಆತ್ಮವಿಶ್ವಾಸದಿಂದ ಇರುತ್ತಾರೆ ಎಂಬುದು. ಇದು ಅವರನ್ನು ಪ್ರೇರೇಪಿಸುವಲ್ಲಿ ಮತ್ತು ಕಲಿಯಲು ಉತ್ಸುಕರಾಗಿರಲು ಸಹಾಯ ಮಾಡುತ್ತದೆ.

**ಪಾಲಕರು/ಸಮುದಾಯ**

ಈ ಕೇಂದ್ರವು ದೈನಿಕ ಪರಿಪಾಠದೊಂದಿಗೆ ಮತ್ತು ಒಂದು ತಾತ್ವಿಕ ಸಿದ್ಧಾಂತದೊಂದಿಗೆ ಔಪಚಾರಿಕ ಕಲಿಕಾ ಸ್ಥಳವಾಗಿ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಪಾಲಕರ ಸಮುದಾಯದವರು ಬಹಳ ಸಮಯದ ನಂತರ ಮತ್ತು ಸತತ ಮಾತುಕತೆಯ ನಂತರ ಅರ್ಥ ಮಾಡಿಕೊಂಡಿದ್ದಾರೆ ಹಾಗೂ ಮನಗಂಡಿದ್ದಾರೆ. ಕಟ್ಟಡ ನಿರ್ಮಾಣದ ನಿವೇಶನದಲ್ಲಿ ಪಾಲಕರ ವಾಸ್ತವ್ಯ ಅನಿಶ್ಚಿತವಾಗಿರುವುದರಿಂದ ಅವರೊಂದಿಗೆ ಆಗಾಗ ಸಂಪರ್ಕದಲ್ಲಿರುವುದು ಮಕ್ಕಳು ಶಾಲಾ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸದಂತೆ ಮತ್ತು ಮುಖ್ಯವಾಹಿನಿಗೆ ಸೇರುವಂತೆ ಮಾಡಲು ನಿರ್ಣಾಯಕವಾಗಿರುತ್ತದೆ. ಶಿಕ್ಷಕರು ಪಾಲಕರೊಂದಿಗೆ ನಿರಂತರ ಸಂಪರ್ಕದಲ್ಲಿ ಇರುತ್ತಾರೆ ಮತ್ತು ಕೇಂದ್ರದಲ್ಲಿ ನಡೆಯುವ ಪ್ರಕ್ರಿಯೆಗಳನ್ನು ಅವರಿಗೆ ಮನವರಿಕೆ ಮಾಡಿಸುತ್ತಾರೆ.

ಸಮುದಾಯದ ಸದಸ್ಯರು ಕೇಂದ್ರದ ದಿನ-ನಿತ್ಯದ ಆಗುಹೋಗುಗಳಲ್ಲಿ ಭಾಗಿಯಾಗುತ್ತಾರೆ. ನಿವೇಶನದಲ್ಲಿ ಕೆಲಸ ಮಾಡದೇ ಇರುವ, ಮಕ್ಕಳನ್ನು ಹೊಂದಿರುವ ತಾಯಂದಿರು ಕೇಂದ್ರದಲ್ಲಿರುವ ಇತರ ಮಕ್ಕಳ ಬಗ್ಗೆ ನಿಗಾ ವಹಿಸಲು ಸಹಾಯ ಮಾಡುತ್ತಾರೆ. ಅವರು ಮಕ್ಕಳಿಗೆ ಊಟ-ತಿಂಡಿ ಬಡಿಸುತ್ತಾರೆ, ಕಥೆ ಹೇಳುತ್ತಾರೆ, ಹಾಡುಗಳನ್ನು ಹಾಡುತ್ತ ಸಮಯ ಕಳೆಯುತ್ತಾರೆ. ಸಮುದಾಯದ ಸದಸ್ಯರು ಇತರ ಕೆಲಸಗಳಲ್ಲಿಯೂ ಸಹಾಯಕ್ಕೆ ಬರುತ್ತಾರೆ; ಹೊಸ ಮಕ್ಕಳನ್ನು ಕೇಂದ್ರಕ್ಕೆ ಕರೆತರುವುದು, ಕಾರ್ಯಕ್ರಮಗಳಲ್ಲಿ, ಕೇಂದ್ರದ ನಿರ್ವಹಣೆಯಲ್ಲಿ, ಬಣ್ಣಬಳಿಯುವುದು ಮತ್ತು ಸ್ವಚ್ಛಗೊಳಿಸುವುದೂ ಸೇರಿದಂತೆ ಆವರಣವನ್ನು ಸುಸ್ಥಿತಿಯಲ್ಲಿ ಇರಿಸಿಕೊಂಡು ಬರುವುದಕ್ಕೆ ನೆರವಾಗುತ್ತಾರೆ. ಅವರ ಅನುಭವಗಳನ್ನು ಹಂಚಿಕೊಳ್ಳಲು, ಕೃಷಿಯ ಬಗ್ಗೆ ಮಾತನಾಡಲು ಅಥವಾ ನಿವೇಶನದಲ್ಲಿ ಅವರು ಮಾಡುವ ಕೆಲಸ, ನಿರ್ಮಾಣದಲ್ಲಿ ಬಳಸಲಾಗುವ ಸಾಮಗ್ರಿಗಳು, ಸುರಕ್ಷತಾ ಮುಂಜಾಗ್ರತೆ ಇತ್ಯಾದಿ ಬಗ್ಗೆ ಮಾತನಾಡುವಂತೆ ಅವರನ್ನು ಆಹ್ವಾನಿಸಲಾಗುತ್ತದೆ. ಪಾಲಕರು ತರಗತಿಯಲ್ಲೇ ಕುಳಿತುಕೊಂಡು ಮಕ್ಕಳ ಕಲಿಕೆಯನ್ನು ವೀಕ್ಷಿಸಲು ಕೂಡ ಉತ್ತೇಜನ ನೀಡಲಾಗುತ್ತದೆ.

ಪಾಲಕರು, ಹಳೆಯ ವಿದ್ಯಾರ್ಥಿಗಳು ಮತ್ತು ಕಟ್ಟಡ ನಿರ್ಮಾಣಕಾರರ ಪ್ರತಿನಿಧಿಗಳನ್ನು ಒಳಗೊಂಡ ಒಂದು ಸಮಿತಿಯನ್ನು ರಚಿಸಲಾಗಿದ್ದು, ಮಕ್ಕಳ ಜಾಡು ಹಿಡಿಯಲು, ಅವರು ನಿಯಮಿತವಾಗಿ ಶಾಲೆಗೆ ಹಾಜರಾಗುವಂತೆ ಮಾಡಲು, ಮಕ್ಕಳ ಶಿಕ್ಷಣದ ಬಗ್ಗೆ ಪಾಲಕರಿಗೆ ಪ್ರೇರಣೆ ನೀಡಲು, ಮಕ್ಕಳ ಸುರಕ್ಷತೆ ಮತ್ತು ಭದ್ರತೆಯನ್ನು ಕುರಿತು ಸಮುದಾಯಕ್ಕೆ ಅರಿವು ಮೂಡಿಸುವುದು ಮತ್ತಿತರ ವಿಚಾರಗಳಲ್ಲಿ ಕೇಂದ್ರದಲ್ಲಿರುವ ತಂಡಕ್ಕೆ ನೆರವಾಗುವ ಜವಾಬ್ದಾರಿ ಈ ಸಮಿತಿಯದ್ದಾಗಿದೆ. ಸಾಧ್ಯವಾದರೆ ತಮ್ಮ ಮಕ್ಕಳ ಶಿಕ್ಷಣಕ್ಕೆ ಬೇಕಾದ ಹಣವನ್ನು ಬ್ಯಾಂಕ್‌ನಲ್ಲಿ ಇಡಲೂ ಪಾಲಕರಿಗೆ ಉತ್ತೇಜನ ನೀಡಲಾಗುತ್ತದೆ.

**ಅನುಭವದಿಂದ ಕಲಿತ ಪಾಠ**

ಈ ಕಾರ್ಯಕ್ರಮದ ಕೆಲವು ಪ್ರಮುಖ ಅಂಶಗಳು ಇದನ್ನು ಸಾಧ್ಯವಾಗುವಂತೆ ಮಾಡಿವೆ. ಮೊಟ್ಟಮೊದಲ ಹಾಗೂ ಬಹುಮುಖ್ಯ ಎನ್ನಬಹುದಾದ ಪಾಠ ಏನೆಂದರೆ, ನಾವು ನೋಡುತ್ತಿರುವ ಈ ಜನಸಮುದಾಯ ತನ್ನ ದುರ್ಬಲತೆಗಳಿಂದ ಸೀಮಿತವಾಗಿದೆ. ಆ ಬಳಿಕ ನಮಗೆ ಅತ್ಯಂತ ನಿರ್ಣಾಯಕವಾಗಿ ಕಂಡುಬಂದ ಅಗತ್ಯತೆ ಏನೆಂದರೆ ಅವರಿಗೆ ಸುರಕ್ಷಿತ ಹಾಗೂ ಸಬಲೀಕರಣದ ವಾತಾವರಣವನ್ನು ನಿರ್ಮಾಣ ಮಾಡುವುದು. ಎರಡನೇ ಅತ್ಯಂತ ಪ್ರಮುಖ ಅಂಶ, ಇಂತಹ ಮಕ್ಕಳ ಜೊತೆ ಬಾಂಧವ್ಯ ಬೆಸೆಯುವ ಬಗ್ಗೆ ಮತ್ತು ಅದಕ್ಕಾಗಿ ಸೂಕ್ತವಾದ ಬೋಧನಾ ವಿಧಾನವನ್ನು ರೂಪಿಸಿಕೊಳ್ಳುವುದರಲ್ಲಿ ಶಿಕ್ಷಕರ ಪಾತ್ರ ಹೇಗಿರಬೇಕು ಎಂಬುದು ಮತ್ತು ಈ ವಿಷಯಾಭಿಮುಖವಾಗಿ ಅವರನ್ನು ಸಿದ್ಧಗೊಳಿಸುವುದು, ಮಕ್ಕಳನ್ನು ನಿಯತ ಶಾಲಾ ಶಿಕ್ಷಣಕ್ಕೆ ಯಶಸ್ವಿಯಾಗಿ ವರ್ಗಾಯಿಸುವುದರಲ್ಲಿ ಶಿಕ್ಷಕರ ಪಾತ್ರ ನಿರ್ಣಾಯಕವಾದುದು. ಈ ಅಂಶಕ್ಕೆ ಹೆಚ್ಚು ಒತ್ತು ನೀಡಬೇಕು ಹಾಗೂ ಅದನ್ನು ಇನ್ನಷ್ಟು ಬಲ ಪಡಿಸಬೇಕು.

ಇಂಥ ಸನ್ನಿವೇಶದಲ್ಲಿ ವಿಧಾನ ಮತ್ತು ಬೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಪಠ್ಯಕ್ರಮದ ಪಾತ್ರವು ಬಹುಮುಖ್ಯವಾಗಿ ಹೊರಹೊಮ್ಮಿದರೂ ಮೇಲಿನ ಎರಡು ಅಂಶಗಳ ಯಶಸ್ವೀ ಅನುಷ್ಠಾನವಾದಾಗ ಮಾತ್ರ ಇದು ಸಫಲವಾಗುತ್ತದೆ.

ಅಂತಿಮವಾಗಿ ಪಾಲಕರ ಸಮುದಾಯವನ್ನು ಇವರು ಸಾಮರ್ಥ್ಯ ವರ್ಧನೆಯನ್ನು ಸೀಮಿತಗೊಳಿಸುತ್ತಾರೆ ಎಂದು ನೋಡುವ ಬದಲು ಸಬಲೀಕರಣ ಮಾಡಬಲ್ಲ ಒಂದು ಅಂಶವೆಂಬುದಾಗಿ ನೋಡಬಹುದಾಗಿದೆ. ತಮ್ಮ ಮಕ್ಕಳನ್ನು ಮುಖ್ಯವಾಹಿನಿಯ ಶಾಲಾಶಿಕ್ಷಣಕ್ಕೆ ಮತ್ತೆ ಸೇರಿಸುವಲ್ಲಿ ಅವರು ವಹಿಸಬೇಕಾದ ಪಾತ್ರಕ್ಕೆ ಯಾವ ಬೆಂಬಲ ನೀಡಬೇಕೆಂಬ ವಿಚಾರದ ಬಗ್ಗೆ ಗಮನಹರಿಸಬೇಕಾಗಿದೆ.



**ಶೋಭಾ ಎಲ್. ಕವೂರಿ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಬೆಂಗಳೂರು ಜಿಲ್ಲಾ ಸಂಸ್ಥೆಯ ಸದಸ್ಯರು. ಶಿಕ್ಷಕಿಯಾಗಿರುವ ಶೋಭಾ ಅವರು ರಾಜಸ್ಥಾನದಲ್ಲಿ ಶೈಕ್ಷಣಿಕ ಮತ್ತು ಅಭಿವೃದ್ಧಿ ಉಪಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಮೊಟ್ಟ ಮೊದಲ ಆರು ಅಜೀಂ ಪ್ರೇಮ್‌ಜಿ ಶಾಲೆಗಳನ್ನು ಸ್ಥಾಪಿಸಲು ಕಾರಣವಾದ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಶಾಲಾ ತಂಡದ ಒಂದು ಭಾಗವಾಗಿದ್ದರು. ಅವರು ಈ ಶಾಲೆಗಳಲ್ಲಿ ಪಠ್ಯಕ್ರಮ ಅಭಿವೃದ್ಧಿ, ಶಿಕ್ಷಕರ ವೃತ್ತೀಯ ಅಭಿವೃದ್ಧಿ ಮತ್ತು ಭಾಷಾ ಅಭಿವೃದ್ಧಿಯ ಕ್ಷೇತ್ರಗಳಲ್ಲಿ ವಿಸ್ತೃತವಾಗಿ ಕೆಲಸ ಮಾಡಿದ್ದಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದಾಗಿದೆ shobha.kavoori@azimpremjifoundation.org



**ಶುಭಾ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸದಸ್ಯರು. ಪ್ರಸ್ತುತ ಬೆಂಗಳೂರಿನಲ್ಲಿ ವಲಸೆ ಕಾರ್ಮಿಕರ ಮಕ್ಕಳ ಸೇತು ಶಿಕ್ಷಣ ಕೇಂದ್ರದ ನಿರ್ವಹಣೆಯನ್ನು ನೋಡಿಕೊಳ್ಳುತ್ತಿರುವ ಅವರು, ಬೆಂಗಳೂರು ಜಿಲ್ಲಾ ಸಂಸ್ಥೆಯಲ್ಲಿ ಚಿಕ್ಕ ಮಕ್ಕಳ ಶಿಕ್ಷಣದ ಉಪಕ್ರಮಕ್ಕೆ ಸಂಬಂಧಿಸಿದ ಸಮನ್ವಯ ಕೆಲಸದಲ್ಲಿಯೂ ನಿರತರಾಗಿದ್ದಾರೆ. ಶಾಲಾಪೂರ್ವ ಪಠ್ಯಕ್ರಮ ಮತ್ತು ಶಿಕ್ಷಕರ ಸಾಮರ್ಥ್ಯ ವರ್ಧನೆ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಶಿಕ್ಷಣ ಇಲಾಖೆ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಜೊತೆಗೂ ಶ್ರದ್ಧೆಯಿಂದ ತೊಡಗಿಸಿಕೊಂಡಿದ್ದಾರೆ. ಮೊಟ್ಟ ಮೊದಲ ಆರು ಅಜೀಂ ಪ್ರೇಮ್‌ಜಿ ಶಾಲೆಗಳನ್ನು ಸ್ಥಾಪಿಸಿದ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಶಾಲಾ ತಂಡದ ಭಾಗವಾಗಿ ಅವರು ಕೆಲಸ ಮಾಡಿದ್ದರು. ಪಠ್ಯಕ್ರಮ ಅಭಿವೃದ್ಧಿ ಮತ್ತು ಶಿಕ್ಷಕರ ವೃತ್ತೀಯ ಅಭಿವೃದ್ಧಿಯ ಕ್ಷೇತ್ರಗಳಲ್ಲಿಯೂ ಅವರು ಬಹಳ ಕೆಲಸ ಮಾಡಿದ್ದಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದು: shubha@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ಅನಾಸಕ್ತ ವಿದ್ಯಾರ್ಥಿಯ ಮೇಲೆ ಕಥೆಯ ಪರಿಣಾಮ

ಸೋನಿಯಾ ಖುದಾನ್‌ಪುರ್

ರುದ್ರಪ್ರಯಾಗದ ಸರ್ಕಾರಿ ಶಾಲೆಗಳಿಗೆ ಭೇಟಿ ನೀಡುವಾಗ, ಆರಂಭಿಕ ದಿನಗಳಲ್ಲಿ, ಅದುವರೆಗೂ ನಾವು ಚರ್ಚಿಸಿದ್ದ, ಓದಿದ್ದ ಭಾಷಾ ಬೋಧನಾ ವಿಧಾನಗಳನ್ನೇ ಪ್ರಯೋಗ ಮಾಡುತ್ತಿದ್ದೆ. ಇವುಗಳ ಪೈಕಿ, ಕತೆ ಹೇಳುವುದು ಯಶಸ್ವಿ ವಿಧಾನ. ಮಕ್ಕಳಿಗೆ ಕತೆ ಹೇಳುವುದರಿಂದ – ಅವರ ಗಮನ ಸೆಳೆಯುವ, ಪುಸ್ತಕಗಳ ಬಗ್ಗೆ ಒಲವು ಮೂಡಿಸುವ, ಮಾತು ಮತ್ತು ಬರವಣಿಗೆಯ ರೂಪದಲ್ಲಿ ತಮ್ಮ ಆಶಯಗಳನ್ನು ವ್ಯಕ್ತಪಡಿಸಲು ಪ್ರೇರೇಪಿಸುವ ನಿಟ್ಟಿನಲ್ಲಿ ಚಿಕ್ಕದಾದರೂ ನಿರಂತರವಾದ ಧನಾತ್ಮಕ ಫಲಿತಾಂಶವನ್ನು ನಾನು ಗಮನಿಸಿದ್ದೆ.

ನಾನೇನೂ ಕತೆ ಹೇಳುವುದರಲ್ಲಿ ಪ್ರವೀಣೆಯಲ್ಲ. ಹಾಗಾಗಿ, ನಾನೇ ಮೊದಲು ಕತೆಗಳನ್ನು ಓದಿ, ಮನನ ಮಾಡಿಕೊಂಡು ಮಕ್ಕಳಿಗೆ ಹೇಳುವುದು ಮತ್ತು ಅವರನ್ನು ಹೊಸ ಕತೆ ಪುಸ್ತಕಗಳತ್ತ ಸೆಳೆಯುವುದೆಂದು ತೀರ್ಮಾನಿಸಿದೆ. ಕೆಲವು ತಿಂಗಳು ನಾನಿದ್ದ ಶಾಲೆಯೊಂದರಲ್ಲಿ, ದಿನಾಲೂ ಒಂದಷ್ಟು ಕತೆ ಪುಸ್ತಕಗಳನ್ನು ತೆಗೆದುಕೊಂಡು ಹೋಗುತ್ತಿದ್ದೆ. ಮತ್ತು ಒಂದೋ ಅಥವಾ ಎರಡು ಕತೆಗಳನ್ನು ಓದಿ ಮನನ ಮಾಡಿಕೊಂಡು ಅದನ್ನು ನನ್ನದೇ ಶೈಲಿಯಲ್ಲಿ ಮಕ್ಕಳಿಗೆ ಹೇಳುತ್ತಿದ್ದೆ. ಆ ಶಾಲೆಯಲ್ಲಿ ನಾನು ಕಳೆದ ಸಮಯವು ಮಕ್ಕಳಸ್ನೇಹಿಯಾಗಿ ಮತ್ತು ಕತೆ ಹೇಳುವುದರ ಪರಿಣಾಮವನ್ನು ಗಮನಿಸಲು ಸಾಕಷ್ಟು ನೆರವಾಯಿತು.

ಆರಂಭದ ದಿನಗಳು ಸಾಕಷ್ಟು ಉತ್ತೇಜಕವಾಗಿದ್ದವು. ನಾನು ಏನು ತಂದಿದ್ದೇನೆ ಎಂದು ತಿಳಿದುಕೊಳ್ಳುವ ಕುತೂಹಲ ಮಕ್ಕಳಲ್ಲಿ ಕಂಡುಬಂದಿತು. ತರಗತಿಯ ಮಧ್ಯೆ, ತಮಗೆ ಪುಸ್ತಕ ಕೊಡುವಂತೆ ಕೇಳುತ್ತಿದ್ದರು ಅಥವಾ ನನ್ನ ಬಳಿ ನಿಂತು ಪುಸ್ತಕದ ಮೇಲೆ ಕಣ್ಣಾಡಿಸುತ್ತಿದ್ದರು. ನಾನು ಯಾವ ಹೊಸ ಪುಸ್ತಕ ತಂದಿದ್ದೇನೆ ಎಂಬುದು ಅವರ ನಿತ್ಯದ ಕುತೂಹಲವಾಗಿರುತ್ತಿತ್ತು, ಅವರ ಆಸಕ್ತಿಗೆ ತಕ್ಕಂತೆ ನಾನು ಕತೆ ಹೇಳುತ್ತಿದ್ದೆ, ಇಲ್ಲವೇ ಓದುತ್ತಿದ್ದೆ.

ಬಿಡುವಾದಾಗಲೆಲ್ಲ ಮಕ್ಕಳಿಗೆ ನಾನು ಇಂಥಾ ಕತೆ ಪುಸ್ತಕಗಳ್ನು ಕೊಡುತ್ತಿದ್ದೆ. ಮೊದಮೊದಲು ಮಕ್ಕಳು ಕತೆ ಪುಸ್ತಕದ ಆಚೀಚೆ ತಿರುಗಿ ನೋಡಿ, ಪುಟಗಳನ್ನು ತಿರುವಿ, ಚಿತ್ರಗಳನ್ನು ನೋಡಿ ತಕ್ಷಣ ವಾಪಾಸು ಕೊಟ್ಟುಬಿಡುತ್ತಿದ್ದರು. ಕೆಲವರಷ್ಟೇ ಓದುವ ಪ್ರಯತ್ನ ಮಾಡುತ್ತಿದ್ದರು. ಅದು ಚೆನ್ನಾಗಿದೆ ಎಂದು ಭಾವಿಸಿದರೆ ತಕ್ಷಣ ಪುಸ್ತಕದ ಶೀರ್ಷಿಕೆಯನ್ನಾದರೂ ಓದತೊಡಗುತ್ತಿದ್ದರು. ಇನ್ನು ಕೆಲವರು, ಪುಸ್ತಕ ಚೆನ್ನಾಗಿಲ್ಲ ಎಂದುಕೊಂಡರೆ –ಚಿತ್ರಗಳನ್ನಷ್ಟೇ ನೋಡಿ ಪುಟಗಳನ್ನು ತಿರುವಿ ಹಾಕಿ, ಒಮ್ಮೊಮ್ಮೆ "ನಾನು ಓದಲಾರೆ' ಎಂದು ಹೇಳಿ, ವಾಪಾಸು ಕೊಡುತ್ತಿದ್ದರು. ಅಕ್ಷರಮಾಲೆ, ಅಕ್ಷರಗಳ ಧ್ವನಿ, ಶಾಲಾ ಜೀವನದ ನಿತ್ಯ ಚಟುವಟಿಕೆಯಂತೆ ಓದು ಮತ್ತು ಬರಹವನ್ನು ತಿಳಿದುಕೊಂಡ ಹೊರತಾಗಿಯೂ ಈ ಮಾತನ್ನು ಅವರು ಹೇಳುತ್ತಿದ್ದರು. ಅವರನ್ನು ಉತ್ತೇಜಿಸಿದ್ದು ಆರಂಭದಲ್ಲಿ ಸ್ವಲ್ಪ ಪರಿಣಾಮ ಬೀರಿತು. ಆದರೆ ಕೆಲವು ವಾರ ಕಳೆಯುತ್ತಿದ್ದಂತೆ ಏನಾಯಿತೆಂದರೆ, ಆತ್ಮವಿಶ್ವಾಸ ಇಲ್ಲದ ವಿದ್ಯಾರ್ಥಿಗಳೂ ಇನ್ನಷ್ಟು ಕತೆಗಳನ್ನು ಕೇಳತೊಡಗಿದರು.

ಎರಡನೇ ತರಗತಿಯ ಅಮಾನ್‌ನನ್ನು ತಂಟೆಕೋರ ಮತ್ತು ಕಲಿಕೆಯಲ್ಲಿ ಆಸಕ್ತಿ ಇಲ್ಲದ ಹುಡುಗನೆಂದೇ ಪರಿಗಣಿಸಲಾಗಿತ್ತು. ಅವನು ಕರಿಹಲಗೆಯಿಂದ ಅಥವಾ ಸಹಪಾಠಿಗಳ ಪುಸ್ತಕದಿಂದ ಕೇವಲ ನಕಲು ಮಾಡಬಲ್ಲ ಎಂದೇ ಅವನ ಶಿಕ್ಷಕಿ ತೀರ್ಮಾನಿಸಿಬಿಟ್ಟಿದ್ದರು. ಅವನು ಮನೆಗೆಲಸ ಮಾಡಿದ್ದೇ ಅಪರೂಪ. ತರಗತಿಯಲ್ಲಿ ಆಸಕ್ತಿಯಿಂದ ಇದ್ದುದೇ ಇಲ್ಲ. ಒಂದೋ ಅವನು ಚಡಪಡಿಸುತ್ತಿದ್ದ ಇಲ್ಲವೇ ತಂಟೆ ಮಾಡಿಕೊಂಡಿರುತ್ತಿದ್ದ. ನಾನು ಶಾಲೆಗೆ ತೆಗೆದುಕೊಂಡು ಹೋಗುತ್ತಿದ್ದ ಪುಸ್ತಕಗಳತ್ತ ಕಣ್ಣುಹಾಯಿಸಲೂ ಅವನು ಆಸಕ್ತಿ ತೋರಿಸುತ್ತಿರಲಿಲ್ಲ. ಬೇರೆ ವಿದ್ಯಾರ್ಥಿ ಓದುತ್ತಿದ್ದರೆ ಅವನತ್ತ ಇಣುಕಿ ನೋಡುತ್ತಿದ್ದ, ಇಲ್ಲವೇ ಏನಾದರೂ ಹಾಸ್ಯ ಮಾಡಿ ತನ್ನ ಜಾಗಕ್ಕೆ ಮರಳುತ್ತಿದ್ದ. ಅವನ ಪಾಡಿಗೆ ಓದುವಂತೆ ಮಾಡಿದ ಎಲ್ಲಾ ಪ್ರಯತ್ನಗಳೂ ವಿಫಲವಾಗಿದ್ದವು. ನಾನು ಕತೆ ಹೇಳುವಾಗಲೂ ಕುಳಿತು ಕೇಳಿಸಿಕೊಳ್ಳುವ ತಾಳ್ಮೆ ಅವನಿಗೆ ಇರಲಿಲ್ಲ. ಅಲ್ಲಿ ಇಲ್ಲಿ ಓಡಾಡಲು, ಆಟವಾಡಲು ಅಥವಾ ಬೇರೆಯವರೊಂದಿಗೆ ಜಗಳವಾಡಲು ಬಯಸುತ್ತಿದ್ದ.

ಆದರೆ ಕತೆಯೊಳಗೆ ಏನೋ ಅವನನ್ನು ಸೆಳೆಯುತ್ತಿತ್ತು. ಆರಂಭದ ಕತೆ ಹೇಳುವ ಅವಧಿಯಲ್ಲಿ, ಅಮಾನ್ ನನ್ನ ಪಕ್ಕದಲ್ಲೇ ನಿಂತು–ಕೊಂಡು ಕೆಲವು ನಿಮಿಷ ಕೇಳಿಸಿಕೊಂಡು ನಾನು ಹೇಳಿದ ಧಾಟಿಯಲ್ಲೇ ಒಂದು ಸಾಲು ಹೇಳಿ ಗುಂಪಿನಿಂದ ದೂರವಾಗುತ್ತಿದ್ದ. ಸಾಕಷ್ಟು ಬಾರಿ ಅವನು ಹೀಗೆಯೇ ಮಾಡಿದ. ಆಮೇಲೆ ಅದು ಕಡಿಮೆಯಾಯಿತು. ನಾನು ಹೇಳುವ ಕತೆಯಲ್ಲಿನ ಆಸಕ್ತಿಯ ಅಂಶವನ್ನೋ ಸಾಲನ್ನೋ ತಾನೇ ಹೇಳುತ್ತಿದ್ದುದಷ್ಟೇ ಅಲ್ಲ ಮುಂದುವರಿಸಿ ಎನ್ನುವಂತೆ, 'ಫಿರ್?' (ಆಮೇಲೆ), 'ಫಿರ್ ಸೆ', 'ಫಿರ್ ಸೆ' (ಮತ್ತೊಮ್ಮೆ) ಎಂದು ಹೇಳುತ್ತಿದ್ದ. ಅದೇ ಕತೆಯನ್ನು ಮತ್ತೆ ಹೇಳಬೇಕು ಅಥವಾ ನಾನು ಹೊಸ ಕತೆ ಹೇಳಲಿ ಎಂದು ಆತ ಬಯಸುತ್ತಿದ್ದ.

ಈ ಬದಲಾವಣೆ ಉತ್ತೇಜಕರವಾಗಿತ್ತು. ಒಮ್ಮೆ, 'ನಿನಗೋಸ್ಕರ ನಾನೊಂದು ಕತೆ ಓದಲೇ' ಎಂದು ಅವನನ್ನು ಕೇಳಿದೆ. ತಕ್ಷಣ 'ಸರಿ' ಎಂದು ಉತ್ತರಿಸಿದ. 'ನನಗೆ ಓದಲು ಕಪಾಟಿನಿಂದ ನೀನೇ ಕೆಲವು ಕತೆ ಪುಸ್ತಕಗಳನ್ನು ಆರಿಸಿ ತರುವೆಯಾ? ಇವುಗಳ ಪೈಕಿ ನಾನು ಯಾವುದನ್ನು ಓದಲಿ?' ಎಂದೆ.

ಒಮ್ಮೆ ಅಮಾನ್, 'ರಫ್ತಾರ್ ಖಾನ್ ಕಾ ಸ್ಕೂಟರ್' ಓದುವಂತೆ ಕೇಳಿದ. ಆದರೆ ನಾನು ಅದನ್ನು ಮುಂಚೆ ಓದಿಲ್ಲವಾದ ಕಾರಣ ಸ್ವಲ್ಪ ಗಲಿಬಿಲಿಗೊಂಡಿದ್ದೆ. ಹಾಗಾಗಿ ನಾನು ಬೆರಳುಗಳ ನೆರವಿನಿಂದ ಪದಗಳನ್ನು ನೆನಪಿಟ್ಟುಕೊಂಡೆ ಮತ್ತು ಧ್ವನಿಯನ್ನು ಏರಿಳಿತ ಮಾಡಿಕೊಂಡು, ಹಾವಭಾವದ ಮೂಲಕ ಕತೆ ಹೇಳಿದೆ. ಇಷ್ಟವಾದ ಒಂದು ಸಾಲನ್ನು ಆತ ಮಂದ ಸ್ವರದಲ್ಲಿ ಹೇಳುತ್ತಿದ್ದ. ನಾನು ಹೇಳಿದ ತಕ್ಷಣ ಒಮ್ಮೆ ಹೇಳಿದರೆ ಮತ್ತೊಮ್ಮೆ ನನ್ನ ಜೊತೆಗೇ ಹೇಳುತ್ತಿದ್ದ.

ಅವನು ಸಾಲುಗಳ ಮೇಲೆ ಗಮನವಿರಿಸಿದ್ದ. ಅಕಸ್ಮಾತ್ ನಾನು ಯಾವುದಾದರೂ ಪದ ಅಥವಾ ಪುಟವನ್ನು ಮರೆತರೆ ಅವನೇ ನನಗೆ ನೆನಪಿಸುತ್ತಿದ್ದ. ಅವನ ಈ ಪಾಲ್ಗೊಳ್ಳುವಿಕೆಯಿಂದ ನಾನು ಪುಳಕಿತಳಾಗಿದ್ದೆ.

ಇದಾದ ಬಳಿಕ, ಮಕ್ಕಳಿಗೆ ಕತೆ ಪುಸ್ತಕವನ್ನು ನೋಡಲು, ಮುಟ್ಟಲು ಸಾಧ್ಯವಾಗುವಂತೆ ನಾನೂ ಅವರಷ್ಟೇ ಎತ್ತರದಲ್ಲ ಕುಳಿತು–ಕೊಳ್ಳತೊಡಗಿದೆ. ನಾನು ಈ ಕತೆಯನ್ನು ಏನಿಲ್ಲವೆಂದರೂ ಆರೇಳು ಬಾರಿ ಓದುವಂತೆ ಅಮಾನ್ ಮಾಡಿದ. ಅವನಿಗೆ ಹೆಚ್ಚಿನ ಸಾಲುಗಳು ಬಾಯಿಪಾಠವಾಗಿತ್ತು. ಅವನು ಇನ್ನಷ್ಟು ಪುಸ್ತಕಗಳನ್ನು ಆಯ್ಕೆ ಮಾಡಲು ಶುರುಮಾಡಿದ, ಅಷ್ಟೇ ಅಲ್ಲದೆ ಅವನಿಗೆ ಯಾವ ಬಗೆಯ ಕತೆ ಹೇಳಬೇಕು ಎಂದು ನನ್ನಲ್ಲಿ ಹೇಳಕೊಳ್ಳತೊಡಗಿದ.

ಒಂದು ಕತೆ ಓದಿದ ತಕ್ಷಣ, ಅವನಿಗೆ ಓದಲು ನೆರವಾಗಲೆಂಬ ಉದ್ದೇಶದಿಂದ, 'ನಾವು ಈ ಕತೆಯನ್ನು ಪುಸ್ತಕದಲ್ಲ ಬರೆಯೋಣವೇ?' ಎಂದು ಮಕ್ಕಳನ್ನು ಕೇಳುತ್ತಿದ್ದೆ. ಅವರೆಲ್ಲರೂ ಒಕ್ಕೊರಲಿನಿಂದ ಒಪ್ಪಿದರು. ನಾನು ಬೋರ್ಡಿನಲ್ಲಿ ಬರೆಯ–ತೊಡಗಿದೆ. ಆಗ ಒಬ್ಬ ವಿದ್ಯಾರ್ಥಿನಿ, ಬೋರ್ಡಿನಲ್ಲಿ ನಾನು ಬರೆಯಲೇ ಎಂದು ಕೇಳಿದಳು. ನಂತರ ಅಮಾನ್ ಕೂಡಾ ಬರೆಯುವುದಾಗಿ ಹೇಳಿದ. ನಾನು ಇಬ್ಬರಿಗೂ ಒಪ್ಪಿಗೆ ನೀಡಿದೆ. ಈಗ, ಅಮಾನ್ ಒಂದು ಕೈಯಲ್ಲಿ ಚಾಕ್‌ಪೀಸ್ ಹಾಗೂ ಇನ್ನೊಂದು ಕೈಯಲ್ಲಿ ಪುಸ್ತಕ ಹಿಡಿದು ಸ್ಫುಟವಾಗಿ ಬರೆಯತೊಡಗಿದ. ಸ್ಪಷ್ಟವಾಗಿ ಬರೆದು, ಏನು ಬರೆದಿದ್ದಾನೆ ಎಂದು ತನ್ನ ಸಹಪಾಠಿಗಳಿಗೆ ಓದಿಹೇಳುತ್ತಿದ್ದ.

ಇದಾದ ಬಳಿಕ, ಅಮಾನ್ ಓದಲು ಮತ್ತು ಬರೆಯಲು ತೋರಿದ ಆಸಕ್ತಿ ಬಗ್ಗೆ ಅವನ ಶಿಕ್ಷಕಿಯ ಜೊತೆಗೆ ಮಾತನಾಡಿದೆ. ಆದರೆ ಆಕೆಯ ಮೇಲೆ ಅದು ಪರಿಣಾಮ ಬೀರಿದಂತೆ ತೋರಲಿಲ್ಲ. ಪಾಠದ ಮೇಲೆ ತಾನು ಕೇಳುವ ಪ್ರಶ್ನೆಗೆ ಅವನು ಏನು ಉತ್ತರ ಕೊಡುತ್ತಾನೆ ಮತ್ತು ಪರೀಕ್ಷೆಯಲ್ಲಿ ಎಷ್ಟು ಅಂಕ ಪಡೆಯುತ್ತಾನೆ ಎಂಬ ಸಿದ್ಧಮಾದರಿಯ ಮೇಲಷ್ಟೇ ಆಕೆ ಅವನನ್ನು ಅಳೆಯುತ್ತಿದ್ದರು. ಅಮಾನ್ ಅದನ್ನೆಲ್ಲ ಮಾಡುತ್ತಿರಲಿಲ್ಲ. ಆದರೆ, ಆಸಕ್ತಿ ಇದ್ದಾಗಲೆಲ್ಲ ಅಮಾನ್ ತನ್ನ ಕೆಲಸಗಳನ್ನು ಚೆನ್ನಾಗಿ ಮಾಡಿರುವುದಾಗಿ ಆ ಶಿಕ್ಷಕಿ ಹೇಳಿದರು. ಮುಂದೊಂದು ದಿನ ಭೇಟಿಯಾದಾಗ, ಅಮಾನ್ ಓದಿನಲ್ಲಿ ಸುಧಾರಿಸಿರುವುದಾಗಿ ತಿಳಿಸಿದರು. ಅದರಿಂದ, ಅಮಾನ್‌ನನ್ನು ಆಕೆ ಬೇರೆಯೇ ದೃಷ್ಟಿಕೋನದಿಂದ ನೋಡುತ್ತಿದ್ದಾರೆ ಎಂದು ತೋರಿತು. ಅಂದರೆ, ಒಂದು ರೀತಿಯ ಸಹಾನುಭೂತಿ ಮತ್ತು ಅವನು ಇನ್ನೂ ಚೆನ್ನಾಗಿ ಮಾಡಬಲ್ಲ ಎಂಬ ವಿಶ್ವಾಸ ಕಾಣಿಸಿತು. ಅವನಿಗೆ ಓದಲು ಮತ್ತು ಬರೆಯುವುದನ್ನು ಕಲಿಸಲು ತಾನು ತಿಂಗಳುಗಟ್ಟಲೆ ಪ್ರಯತ್ನಿಸಿದ್ದಾಗಿ ಆ ಶಿಕ್ಷಕಿ ಹೇಳಿದರು. ಅವನು ಪ್ರಗತಿ ಸಾಧಿಸುತ್ತಾನೆ ಎಂಬ ನಿರೀಕ್ಷೆಯೊಂದಿಗೆ ಅವನಿಗೆ ಅಕ್ಷರ, ಶಬ್ದ ಮತ್ತು ವಾಕ್ಯಗಳನ್ನು ಬರೆಸಲು ಲೆಕ್ಕವಿಲ್ಲದಷ್ಟು ಬಾರಿ ಯತ್ನಿಸಿದ್ದರಂತೆ. ಅವನಲ್ಲೂ ಅಲ್ಪಸ್ವಲ್ಪ ಪ್ರಗತಿ ಕಾಣುತ್ತಿದೆ ಎಂದುಕೊಳ್ಳುವಷ್ಟರಲ್ಲಿ ಮತ್ತೆ ಎಲ್ಲಿದ್ದನೋ ಅಲ್ಲೇ ಉಳಿಯುತ್ತಿದ್ದನಂತೆ.

ಒಬ್ಬ ವಿದ್ಯಾರ್ಥಿಯ ಸಾಮರ್ಥ್ಯವು, ಅವನ ಬಗ್ಗೆ ಶಿಕ್ಷಕರು ಏನು ತೀರ್ಮಾನಿಸುತ್ತಾರೋ ಹಾಗೇ ನಿರ್ಧಾರವಾಗುತ್ತದೆ ಎಂಬ ಅಂಶ ಸರ್ಕಾರಿ ಶಾಲೆಯ ತರಗತಿಗಳಲ್ಲಿ ನಾನು ಕಳೆದ ಅಲ್ಪಾವಧಿಯಲ್ಲಿ ಸ್ಪಷ್ಟವಾಯಿತು. ಒಂದು ವೇಳೆ ನನ್ನ ಶಿಕ್ಷಕರು ನಾನು ತಂಟೆಕೋರ, ಗಮನ ಕೊಡದೆ ಅಲಕ್ಷಿಸುವ ಮಗು ಎಂದು ಭಾವಿಸಿದರೆ ಅಥವಾ ಅಚ್ಚುಕಟ್ಟಾಗಿ ನನ್ನ ಕೆಲಸ ಮಾಡುವವಳು ಎಂದು ತೀರ್ಮಾನಿಸಿದರೆ ನಾನು ಅದೇ ಆಗಿರುತ್ತೇನೆ. ಪ್ರತಿ ತರಗತಿಯಲ್ಲೂ, ವಿದ್ಯಾರ್ಥಿಗಳ ಮೇಲಿನ ಆರಂಭಿಕ ಅಭಿಪ್ರಾಯಕ್ಕೆ ತಕ್ಕಂತೆ ಶಿಕ್ಷಕರು ಅವರನ್ನು ವರ್ಗೀಕರಿಸುತ್ತಿದ್ದರು. ಅಲ್ಲಿಯೂ ಒಳ್ಳೆಯವರು, ಸಾಮರ್ಥ್ಯವುಳ್ಳವರು ಮತ್ತು ಯಾವುದೇ ನೆರವಿನ ಅಗತ್ಯವಿಲ್ಲದವರು ಇದ್ದಾರೆ. ಅಮಾನ್, ದುರದೃಷ್ಟವಶಾತ್ ಕೊನೆಯ ವರ್ಗಕ್ಕೆ ಸೇರಿದ್ದ. ಆದರೆ ಕಥೆ ಹೇಳುವುದು ಆ ನಂಬಿಕೆಯನ್ನು ಮುರಿಯಲು ನೆರವಾಗಿತ್ತು. ಅಮಾನ್, ಕತೆ ಕೇಳುವ ಮೂಲಕ ಪುಸ್ತಕದತ್ತ ಕಣ್ಣು ಹಾಯಿಸಲು, ಹೆಚ್ಚು ಹೆಚ್ಚು ಕತೆಗಳನ್ನು ಕೇಳುತ್ತಲೇ ಅವುಗಳನ್ನು ತಾನೇ ಹೇಳಲು, ಪಾತ್ರಗಳು ಮತ್ತು ಸಂಭಾಷಣೆಗಳ ಬಗ್ಗೆ ಮಾತನಾಡಲು ಮತ್ತು ತನ್ನ ಪಾಡಿಗೆ ಓದಲೂ ಶಕ್ತನಾಗಿದ್ದ.

ಎಲ್ಲಾ ಮಕ್ಕಳು ಕಲಿಯಬಲ್ಲರು ಎಂಬುದು ಈ ಅನುಭವದಿಂದ ಸಾಬೀತಾಯಿತು. ಪ್ರತಿಯೊಬ್ಬ ಮಗುವಿಗೂ ವೈಯಕ್ತಿಕ ಗಮನ ನೀಡಿದರೆ ಅವನು ಅಥವಾ ಅವಳೂ ಕಲಿಯಬಲ್ಲರು ಎಂಬುದನ್ನು ಅಮಾನ್ ತೋರಿಸಿಕೊಟ್ಟ. ಪ್ರತಿಯೊಬ್ಬರಿಗೂ ತಾನು ಚೆನ್ನಾಗಿ ಮಾಡಬೇಕು ಎಂಬ ಇಚ್ಛೆಯಿರುತ್ತದೆ. ಅವರೆಲ್ಲರಿಗೂ ನಮ್ಮ ಪ್ರೋತ್ಸಾಹದ ಅಗತ್ಯವಿದೆ ಮತ್ತು ನಾವು ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಬೇಕಾಗಿದೆ. ಖಂಡಿತವಾಗಿಯೂ, ತರಗತಿಗಳಲ್ಲಿ, ಶಿಕ್ಷಕರಿಂದಲೂ ನಮ್ಮ ದಿನನಿತ್ಯದ ಅನುಭವದಿಂದಲೂ ಕತೆ ಹೇಳುವ ಖಚಿತ ಮಾರ್ಗದ ಮೂಲಕ ಇದನ್ನು ಸಾಧಿಸಬಹುದಾಗಿದೆ. ಕತೆ ಹೇಳುವುದು ಮತ್ತು ಓದುವುದು ಅಥವಾ ಅಧ್ಯಾಪಕರು ಪ್ರತಿದಿನದ ಅನುಭವದ ಕತೆಗಳನ್ನು ಹೇಳುವುದು, ಮಕ್ಕಳಿಗೆ ಅವರ ಇಷ್ಟದ ಕತೆ ಪುಸ್ತಕಗಳನ್ನು ಆರಿಸಿಕೊಳ್ಳಲು ಬಿಡುವುದು – ಈ ಮೂಲಕ ಅಧ್ಯಾಪಕರು ಮಕ್ಕಳಿಗೆ ಹತ್ತಿರವಾಗುವ ಅವಕಾಶವನ್ನು ತಮ್ಮದಾಗಿಸಿಕೊಳ್ಳಬಹುದು. ಸೂಕ್ತ ಸಂವಾದಕ್ಕೆ, ಪ್ರಶ್ನೆಗಳಿಗೆ, ಸಂಶಯ ವ್ಯಕ್ತಪಡಿಸಿಕೊಳ್ಳಲು, ಹೆದರಿಕೆ ಮತ್ತಿತರ ಭಾವನೆಗಳಿಗೆ ಹಾಗೂ ಕಲ್ಪನಾ ಸಾಮರ್ಥ್ಯ ಹೆಚ್ಚಿಸಿಕೊಳ್ಳುವುದಕ್ಕೆ ಕತೆಗಳು ಅವಕಾಶ ಕಲ್ಪಿಸುತ್ತವೆ.



**ಸೋನಿಯಾ ಖುದಾನ್‌ಪುರ್** ಉತ್ತರಾಖಂಡದ ರುದ್ರಪ್ರಯಾಗದವರು. ಅವರು 2018ರಿಂದಲೂ ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಇಂಗ್ಲಿಷ್ ಭಾಷಾ ತಂಡದ ಭಾಗವಾಗಿದ್ದಾರೆ. ಪ್ರತಿಷ್ಠಾನಕ್ಕೆ ಸೇರುವುದಕ್ಕೂ ಮೊದಲು ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿ ಗಳಿಸಿದ್ದರು. ಪತ್ರಿಕೋದ್ಯಮದಲ್ಲಿಯೂ ಸ್ನಾತಕೋತ್ತರ ಡಿಪ್ಲೊಮಾ ಪಡೆದಿದ್ದು, ಮಾಧ್ಯಮದಲ್ಲಿ ಮೂರು ವರ್ಷ ಸೇವೆಯನ್ನೂ ಸಲ್ಲಿಸಿದ್ದಾರೆ. ಅವರು ಪ್ರತಿಷ್ಠಾನದ ಮೂಲಕ ಸರ್ಕಾರಿ ಶಾಲೆಗಳಲ್ಲಿ ಕತೆ ಹೇಳುವ ಮೂಲಕ ಮಕ್ಕಳೊಂದಿಗೆ ಸಂವಾದ ಏರ್ಪಡಿಸುತ್ತಲೇ ಬೋಧನೆ– ಕಲಿಕೆಯನ್ನು ಸಾಧಿಸುವುದು, ಶಿಕ್ಷಕರೊಂದಿಗೆ ಕೆಲಸ ಮಾಡುವುದು ಮತ್ತು ಅವರಿಗೆ ಭಾಷಾ ಕಲಿಕೆ ಸಂಬಂಧ ಕಾರ್ಯಾಗಾರ ಹಾಗೂ ಗೋಷ್ಠಿಗಳನ್ನು ಆಯೋಜಿಸುತ್ತಾರೆ. 2018ರಿಂದ ಈವರೆಗೆ ಅವರು 25ಕ್ಕೂ ಹೆಚ್ಚು ಶಾಲೆಗಳಿಗೆ ಭೇಟಿ ನೀಡಿದ್ದಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದು sonia.khudanpur@azimpremjifoundation.org

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಮಕ್ಕಳ ಕಲಿಕೆ ಮತ್ತು ಸಾಮಾಜಿಕ ಸಂದರ್ಭ

ಸುನಿಲ್ ಸಾಹ

ಶಿಕ್ಷಣವು ಮಕ್ಕಳನ್ನು ಸದೃಢರನ್ನಾಗಿಸುವ ಹಾಗೂ ಸಂವೇದನಾಶೀಲ ಮನುಷ್ಯರನ್ನಾಗಿ ಮಾಡುವ, ಆ ಮೂಲಕ ಅರ್ಥಪೂರ್ಣ ಬದುಕು ಸಾಗಿಸಲು ನೆರವಾಗುವ ಪ್ರಕ್ರಿಯೆಯಾಗಿದೆ. ಅವರು ಸಮಾಜದ ಒಳಿತಿಗಾಗಿ ಕಾರ್ಯನಿರ್ವಹಿಸಬೇಕಿದ್ದು, ಜಾಗತಿಕವಾಗಿ ಧನಾತ್ಮಕ ಬದಲಾವಣೆಯನ್ನು ತರುವಲ್ಲಿ ತಮ್ಮ ಪಾತ್ರವನ್ನು ರೂಪಿಸಬೇಕಿದೆ. ಆದ್ದರಿಂದ ಪ್ರತಿಯೊಬ್ಬ ಶಿಕ್ಷಕರೂ ತಮ್ಮ ತರಗತಿಯಲ್ಲಿರುವ ಮಗು ಒಬ್ಬ ವ್ಯಕ್ತಿಯಾಗಿರುವುದರ ಜೊತೆಗೇ, ಅವನು/ಅವಳು ಸಮಾಜದ ಒಂದು ಭಾಗವೂ ಆಗಿರುತ್ತಾರೆ ಮತ್ತು ಅದಕ್ಕನುಗುಣವಾಗಿ ಬೆಳೆಯಬೇಕು ಎನ್ನುವ ಸಂಗತಿಯನ್ನು ತಿಳಿದಿರಬೇಕು.

ನಾನು ಶಾಲೆಗಳಿಗೆ ಹೋದಾಗ ಮತ್ತು ಸಹಶಿಕ್ಷಕರನ್ನು ಭೇಟಿಯಾದಾಗಲೆಲ್ಲ ಕಲಿಯಲಾರದ 'ಕೆಲವು' ಮಕ್ಕಳು ಇದ್ದಾರೆ ಎನ್ನುವ ಒಂದು ಸಂಗತಿ ಕೊರೆಯುತ್ತಲೇ ಇರುತ್ತದೆ. ಇದಕ್ಕೆ ಕಾರಣಗಳನ್ನು ಹುಡುಕುತ್ತ ಹೋದಾಗ, ಕಂಡುಬರುವ ಪ್ರತಿಕ್ರಿಯೆಗಳಲ್ಲಿ ವಾಸ್ತವವಾಗಿ ಈ ಮಕ್ಕಳೂ ಮನುಷ್ಯರು ಎಂಬುದನ್ನು ನಿರಾಕರಿಸಿದಂತೆ ಕಾಣಿಸುತ್ತದೆ. ಮಗುವು ಈ ವಾಸ್ತವ ಸಮಾಜದ ಒಂದು ಭಾಗವಾಗಿದ್ದು, ಇಲ್ಲಿಯೇ ಸಂವಹನ ನಡೆಸುವ, ಬೌದ್ಧಿಕವಾಗಿ ಮತ್ತು ಸಾಮಾಜಿಕವಾಗಿ ಬೆಳವಣಿಗೆ ಹೊಂದುತ್ತದೆ. ಹಾಗಿದ್ದಾಗ ಕೆಲವು ಮಕ್ಕಳು ಕಲಿಯುವ ಸಾಮರ್ಥ್ಯವನ್ನು ಹೊಂದಿಲ್ಲ ಎನ್ನಲು ಹೇಗೆ ಸಾಧ್ಯ?

ಮಕ್ಕಳ ಕಲಿಕೆಗೆ ಸಂಬಂಧಿಸಿದಂತೆ ಇರುವ ನಂಬಿಕೆಗಳನ್ನು ನೋಡಿದಾಗ, ನಮ್ಮ ಸಾಮಾಜಿಕ ವ್ಯವಸ್ಥೆಯೇ ಅದಕ್ಕೆ ಕಾರಣ ಎನ್ನುವುದು ಕಂಡುಬರುತ್ತದೆ. ನಮ್ಮ ಸಮಾಜವು ವಿವಿಧ ಜಾತಿ, ಧರ್ಮ ಮತ್ತು ಆರ್ಥಿಕ ಹಿನ್ನೆಲೆಗಳನ್ನು ಒಳಗೊಂಡ ಒಂದು ನಿರ್ದಿಷ್ಟ ರೀತಿಯ ಸಂರಚನೆಯನ್ನು ಹೊಂದಿದ್ದು, ಇದರ ಆಧಾರದ ಮೇಲೆ, ಮಕ್ಕಳು ಶಾಲೆಗೆ ದಾಖಲಾತಿ ಪಡೆದ ಕ್ಷಣದಿಂದಲೇ ಅವರ ಕಲಿಕೆಯ ಸಾಮರ್ಥ್ಯವನ್ನು ನಿರ್ಧರಿಸಿಬಿಡಲಾಗುತ್ತದೆ. ಈ ನಂಬಿಕೆಯು ಸಮಾಜದ ಶ್ರೇಣೀಕೃತ ವ್ಯವಸ್ಥೆಯಲ್ಲಿ ಇನ್ನಷ್ಟು ಆಳವಾಗಿ ಬೇರೂರಿದಾಗ, ಬೋಧನೆ ಮತ್ತು ಕಲಿಕೆಯ ಮೇಲಿನ ಗಮನವು ತೆಳುವಾಗಿ, ಮಕ್ಕಳ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ಮೇಲೆ ಗಮನವು ವರ್ಗಾವಣೆಗೊಳ್ಳುತ್ತದೆ. ಇದರಿಂದ ನಮ್ಮ ಪ್ರಯತ್ನಗಳು ಕುಗ್ಗುತ್ತವೆ.

ಮಕ್ಕಳ ವಿಚಾರಕ್ಕೆ ಬಂದರೆ, ನಾವು ಅವರನ್ನು ಸಮಾಜದ ಶ್ರೇಣೀಕೃತ ವ್ಯವಸ್ಥೆಯ ಅತ್ಯಂತ ತಳಮಟ್ಟದಲ್ಲಿ ಇಡುತ್ತೇವೆ, ಬಹುಶಃ ಮಹಿಳೆಯರಿಗಿಂತಲೂ ಕೆಳಗಿನ ಸ್ಥಾನದಲ್ಲಿ ಅವರನ್ನು ಇರಿಸುತ್ತೇವೆ ಎನ್ನುವುದು ನನ್ನ ಅನುಭವದಿಂದ ಹೇಳಬಹುದಾದ ಮಾತು. ನಾವು ಶಾಲೆಯಲ್ಲಿ ಆಗಾಗ, 'ಈ ಮಗು ಏನನ್ನೂ ಮಾಡಲಾರದು, ಅದಕ್ಕೆ ಸಾಮರ್ಥ್ಯವಿಲ್ಲ,' ಅಥವಾ 'ಅದು ಹೀಗೆಲ್ಲ ಕಲಿಯುವುದಿಲ್ಲ, ಸರಿಯಾಗಿ ಏಟು ಕೊಡಬೇಕು,' ಮುಂತಾದ ಮಾತುಗಳನ್ನು ಕೇಳುತ್ತೇವೆ. ನಮ್ಮ ಮಕ್ಕಳು ಇತರ ಮಕ್ಕಳಿಗಿಂತ ಹೆಚ್ಚು ಅಂಕಗಳನ್ನು ಪಡೆಯಬೇಕು ಎನ್ನುವ ಸಮಾಜದಲ್ಲಿರುವ ನಿರೀಕ್ಷೆ, ಈ ರೀತಿಯ ಹೋಲಿಕೆ ಮತ್ತು ಮೂದಲಿಕೆಗಳು ಉಸಿರುಗಟ್ಟಿಸುವ ವಾತಾವರಣವನ್ನು ನಿರ್ಮಿಸುತ್ತವೆ ಹಾಗೂ ಅದಕ್ಕೆ ಹಲವಾರು ಜೀವಗಳು ಬಲಿಯಾಗುತ್ತವೆ. ಇಂತಹ ಒಂದು ಪರಿಸರದಲ್ಲಿ, ನಾವು ಬೋಧಿಸಲು ಮತ್ತು ಕಲಿಯಲು ಮುಂದಾಗುವುದಿಲ್ಲ. ಮಕ್ಕಳು, ಮಾನವ ಸಮಾಜದ ಪ್ರಮುಖ ಅಂಗವಾಗಿದ್ದು, ವಯಸ್ಕರಲ್ಲಿರುವ ಎಲ್ಲಾ ಮಾನವ ಸಹಜ ಗುಣಗಳನ್ನು ಅವರೂ ಹೊಂದಿದ್ದಾರೆ. ಅಂದಾಗ, ಕೆಲವು ಮಕ್ಕಳು ಕಲಿಯಲಾರರು ಎನ್ನುವುದು ಯಾಕೆ?

ಆರ್ಥಿಕ ಅಸಮಾನತೆಯು ಈ ಅಂತರವನ್ನು ಮತ್ತಷ್ಟು ಹೆಚ್ಚಿಸುತ್ತದೆ. ಇಂದಿಗೂ ಕೂಡ ನಮ್ಮ ಸಮಾಜದ ದೊಡ್ಡದೊಂದು ಭಾಗಕ್ಕೆ ಎರಡು ಹೊತ್ತು ಊಟವೂ ಸಿಗದ ಸ್ಥಿತಿ ಇದೆ ಮತ್ತು ಕೆಲವು ಕುಟುಂಬಗಳಲ್ಲಿ ಅದಕ್ಕಾಗಿ ಬಹಳ ಒದ್ದಾಡಬೇಕಾದ ಪರಿಸ್ಥಿತಿಯಿದೆ. ಇಂತಹ ಕುಟುಂಬಗಳಿಂದ ಬಂದ ಮಕ್ಕಳು ಕುಟುಂಬದ ಕಾಳಜಿಯನ್ನು ವಹಿಸುವುದು ತಮ್ಮ ಜವಾಬ್ದಾರಿ ಎಂದು ಭಾವಿಸಿ, ಅದಕ್ಕಾಗಿ ಕೆಲಸ ಮಾಡಲು ಆರಂಭಿಸುತ್ತಾರೆ. ಸುಗ್ಗಿಯ ಸಮಯದಲ್ಲಿ ಅನೇಕ ಮಕ್ಕಳು ತಮ್ಮ ಕುಟುಂಬಕ್ಕೆ ನೆರವಾಗಲು ಶಾಲೆಗೆ ಗೈರು ಹಾಜರಾಗಿ ಭತ್ತದ ಕೊಯ್ಲು, ಕಾಳು ಕೀಳುವುದು ಮತ್ತು ಆಲೂಗಡ್ಡೆ ಅಗೆಯುವಂತಹ ಕಾಯಕಗಳಲ್ಲಿ ತೊಡಗುತ್ತಾರೆ.

ಈ ಸಂದರ್ಭದಲ್ಲಿ ನಾನು ಒಂದು ಘಟನೆಯನ್ನು ಹಂಚಿಕೊಳ್ಳಲು ಬಯಸುತ್ತೇನೆ. ನಮ್ಮಲ್ಲಿ ಕೆಲವರು ಉತ್ತರಾಖಂಡ್‌ನಲ್ಲಿರುವ ಶಾಲೆಯೊಂದಕ್ಕೆ ಬಾಲ ಶೋಧ ಮೇಳದ (Baal Shodh Mela) ತಯಾರಿಗಾಗಿ ನಿಯಮಿತವಾಗಿ ಹೋಗುತ್ತಿದ್ದೆವು. ಅಲ್ಲಿ ಸಮುದಾಯದ ಸದಸ್ಯರನ್ನು ಭೇಟಿಯಾಗುತ್ತಿದ್ದೆವು. ಆಗಾಗ ಅವರ ಜೊತೆ ಸಂವಾದ ನಡೆಸುತ್ತಿದ್ದೆವು. ನಮ್ಮ ಮೇಲಿದ್ದ ಅವರ ನಂಬಿಕೆ ಇನ್ನಷ್ಟು ದೃಢವಾಯಿತು. ಹೀಗೆ ತಮ್ಮನ್ನು ಭೇಟಿಯಾಗಲು, ತಮ್ಮ ಬದುಕು, ವೃತ್ತಿ ಬಗ್ಗೆ ಮಾತನಾಡಲು ಇದೇ ಮೊದಲ ಬಾರಿಗೆ ಕೆಲವರು ಬರುತ್ತಿದ್ದಾರೆಂದು ನಮಗೆ ಹೇಳಿದರು. ಈ ಸಮುದಾಯದ ಬಹುತೇಕ ಸದಸ್ಯರು ಜೀವನೋಪಾಯಕ್ಕಾಗಿ ಭಿಕ್ಷಾಟನೆಯನ್ನು ಅವಲಂಬಿಸಿದ್ದಾರೆ. ಸಾಮಾನ್ಯವಾಗಿ ಜನರು ವಯಸ್ಕರಿಗೆ ಹಣವನ್ನು ಕೊಡಲು ಇಷ್ಟಪಡುವುದಿಲ್ಲ. ಹಾಗಾಗಿ, ತಮ್ಮ ಇಷ್ಟಕ್ಕೆ ವಿರುದ್ಧವಾದರೂ ಮಕ್ಕಳನ್ನು ಜೊತೆಗೆ ಕೊಂಡೊಯ್ಯುವುದಾಗಿ ಅವರು ಹೇಳಿದರು. ತಮಗೆ ಶಿಕ್ಷಣದ ಮಹತ್ವವು ತಿಳಿದಿದೆಯೆಂದೂ ಅವರು ಹೇಳಿದರು.

'ಶಿಕ್ಷಣದ ಪ್ರಾಮುಖ್ಯತೆಯನ್ನು ತಿಳಿದಿರದ ಸಮಾಜದ ಯಾವ ಭಾಗವೂ ಇಲ್ಲ. ಹಾಗಾಗಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದೇ ಇರಲು ಇನ್ನೇನಾದರೂ ನಿಜವಾದ ನಿರ್ಬಂಧ ಇರಲೇಬೇಕು' ಎಂದು 1936ರಲ್ಲಿ ಪ್ರೇಮ್‌ಚಂದ್ ಅವರು ಬರೆದಿದ್ದರು. ಹಾಗೆ ಹೇಳುವುದರ ಮೂಲಕ ಮಕ್ಕಳು ಶಾಲೆಗೆ ಬಾರದಿರುವುದನ್ನು ನಾನು ಸಮರ್ಥಿಸುತ್ತಿಲ್ಲ. ನಾನು ಅದನ್ನು ಸಂವೇದನಾಪೂರ್ಣ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ ಅಷ್ಟೇ. ಇಂತಹ ಮಕ್ಕಳ ವಿಷಯದಲ್ಲಿ ನಾವು ಬೇರೊಂದು ಪ್ರಕ್ರಿಯೆಯನ್ನು ಪಾಲಿಸಬಹುದಾದ ಯಾವುದಾದರೂ ಮಾರ್ಗವಿದೆಯೇ? ಮಕ್ಕಳು

ಶಾಲೆಯನ್ನು ತಮ್ಮದೇ ಎಂದು ಭಾವಿಸುವ ಹಾಗೆ ನಾವು ಏನನ್ನಾದರೂ ಮಾಡಬೇಕಿದೆ. ಅವರ ಕುಟುಂಬ ಹಾಗೂ ಸಮುದಾಯಗಳು ಬದುಕುವುದಕ್ಕಾಗಿ ಹಣ ಗಳಿಸಲು ಹಿಡಿದ ಮಾರ್ಗವನ್ನು ನಾವು ಅರ್ಥಮಾಡಿಕೊಳ್ಳಬೇಕಿದೆ ಹಾಗೂ ಗೌರವಿಸಬೇಕಿದೆ. ಕೆಲವು ಪ್ರಕ್ರಿಯೆಗಳನ್ನು ತರಗತಿ ಕೊಠಡಿಯ ಹೊರಗೆ ಕೈಗೆತ್ತಿಕೊಳ್ಳಬೇಕಾಗಬಹುದು. ಆದರೆ ನಾವದನ್ನು ತರಗತಿ ಕೊಠಡಿಯ ಪ್ರಕ್ರಿಯೆಯ ಭಾಗವನ್ನಾಗಿಸಬೇಕು ಮತ್ತು ಬೋಧನೆಗೆ ಸಂಬಂಧಿಸಿದಂತೆ ಹೊಸ ಉಪಕ್ರಮಗಳನ್ನು ನಾವು ಆರಂಭಿಸಬಹುದು.

ನಮ್ಮ ಕೆಲವೊಂದು ನಂಬಿಕೆಗಳನ್ನು ಬದಲಾಯಿಸಿಕೊಳ್ಳುವ ಅಗತ್ಯವಿದೆ ಜೊತೆಗೆ ಹೊಸ ಮಾರ್ಗಗಳನ್ನು ಶೋಧಿಸುವ ಅವಶ್ಯಕತೆಯೂ ಇದೆ. ಉದಾಹರಣೆಗೆ,

- ಮೊಟ್ಟ ಮೊದಲನೆಯದಾಗಿ, ನಾವು ಮಕ್ಕಳನ್ನು ಇತರ ಮಕ್ಕಳೊಡನೆ ಹೋಲಿಸುವುದನ್ನು ನಿಲ್ಲಿಸಬೇಕು; ಅಥವಾ ಅವರ ಬಗ್ಗೆ ಅಭಿಪ್ರಾಯ ರೂಪಿಸಿಕೊಳ್ಳುವುದನ್ನು ಮತ್ತು ಅವರ ಸಾಮಾಜಿಕ ಹಾಗೂ ಆರ್ಥಿಕ ಹಿನ್ನೆಲೆಯ ಆಧಾರದ ಮೇಲೆ ಅವರಿಗೆ ಹಣೆಪಟ್ಟಿ ಹಚ್ಚುವುದನ್ನು ನಿಲ್ಲಿಸಬೇಕು.

- ಎಲ್ಲರಿಗೂ ಸಮಾನ, ವೈವಿಧ್ಯಮಯ ಮತ್ತು ಉಲ್ಲಾಸದಾಯಕ ರೀತಿಯಲ್ಲಿ ಕಲಿಸಿದರೆ, ಪ್ರತಿ ಮಗುವಿನ ಹಿನ್ನೆಲೆ ಹೇಗೇ ಇದ್ದರೂ, ಒಂದೇ ತೆರನಾದ ಕಲಿಯುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಶಾಲೆಗಳು ಎಲ್ಲಾ ಮಕ್ಕಳನ್ನೂ ದಾಖಲಿಸಿಕೊಳ್ಳುವಂತೆ, ಅವರನ್ನು ತಮ್ಮ ವ್ಯವಸ್ಥೆಯ ಭಾಗವಾಗಿಸಿಕೊಳ್ಳುವಂತೆ ಹಾಗೂ ಹಳೆಯ ನಂಬಿಕೆಗಳನ್ನೆಲ್ಲ ಮುರಿದುಹಾಕುವಂತೆ ಪ್ರಯತ್ನಗಳನ್ನು ಮಾಡಬೇಕು. ಸೂಕ್ತವಾದ ಬೆಂಬಲ ಮತ್ತು ಗೌರವ ದೊರಕಿದರೆ ಮಕ್ಕಳು ಕಲಿಯುತ್ತಾರೆ ಎಂದು ನಾವು ನಂಬಬೇಕು.

- ಪ್ರಶ್ನೋತ್ತರಗಳನ್ನು ಉರುಹೊಡೆಯುವುದರ ಮೂಲಕ ಯಶಸ್ಸನ್ನು ಗಳಿಸುವ ವಿದ್ಯಾರ್ಥಿಗಳ ಸಂಖ್ಯೆಗಿಂತಲೂ ಈ ಪ್ರಕ್ರಿಯೆಗೆ ಹೆಚ್ಚಿನ ಗಮನವನ್ನು ನೀಡುವ ಅಗತ್ಯವಿದೆ. ಮಕ್ಕಳಲ್ಲಿ ಸೃಜನಶೀಲ ಆಲೋಚನೆಯನ್ನು ಬೆಳೆಸುವುದು ಹೆಚ್ಚು ಮುಖ್ಯವಾಗಿದೆ. ಹೀಗೆ ಮಾಡಲು, ಶಾಲೆಯಲ್ಲಿ ವಿವಿಧ ತರಹದ ಬೋಧನಾ ಚಟುವಟಿಕೆಗಳನ್ನು ಆರಂಭಿಸಬಹುದು. ಉದಾಹರಣೆಗೆ, ಹೀಗೆ ಮಾಡಲು ವಿಷಯವನ್ನು ಮಕ್ಕಳ ಪರಿಸರಕ್ಕೆ ಜೋಡಿಸುವುದು, ಸಮುದಾಯದ ಸದಸ್ಯರನ್ನು ತರಗತಿಗೆ ಆಹ್ವಾನಿಸಿ ಸಂವಾದ ನಡೆಸುವುದು ಇತ್ಯಾದಿ ತರಹದ ಬೋಧನಾ ಚಟುವಟಿಕೆಗಳನ್ನು ತರಗತಿಗಳಲ್ಲಿ ಆರಂಭಿಸಬಹುದು. ಮಕ್ಕಳು ಮತ್ತು ಕಲಿಕಾ ಪ್ರಕ್ರಿಯೆಗಳೆರಡನ್ನೂ ನಾವು ಪ್ರೋತ್ಸಾಹಿಸುವ ಅಗತ್ಯವಿದೆ. ಈ ಪ್ರಕ್ರಿಯೆಯು ಕೆಲವು ಕಾರಣಕ್ಕಾಗಿ ಹಿಂದೆ ಉಳಿದ ಮಕ್ಕಳ ಕಲಿಕೆಯ ಪ್ರಕ್ರಿಯೆಯನ್ನು ಹೆಚ್ಚಿಸಲು ನೆರವಾಗುವುದಷ್ಟೇ ಅಲ್ಲ, ಶಾಲೆಗೆ ಹಾಜರಾಗುವುದರಲ್ಲೂ ಅವರ ಉತ್ಸಾಹವನ್ನೂ ಉತ್ತೇಜಿಸುತ್ತದೆ ಎಂಬುದಾಗಿ ನಮ್ಮ ಕೆಲವು ಶಾಲೆಗಳ ಅನುಭವವು ಸೂಚಿಸುತ್ತದೆ. ಕ್ರೀಡೆಗಳಲ್ಲಿ ಕ್ರೀಡಾ ಮನೋಭಾವದಿಂದ ಪಾಲ್ಗೊಳ್ಳದೆ, ಸ್ಪರ್ಧಿಸಲು ಆರಂಭಿಸಿ, ಎದುರಾಳಿಗಳನ್ನು ಶತ್ರುಗಳಂತೆ ನೋಡತೊಡಗುತ್ತೇವೆ ಎನ್ನುವುದು ಅತ್ಯಂತ ದೊಡ್ಡ ನಿರಾಶೆಯ ಸಂಗತಿ. ಸಂತೋಷ, ಹಾಗೂ ಹುರುಪಿಗಾಗಿ ಆಟದಲ್ಲಿ ಭಾಗವಹಿಸಿದರೆ, ಆಟದ ಸ್ವರೂಪವೇ ಬದಲಾಗಿ ಹೋಗುತ್ತದೆ. ಆಟವು ಭ್ರಾತೃತ್ವವನ್ನು ಬೆಳೆಸಲು ಸಹಾಯ ಮಾಡುತ್ತದೆ ಹಾಗೂ ಸಾಮಾಜಿಕ ವಿಕೃತಿಗಳನ್ನು ಕುಗ್ಗಿಸುತ್ತದೆ. ಇದು ಜಾತಿ ಮತ್ತು ಲಿಂಗ ಸಂಕೋಲೆಗಳನ್ನೂ ದುರ್ಬಲಗೊಳಿಸುತ್ತದೆ.

- ಬೋಧನಾ ವೃತ್ತಿಯು ಉಳಿದೆಲ್ಲ ವೃತ್ತಿಗಳಿಗಿಂತ ಭಿನ್ನವಾದುದು ಎಂಬ ನಂಬಿಕೆ ನಮಗಿರಲೇಬೇಕು ಹಾಗೂ ಶಿಕ್ಷಕರು ಮಕ್ಕಳನ್ನು ಸಂವೇದನಾಪೂರ್ಣವಾಗಿ ನಡೆಸಿಕೊಳ್ಳಬೇಕು. ಶಿಕ್ಷಕ ವೃತ್ತಿಯು ಹೊಸ ಪೀಳಿಗೆಯೊಂದನ್ನು ತಯಾರು ಮಾಡುವ ಪ್ರಕ್ರಿಯೆಯಾಗಿದೆ ಮತ್ತು ಸಮುದಾಯವು ಆ ಪ್ರಕ್ರಿಯೆಯಲ್ಲಿ ನಂಬಿಕೆ ಹೊಂದಿರುವುದರಿಂದಲೇ ಮಕ್ಕಳನ್ನು ಶಾಲೆಗೆ ಕಳುಹಿಸುತ್ತದೆ ಹಾಗೂ ಮುಂದಿನ ತಲೆಮಾರು ಇಂದು ಇರುವ ಸ್ಥಿತಿಯಿಂದ ಮುಂದಕ್ಕೆ ಚಲಿಸುತ್ತದೆ ಎಂದು ಭಾವಿಸುತ್ತದೆ.

ಆದ್ದರಿಂದ, ಇಂತಹ ಅಗಾಧ ಹೊಣೆಯನ್ನು ನಾವೆಲ್ಲರೂ ಹೊಂದಿದ್ದರೆ, ಸಹಜವಾಗಿಯೇ ನಮ್ಮ ಕೆಲಸದ ವ್ಯಾಪ್ತಿಯೂ ಅಷ್ಟೇ ದೊಡ್ಡದಾಗಿರುತ್ತದೆ. ಅದಕ್ಕಾಗಿ, ನಮ್ಮ ಏಳ್ಗೆಗಾಗಿ ನಾವೆಲ್ಲ ಒಟ್ಟಾಗಿ ಕೆಲಸ ಮಾಡುವುದನ್ನು ಮುಂದುವರೆಸಬೇಕು. ಆಗಷ್ಟೇ ನಾವು ಒಂದು ಸೂಕ್ಷ್ಮ, ವಿಚಾರಶೀಲ ಹಾಗೂ ಚಿಂತನಶೀಲ ಸಮಾಜವನ್ನು ನಿರ್ಮಾಣ ಮಾಡಲು ಸಾಧ್ಯ.



**ಸುನಿಲ್ ಸಾಹ** ಅವರು ೨೦೦೯ರಿಂದ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿದ್ದು, ಮೊದಲು ಉತ್ತರಾಖಂಡ್ ಮತ್ತು ಈಗ ಛತ್ತೀಸ್‌ಗಢದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಅದಕ್ಕೂ ಮೊದಲು ಅವರು ಹರಿಯಾಣದ ರಾಜ್ಯ ಸಂಪನ್ಮೂಲ ಕೇಂದ್ರದಲ್ಲಿ (ಸ್ಟೇಟ್ ರಿಸೋರ್ಸ್ ಸೆಂಟರ್, ಹರಿಯಾಣ) ಕಾರ್ಯನಿರ್ವಹಿಸುತ್ತಿದ್ದರು. ಅವರನ್ನು sunil@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಲತಾ ಕೆ ಸಿ**

# ಪ್ರತಿ ಮಗುವಿಗೂ ನಾಲ್ಕು ಕಾರ್ಯಚಟುವಟಿಕೆಗಳು

ಸ್ವಾತಿ ಸರ್ಕಾರ್

ಇಂದಿನ ಜಗತ್ತಿನಲ್ಲಿ ಸಂಖ್ಯಾತ್ಮಕ ಪ್ರಾಥಮಿಕ ಕೌಶಲಗಳನ್ನು ಹೊಂದಿರುವುದು ಅತ್ಯಗತ್ಯ. ಜೀವನೋಪಾಯಕ್ಕೆ ನಾವು ಏನನ್ನೇ ಅವಲಂಬಿಸಿದ್ದರೂ, ಕೂಡುವ, ಕಳೆಯುವ, ಗುಣಿಸುವ ಹಾಗೂ ಭಾಗಿಸುವ ಸಾಮರ್ಥ್ಯವು ದಿನನಿತ್ಯದ ವ್ಯವಹಾರದಲ್ಲಿ ಅಗತ್ಯವಿದ್ದು, ನಿರ್ಣಾಯಕ ಪಾತ್ರ ವಹಿಸುತ್ತವೆ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಇವು ಸಹಜವಾಗಿಯೇ ಗಣಿತ ಪಠ್ಯಕ್ರಮದ ಬಹುತೇಕ ಭಾಗವನ್ನು ಆಕ್ರಮಿಸಿರುತ್ತದೆ. ಆದಾಗ್ಯೂ, ನಮ್ಮ ಮಕ್ಕಳು ಈ ಕೌಶಲಗಳನ್ನು ಅಗತ್ಯವಿರುವಷ್ಟು ಕಲಿಯುತ್ತಿಲ್ಲವೆಂದೇ "ಶಿಕ್ಷಣದ ಸ್ಥಾನಮಾನದ ವಾರ್ಷಿಕ ವರದಿ"ಯೂ (Annual Status of Education Reports (ASER) ಒಳಗೊಂಡಂತೆ ಅನೇಕ ವರದಿಗಳು ಸೂಚಿಸುತ್ತವೆ. ಇದಕ್ಕೆ ಕಾರಣಗಳಾದರೂ ಏನಿರಬಹುದು?

ಕಾರಣ 1: ಸ್ವಾಭಾವಿಕವಾಗಿ ಸಂಖ್ಯೆಗಳು ತೀರಾ ಅಮೂರ್ತವಾದವು. ಪ್ರಕೃತಿಯಲ್ಲಿ ಅವುಗಳು ನೇರವಾಗಿ ಅಸ್ತಿತ್ವದಲ್ಲಿರುವುದಿಲ್ಲ. ಉದಾಹರಣೆಗೆ, ಐದು ಬೆರಳು ತೋರಿಸಿಯೋ, ಐದು ಬಾರಿ ಚಪ್ಪಾಳೆ ತಟ್ಟಿಯೋ ಚರ್ಚೆಯಲ್ಲಿ ಐದು ಅಂಕಗಳನ್ನು ಎಣಿಸುವ ಮೂಲಕವೋ ತಿಳಿಸಬಹುದೇ ಹೊರತು ಹಾಗೆಯೇ 5ನ್ನು ತೋರಿಸಲು ಸಾಧ್ಯವಿಲ್ಲ. 5 ಎಂಬುದು ಒಂದು ಸಂಖ್ಯಾತ್ಮಕ ಚಿಹ್ನೆಯಾಗಿದ್ದು, ಅದು ಐದನ್ನು ಪ್ರತಿನಿಧಿಸುತ್ತದೆ (ಮತ್ತು ಲಿಪಿಯೊಂದಿಗೆ ಈ ಚಿಹ್ನೆಯೂ ಬದಲಾಗುತ್ತದೆ).

ಕಾರಣ 2: ಇಂತಹ ಅಮೂರ್ತ ಪರಿಕಲ್ಪನೆಯನ್ನು ನಿಭಾಯಿಸುವ ಸಾಮರ್ಥ್ಯವು ಮಕ್ಕಳಲ್ಲಿ ರೂಪುಗೊಳ್ಳುವ ಮೊದಲೇ, ತೀರ ಸಣ್ಣ ವಯಸ್ಸಿಗೇ, ಸಂಖ್ಯೆಯ ಅಮೂರ್ತ ಕಲ್ಪನೆಯನ್ನು ಅವರು ಕಲಿಯಬೇಕು ಎಂಬ ನಿರೀಕ್ಷೆ.

ಕಾರಣ 3: ಮಕ್ಕಳನ್ನು ಸಂಖ್ಯೆಗಳ ಜಗತ್ತಿಗೆ ಪರಿಚಯಿಸುವ ಶಿಕ್ಷಕರು ಸ್ವಯಂ ತಾವೇ ಅವುಗಳ ಬಗ್ಗೆ ಸ್ಪಷ್ಟತೆಯನ್ನು ಹೊಂದಿರಬೇಕು.

ಕಾರಣ 4: ಸ್ವಯಂ ಶಿಕ್ಷಕರೇ ತಾವು ಮಕ್ಕಳಾಗಿದ್ದಾಗ ಉತ್ತಮ ಗಣಿತ ಬೋಧನಕಲೆಯನ್ನು ಅನುಭವಿಸದೇ ಇದ್ದಿರಬಹುದು. ಜೊತೆಗೆ, ನಮ್ಮ ದೇಶದ ಶಿಕ್ಷಕರ ತರಬೇತಿ ಪದ್ಧತಿಯೂ ತಮ್ಮ ವಿದ್ಯಾರ್ಥಿಗಳಿಗೆ ನೆರವೀಯಲು ಅವರನ್ನು ಯೋಗ್ಯರನ್ನಾಗಿ ಮಾಡದೇ ಇರುವುದು.

ಇವುಗಳ ಪರಿಣಾಮವಾಗಿ ಎರಡು ಮುಖ್ಯ ಸಂಗತಿಗಳು ತಲೆದೋರುತ್ತವೆ:

ಪರಿಣಾಮ 1: ಮಕ್ಕಳು ವಾಕ್ಯರೂಪದ ಲೆಕ್ಕಗಳನ್ನು ಬಿಡಿಸಲು ಅಸಮರ್ಥರಾಗಿರುವುದು. ಇದಕ್ಕೆ ಸಾಕಷ್ಟು ಓದು ಹಾಗೂ ಗ್ರಹಣ ಶಕ್ತಿಯಲ್ಲಿನ ಕೊರತೆಗಳು ಭಾಗಶಃ ಕಾರಣವಿರಬಹುದು. ಆದರೆ, ಬಹಳಷ್ಟು ಮಕ್ಕಳು ತಮಗೆ ನೀಡಲ್ಪಟ್ಟ ವಾಕ್ಯರೂಪದ ಲೆಕ್ಕವನ್ನು ಗಣಿತೀಯ ಹೇಳಿಕೆಯನ್ನಾಗಿ ಪರಿವರ್ತಿಸುವಲ್ಲಿ ಸೋಲುತ್ತಾರೆ. ಅವರಿಗೆ ಯಾವ ಕ್ರಿಯೆಯನ್ನು ಯಾವಾಗ ಬಳಸಬೇಕು ಎಂಬುದು ತಿಳಿಯದೇ, ಬಹಳಷ್ಟು ಬಾರಿ ಹೇಳಿಕೆಯ ಪ್ರಧಾನ ಪದಗಳನ್ನೇ ಅತಿಯಾಗಿ ನೆಚ್ಚಿಕೊಂಡಿರುತ್ತಾರೆ.

ಪರಿಣಾಮ 2: ಹೆಚ್ಚು ಅಂಕಿಗಳಿರುವ ಸಂಖ್ಯೆಗಳೊಡನೆ ವ್ಯವಹರಿಸುವಾಗ ಹಾಗೂ ರೂಢಿಯಲ್ಲಿರುವ ಕ್ರಮಾವಳಿಗಳನ್ನು ಪ್ರಯೋಗಿಸುವಲ್ಲಿ ತಪ್ಪೆಸಗುತ್ತಾರೆ. 500–283 ಎಂಬ ವ್ಯವಕಲನವು ಎರಡು ಬಾರಿ ದಶಕವನ್ನು ಎರವಲು ತರುವ ಪ್ರಕ್ರಿಯೆಯ ಕಾರಣದಿಂದಾಗಿ ಹೆಚ್ಚು ಕಷ್ಟಕೊಟ್ಟರೂ, ದಿನನಿತ್ಯದ ವ್ಯವಹಾರಗಳಲ್ಲಿ ಬಹಳಷ್ಟು ಬಾರಿ ನಾವು ಎದುರಿಸಬೇಕಾಗುವ ಲೆಕ್ಕವೇ ಆಗಿದೆ. ಉದಾಹರಣೆಗೆ, 283 ರೂಗಳ ಮೌಲ್ಯದ ಏನನ್ನೋ ಕೊಂಡು, 500 ರೂಗಳ ನೋಟನ್ನು ಅಂಗಡಿಯವನಿಗೆ ಕೊಟ್ಟರೆ, ಬರಬೇಕಾದ ಚಿಲ್ಲರೆ ಎಷ್ಟು? ಎಎಸ್‌ಇಆರ್ ವರದಿಗಳ ಪ್ರಕಾರ, ಹಾಗೂ ನಾವು ಗಮನಿಸಿರುವಂತೆ, ಭಾಗಾಕಾರ ಅತಿ ಕಷ್ಟಕರ ಎಂಬುದು ಎಲ್ಲಾ ಬೋರ್ಡ್‌ಗಳಲ್ಲಿಯೂ ಕೇಳಿಬರುವ ದೂರು. ಈ ಕಷ್ಟದ ಅನುಭವಕ್ಕೆ ಕಾರಣ ಬಹುಶಃ ಸ್ಥಾನಬೆಲೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದೇ ಆಗಿದೆ. ಇಂಥ ಸಂದರ್ಭದಲ್ಲಿ ಇದನ್ನು ಸರಿಪಡಿಸಲು ಏನು ಮಾಡಬಹುದು?

ಈ ಲೇಖನದಲ್ಲಿ ನಾವು ಮೂರು ಪ್ರಧಾನ ಅಂಶಗಳಿಗೆ ಒತ್ತು ನೀಡಬಯಸುತ್ತೇವೆ. ಇನ್ನೂ ಹೆಚ್ಚಿನ ವಿವರಣೆಗಾಗಿ ಆಸಕ್ತ ವಾಚಕರು ಲೇಖನದ ಕೊನೆಯಲ್ಲಿ ಸೂಚಿಸಲಾಗಿರುವ ಸಂಪನ್ಮೂಲಗಳನ್ನು ಗಮನಿಸಬಹುದು.

**ಅರ್ಥವನ್ನಾಧರಿಸಿದ ವಿಧಾನ**

ಹಂತ 1:

ಯಾವುದೇ ಕ್ರಿಯೆಯನ್ನೂ ಪರಿಚಯಿಸುವ ಮೊದಲು ಮಕ್ಕಳು ಸ್ಥಾನಬೆಲೆಯನ್ನು ಎಷ್ಟು ಚೆನ್ನಾಗಿ ಅರಿತಿದ್ದಾರೆಂದು (children's understanding of place value) ಪರಿಶೀಲಿಸುವುದು. ವಿಶೇಷವಾಗಿ, ಕೊಟ್ಟ ಪ್ರಮಾಣವನ್ನು (ಉದಾಹರಣೆಗೆ, ಒಚಿದು ಚಮಚದಲ್ಲಿರುವ ಅಕ್ಕಿ ಕಾಳುಗಳು) ಸಂಖ್ಯೆ ಹಾಗೂ ಅದರ ಹೆಸರಿನೊಂದಿಗೆ ಹೊಂದಿಸಿಕೊಳ್ಳುವ ಸಾಮರ್ಥ್ಯ ಹೊಂದಿದ್ದಾರೆಯೇ, ಇಲ್ಲವೇ ಎಂಬುದನ್ನು ಖಾತ್ರಿಪಡಿಸಿಕೊಳ್ಳುವುದು. ಇಂದು ನಾವು ಸಂಖ್ಯೆಗಳನ್ನು ಬರೆಯುವ ರೀತಿ ಅಥವಾ ಸ್ಥಾನಬೆಲೆಯ (ಅಥವಾ ಸಂಖ್ಯೆಗಳನ್ನು ಹೇಗೆ ಬರೆಯುತ್ತೇವೆ) ಮೂಲಭೂತ ಕಲ್ಪನೆಯು ಹತ್ತರ ಕಟ್ಟುಗಳಲ್ಲಿ ಲೆಕ್ಕ ಹಾಕುವುದೇ ಆಗಿದೆ. ಆದ್ದರಿಂದ, ಹತ್ತಕ್ಕಿಂತ ದೊಡ್ಡ ಸಂಖ್ಯೆಯೊಂದಕ್ಕೆ ಸಂಖ್ಯಾತ್ಮಕ ಚಿಹ್ನೆ ನೀಡಲು ಅದನ್ನು ಅ) ಹತ್ತರ ಎಷ್ಟು ಕಟ್ಟುಗಳನ್ನಾಗಿ ಕಟ್ಟಬಹುದು ಹಾಗೂ ಆ) ಬಳಿಕ ಉಳಿಯುವ ಬಿಡಿಭಾಗಗಳೆಷ್ಟು ಎಂಬುದನ್ನು ಗಮನಿಸಲಾಗುತ್ತದೆ. ಹತ್ತರ ಕಟ್ಟುಗಳನ್ನು ದಶಕಗಳೆಂದೂ, ಬಿಡಿ ಭಾಗಗಳನ್ನು (ಅಥವಾ ಘಟಕಗಳು) ಬಿಡಿಗಳೆಂದೂ ಹೇಳಲಾಗುತ್ತದೆ. ಇದೇ ರೀತಿ ಮುಂದುವರಿದು, ಹತ್ತು ಹತ್ತರ ಕಟ್ಟುಗಳನ್ನು ತಲುಪಿದಾಕ್ಷಣ ದೊಡ್ಡ ಕಟ್ಟುಗಳನ್ನು

ಕಟ್ಟಬೇಕಾಗಿ ಬಂದು, ಅದನ್ನು ನೂರು (ಶತಕ) ಎನ್ನುತ್ತೇವೆ. ಇದೇ ರೀತಿ, ನೂರರ ಹತ್ತು ಕಟ್ಟುಗಳನ್ನು ತಲುಪಿದಾಗ ದೊಡ್ಡ ಕಟ್ಟು ಕಟ್ಟಿ ಅದನ್ನು ಸಾವಿರ ಎನ್ನುತ್ತೇವೆ. ಪ್ರಕ್ರಿಯೆಯು ಇದೇ ರೀತಿ ಮುಂದುವರಿಯುತ್ತದೆ.

ಈ ಕಟ್ಟು ಕಟ್ಟುವ ವಿಧಾನವನ್ನು ಅರ್ಥೈಸಿಕೊಳ್ಳಲು ಹಾಗು ಸಂಖ್ಯೆಗಳನ್ನು ಬರೆಯುವ (ಸ್ಥಾನಬೆಲೆ ಎಂದು ಕರೆಯಲ್ಪಡುವ) ಪದ್ಧತಿಯನ್ನು ಗ್ರಹಿಸಲು ಮಕ್ಕಳು ತಮ್ಮ ಕೈಯ್ಯಾರೆ ಒಟ್ಟುಗೂಡಿಸಿ ಕಟ್ಟು ಕಟ್ಟಬಲ್ಲ ಸಾಮಗ್ರಿ ಅವರಿಗೆ ದೊರಕುವಂತೆ ಇದ್ದರೆ ಒಳ್ಳೆಯದು. ಸಣ್ಣ ಕಡ್ಡಿಗಳು (ಮರದ ಕಡ್ಡಿ, ಹಂಚಿಕಡ್ಡಿ ಅಥವಾ ಇನ್ನಾವುದೋ ಆಗಬಹುದು) ಹಾಗು ರಬ್ಬರ್ ಬ್ಯಾಂಡ್‌ಗಳಿದ್ದರೆ ಕಟ್ಟು ಕಟ್ಟುವುದು ಹಾಗೂ ಕಟ್ಟು ಬಿಚ್ಚುವುದು ಸರಾಗವಾಗುತ್ತದೆ.

**ಎರಡನೆಯದಾಗಿ,** ಪ್ರತಿ ಕ್ರಿಯೆಯನ್ನೂ ಸೂಕ್ತ ಸನ್ನಿವೇಶಗಳು ಹಾಗೂ ವಾಕ್ಯರೂಪದ ಲೆಕ್ಕಗಳೊಂದಿಗೆ ಪರಿಚಯಿಸಿ. ಸನ್ನಿವೇಶಕ್ಕೆ ಸೂಕ್ತವಾದ ಕೆಲವು ಸಾಮಗ್ರಿಗಳನ್ನು ನೀಡುವ ಮೂಲಕ ಚಟುವಟಿಕೆಗೆ ಜೀವ ತುಂಬಬಹುದು. ಇದಾದ ಬಳಿಕ =, +, –, × ಎಂಬ ಸೂಕ್ತ ಚಿಹ್ನೆಗಳನ್ನು ಪರಿಚಯಿಸಿ. ಅನಂತರ, ಅಭ್ಯಾಸಕ್ಕಾಗಿ ಕೆಲವು ಸನ್ನಿವೇಶಗಳನ್ನೋ, ವಾಕ್ಯರೂಪದ ಲೆಕ್ಕಗಳನ್ನೋ ಅವಕ್ಕೆ ಸರಿಹೊಂದುವ ಗಣಿತೀಯ ಹೇಳಿಕೆಗಳೊಡನೆ ನೀಡುವುದು. 1ನೇ ತರಗತಿಯ ಎನ್ ಸಿ ಇ ಆರ್ ಟಿ ಪಠ್ಯಪುಸ್ತಕವು ಸಂಕಲನ ಹಾಗು ವ್ಯವಕಲನಗಳನ್ನು ಉತ್ತಮ ರೀತಿಯಲ್ಲಿ ಪರಿಚಯಿಸುತ್ತದೆ. ಅದೇ ರೀತಿ, 3ನೇ ತರಗತಿಯ ಪಠ್ಯಪುಸ್ತಕವು ಗುಣಾಕಾರ ಹಾಗೂ ಭಾಗಾಕಾರಗಳನ್ನು ಪರಿಚಯಿಸುತ್ತದೆ.

**ಮೂರನೆಯದಾಗಿ,** 38 + 14, 72 – 55 ಇತ್ಯಾದಿ ನೀಡಲ್ಪಟ್ಟ ಸಮಸ್ಯೆಗಳಿಗೆ ವಾಕ್ಯರೂಪದ ಲೆಕ್ಕವನ್ನು ರಚಿಸಲು ಮಕ್ಕಳಿಗೆ ಹೇಳುವುದು. ಇದರಿಂದ ಮಕ್ಕಳ ಸೃಜನಶೀಲತೆಯು ವಿಕಾಸಗೊಳ್ಳಲು ಸಹಾಯವಾಗುತ್ತದೆ, ಅವರ ಭಾಷಾಭಿವೃದ್ಧಿ ಆಗುತ್ತದೆ ಹಾಗೂ ಯಾವ ಸನ್ನಿವೇಶಗಳನ್ನು ಯಾವ ರೀತಿಯ ಕ್ರಿಯೆಯಿಂದ ಪ್ರತಿನಿಧಿಸಲು ಸಾಧ್ಯ ಎಂಬುದನ್ನೂ ಅರಿಯುವಂತೆ ಆಗುತ್ತದೆ. ಹೇಳಿಕೆಗಳಿಂದ ಸನ್ನಿವೇಶಗಳಿಗೆ ಸಾಗುವ ಮೂಲಕ ಇದು ಚಿತ್ರ 1ರ ಚಕ್ರವನ್ನು ಪೂರ್ತಿಮಾಡುತ್ತದೆ. ಇದರ ಜೊತೆಗೆ, ಒಂದು ತಂಡದ ಮಕ್ಕಳು ರಚಿಸುವ ವಾಕ್ಯರೂಪದ ಲೆಕ್ಕಗಳನ್ನು ಬಗೆಹರಿಸಲು ಮತ್ತೊಂದು ತಂಡಕ್ಕೆ ನೀಡಬಹುದು.




ಚಿತ್ರ 1:

**ನಾಲ್ಕನೆಯದಾಗಿ,** ಕ್ರಿಯೆಗಳ ನಡುವಿನ ಸಂಬಂಧವನ್ನು ಎತ್ತಿ ತೋರಿಸಲು ಸನ್ನಿವೇಶವನ್ನು ಬದಲಾಯಿಸಿ. ಉದಾಹರಣೆಗೆ, ಈ ಸನ್ನಿವೇಶವನ್ನೇ ತೆಗೆದುಕೊಳ್ಳಿ: ನಿಮ್ಮ ಬಳಿ 8 ಹೂಗಳೂ, ನನ್ನ ಬಳಿ 5 ಹೂಗಳೂ ಇದ್ದರೆ ನಮ್ಮಿಬ್ಬರ ಬಳಿ ಒಟ್ಟು ಎಷ್ಟು ಹೂಗಳಿವೆ? ಇದು ಸಂಕಲನ ಹೇಳಿಕೆಯಾದ 8 + 5 = __ ಕ್ಕೆ ಸಮನಾಗಿದೆ. ಇದನ್ನು ಹೀಗೆ ಮಾರ್ಪಡಿಸಿ: ನಿಮ್ಮ ಬಳಿ 8 ಹೂಗಳಿದ್ದು, ನಮ್ಮಿಬ್ಬರ ಬಳಿ ಒಟ್ಟು 13 ಹೂಗಳಿದ್ದರೆ, ನನ್ನ ಬಳಿ ಇರುವ ಹೂಗಳೆಷ್ಟು? ಇದು 8 + __ = 13 ಎಂಬ ಸಂಕಲನ ಸಮೀಕರಣವಾಗಿ ಪರಿಣಮಿಸುತ್ತದೆ. ಪಾತ್ರಾಭಿನಯ ಮಾಡುತ್ತ, ಮತ್ತೊಬ್ಬ ಮಗುವು ಇದೇ ರೀತಿಯ 13 – 5 = __? ಎಂಬ ಪ್ರಶ್ನೆ ಕೇಳಬಹುದು. ಒಟ್ಟು ಎಂಬುದು ಸಂಕಲವನ್ನು ಸೂಚಿಸಿದರೂ ಅದು (8 + 5) ಎಂಬ ಹೇಳಿಕೆಯಾಗಿರಬಹುದು ಅಥವಾ (8 + __ = 13) ಎಂಬಂಥ ಸಮೀಕರಣವಾಗಿರಬಹುದು, ವ್ಯವಕಲನವಾಗಿ (13 – 8) ಪರಿಣಮಿಸಬಹುದು.

ಇದರಿಂದ ಮಕ್ಕಳು ಸನ್ನಿವೇಶವನ್ನು ಒಟ್ಟಾರೆ ಅರ್ಥಮಾಡಿಕೊಳ್ಳಲು ಸಹಾಯವಾಗುವುದೇ ಅಲ್ಲದೆ ಹೇಳಿಕೆಯ ಪ್ರಧಾನ ಪದಗಳನ್ನು ಅತಿಯಾಗಿ ಅವಲಂಬಿಸುವುದನ್ನು ತಪ್ಪಿಸುತ್ತದೆ. ಅದಕ್ಕೂ ಮಿಗಿಲಾಗಿ, ಸಂಕಲನವನ್ನು ಎರಡು ವಿಧದ ವ್ಯವಕಲನಗಳಾಗಿ ಪ್ರತಿನಿಧಿಸಬಹುದು ಎಂಬುದನ್ನು ತೋರಿಸುತ್ತದೆ. ಗುಣಾಕಾರ ಹಾಗೂ ಭಾಗಾಕಾರಗಳಿಗೆ ಸಂಬಂಧ ಕಲ್ಪಿಸಲು ಇದೇ ರೀತಿಯ ವಿಧಾನವನ್ನು ಬಳಸಬಹುದು.

ಹಂತ 2: ಕ್ರಮಾವಳಿ–ಯಾವಾಗ, ಹೇಗೆ ಮತ್ತು ಯಾಕೆ

| | | | | | | | | | |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 | 28 | 29 | 30 |
| 31 | 32 | 33 | 34 | 35 | 36 | 37 | 38 | 39 | 40 |
| 41 | 42 | 43 | 44 | 45 | 46 | 47 | 48 | 49 | 50 |
| 51 | 52 | 53 | 54 | 55 | 56 | 57 | 58 | 59 | 60 |
| 61 | 62 | 63 | 64 | 65 | 66 | 67 | 68 | 69 | 70 |
| 71 | 72 | 73 | 74 | 75 | 76 | 77 | 78 | 79 | 80 |
| 81 | 82 | 83 | 84 | 85 | 86 | 87 | 88 | 89 | 90 |
| 91 | 92 | 93 | 94 | 95 | 96 | 97 | 98 | 99 | 100 |

ಪ್ರತಿ ಕ್ರಿಯೆಯನ್ನೂ ಪರಿಚಯಿಸಿದ ಕೂಡಲೆ ರೂಢಿಯಲ್ಲಿರುವ ಕ್ರಮಾವಳಿಯನ್ನು ತಿಳಿಸುವ ಬದಲು ಸಮಸ್ಯೆಗಳನ್ನು ಬಗೆಹರಿಸುವ ವಿವಿಧ ವಿಧಾನಗಳನ್ನು ಕಂಡುಕೊಳ್ಳಲು ಮಕ್ಕಳಿಗೆ ಅವಕಾಶ ಮಾಡಿಕೊಡುವುದು. ನೂರಕ್ಕೂ ಕಡಿಮೆ ಸಂಖ್ಯೆಗಳನ್ನು ಕೂಡುವ ಮತ್ತು ಕಳೆಯುವ ಲೆಕ್ಕಗಳನ್ನು ಬಿಡಿಸಲು 10 × 10ರ ಸಂಖ್ಯಾಪಟ್ಟಿಯನ್ನಾಗಲೀ, ಸಂಖ್ಯಾರೇಖೆಯ ಗಣಿತಮಾಲಾ ಮಾದರಿಯನ್ನಾಗಲೀ ಬಳಸಿಕೊಳ್ಳಬಹುದು. ಉದಾಹರಣೆಗೆ: 37 + 25 = ? ಎಂಬುದನ್ನು ಈ ಯಾವ ವಿಧಾನದಲ್ಲಾದರೂ ಬಿಡಿಸಬಹುದು:

- 37 + 10 + 10 + 3 + 2 ಅಥವಾ 37 → 47 → 57 → 60 → 62
- 37 + 3 + 20 + 2 ಅಥವಾ 37 → 40 → 60 → 62
- 37 + 30 – 5 ಅಥವಾ 37 → 67 → 62

ಈ ವಿಧಾನಗಳು ರೂಢಿಯಲ್ಲಿರುವ ಕ್ರಮಾವಳಿಗಿಂತ ವಿಭಿನ್ನ ಎಂಬುದನ್ನು ಗಮನಿಸಿ. ರೂಢಿಯಲ್ಲಿರುವ ಕ್ರಮಾವಳಿಯಾದರೋ ಬಿಡಿಗಳನ್ನು ಹಾಗೂ ಹತ್ತುಗಳನ್ನು ಬೇರ್ಪಡಿಸಿ, ಬಿಡಿಗಳನ್ನು ಮೊದಲು ಕೂಡಿ, ಬಳಿಕ ಹತ್ತುಗಳನ್ನು ಕೂಡಲು ಹೇಳುತ್ತದೆ. ಹೇಗೆಂದರೆ, 37 + 25 = (30 + 7) + (20 + 5) = (7 + 5) + (30 + 20) = 12 + (30 + 20) = 2 + (10 + 30 + 20) = 2 + 60 = 62.

ನಾವು ಎರಡಕ್ಕಿಂತ ಹೆಚ್ಚು ಸಂಖ್ಯೆಗಳನ್ನು ಕೂಡುವಾಗ (ಉದಾಹರಣೆಗೆ, ಒಂದು ಬಿಲ್ಲಿನ ಮೊತ್ತ ಕಂಡುಕೊಳ್ಳುವಾಗ) ಅಥವಾ ನೂರಕ್ಕಿಂತ ದೊಡ್ಡ ಸಂಖ್ಯೆಗಳನ್ನು ಕೂಡುವಾಗ ರೂಢಿಯಲ್ಲಿರುವ ಕ್ರಮಾವಳಿಯ ಅವಶ್ಯಕತೆ ಬೀಳುತ್ತದೆ.

ಬಳಿಕ, ಮಕ್ಕಳಿಗೆ ಸೂಕ್ತ ಕಲಿಕಾಸಾಮಗ್ರಿಗಳ ಸಹಾಯದಿಂದ ರೂಢಿಯಲ್ಲಿರುವ ಕ್ರಮಾವಳಿಗಳನ್ನು ರಚಿಸಿಕೊಳ್ಳಲು ನೆರವು ನೀಡಿ. ಕಡ್ಡಿ ಮತ್ತು ಕಟ್ಟುಗಳ ವಿಧಾನವು ನೂರಕ್ಕಿಂತ ಕಡಿಮೆ ಮೊತ್ತದ ಸಂಕಲನ, ವ್ಯವಕಲನಗಳಿಗೆ ಬಹಳ ಚೆನ್ನಾಗಿ ಒದಗಿ ಬರುತ್ತದೆ. ಇದನ್ನು ಪರಿಣಾಮಕಾರಿಯಾಗಿಸಲು, ಮಕ್ಕಳು ಕಡ್ಡಿ ಮತ್ತು ಕಟ್ಟುಗಳೊಂದಿಗೆ ಲೆಕ್ಕ ಬಿಡಿಸುವ ಪ್ರತಿ ಹಂತವನ್ನೂ ಬರೆದು ತೋರಿಸಲು ಹೇಳಿ.

ನಾವು FLU ಎಂದು ಕರೆಯುವ ಎರಡು ಆಯಾಮದ 10ರ ಸ್ಥಾನಬೆಲೆಯ ಬಿಲ್ಲೆಗಳು (ನೂರುಗಳು/ಶತಕ), ಕಡ್ಡಿ (ದಶಕ/ಹತ್ತುಗಳು) ಹಾಗು ಬಿಂದು (ಏಕ/ಬಿಡಿ) ಸಾವಿರಕ್ಕಿಂತ ಚಿಕ್ಕಸಂಖ್ಯೆಗಳ ವಿಷಯದಲ್ಲಿ ಹಾಗು ಗುಣಾಕಾರ ಮತ್ತು ಭಾಗಾಕಾರಗಳನ್ನು ಮಾಡುವಾಗ ಉತ್ತಮವಾಗಿ ಒದಗಿಬರುತ್ತವೆ. ಹೆಚ್ಚಿನ ವಿವರಣೆಗಾಗಿ ಓದುಗರು ಉಲ್ಲೇಖದಲ್ಲಿ ನೀಡಲಾದ ಲೇಖನಗಳನ್ನು ಪರಾಮರ್ಶಿಸಬಹುದು.

ಇದರ ಜೊತೆಗೆ ಮತ್ತೂ ಒಂದು ಮುಖ್ಯವಾದ ಸಂಗತಿಯಿದೆ. ರೂಢಿಯಲ್ಲಿರುವ ಈ ಕ್ರಮಾವಳಿಗಳ ವಿಷಯವಾಗಿ ಮಕ್ಕಳಲ್ಲಿ ಏಳುವ ಪ್ರಶ್ನೆಗಳಿಗೆ ಉತ್ತರ ದೊರೆಯುವುದು ಮುಖ್ಯವಾಗುತ್ತದೆ. ಉದಾಹರಣೆಗೆ, ಭಾಗಾಕಾರ ಎಡದಿಂದ ಆರಂಭವಾದರೆ ಉಳಿದ ಮೂರು ಕ್ರಿಯೆಗಳು ಬಲದಿಂದ ಆರಂಭವಾಗುವುದು ಏಕೆ? (ಭಾಗಾಕಾರದ ಕುರಿತ ಎರಡನೇ ಉಲ್ಲೇಖವನ್ನು ನೋಡಿ). ಈ ವಿಧಾನಗಳಲ್ಲಿ ಯಾವುದಕ್ಕೆ ಮಕ್ಕಳು ಒಲವು ತೋರುತ್ತಾರೆ, ಅದಕ್ಕೆ ಕಾರಣಗಳೇನು ಎಂದು ಅವರಿಗೇ ಕಂಡುಕೊಳ್ಳಲು ಬಿಡಬೇಕು. ಉದಾಹರಣೆಗೆ, 376+285 ಎಂಬ ಮೊತ್ತವನ್ನು ಸಂಖ್ಯಾರೇಖೆಯ ಮೇಲೆ ಎರಡು ವಿಧಗಳಲ್ಲಿ ಕಂಡುಕೊಳ್ಳಬಹುದು. ನೂರರೊಂದಿಗೆ ಮೊದಲುಮಾಡಿ ಎಡದಿಂದ ಬಲಕ್ಕೆ ಸಾಗಬಹುದು ಅಥವಾ ಬಿಡಿಗಳೊಂದಿಗೆ ಮೊದಲುಮಾಡಿ ಬಲದಿಂದ ಎಡಕ್ಕೆ ಬರಬಹುದು (ಚಿತ್ರ 2). ಬಲದಿಂದ ಎಡಕ್ಕೆ (ರೂಢಿಯಲ್ಲಿರುವ ಕ್ರಮಾವಳಿಯಂತೆ) ಸಾಗಿದರೆ ಮತ್ತೊಮ್ಮೆ ಬರೆಯುವ ಅಗತ್ಯವಿರುವುದಿಲ್ಲ; ಅದೇ, ಎಡದಿಂದ ಬಲಕ್ಕೆ ಸಾಗಿದರೆ ಮೊದಲ ಹಂತ ಮುಗಿಯುತ್ತಿದ್ದಂತೆಯೇ ಮೊತ್ತದ ಒಳ್ಳೆಯ ಅಂದಾಜು ದೊರಕುತ್ತದೆ.




ಚಿತ್ರ 2:

ಹಂತ 3: ಅಭ್ಯಾಸ

ಅರ್ಥವನ್ನು ಕಟ್ಟಿಕೊಡುವುದು ನಿರ್ಣಾಯಕವಾದರೂ, ಅಭ್ಯಾಸ ಮಾಡುವುದಕ್ಕೆ ಬೇರೆ ಯಾವುದೇ ಪರ್ಯಾಯವಿಲ್ಲ. ಯಾವುದೇ ಕೌಶಲವನ್ನೇ ಆಗಲಿ, ಕರಗತಮಾಡಿಕೊಳ್ಳಲು ಅಭ್ಯಾಸದ ಅಗತ್ಯವಿದೆ. ಒಂದಂಕಿ ಸಂಖ್ಯೆಗಳನ್ನು ಯಾವುದೇ ಪ್ರಯಾಸವಿಲ್ಲದೆ ಕೂಡುವುದು (ಅಂತೆಯೇ ಕಳೆಯುವುದು), ಜೊತೆಗೆ ಒಂದಂಕಿ ಸಂಖ್ಯೆಗಳ ಗುಣಲಬ್ಧವನ್ನು ಕ್ಷಿಪ್ರವಾಗಿ ನೆನಪಿಸಿಕೊಳ್ಳುವುದು ಲೆಕ್ಕಹಾಕುವ ಕ್ರಿಯೆಯಲ್ಲಿ ನಾವು ಪಳಗುವ ಹಾದಿಯನ್ನು ಸುಗಮಗೊಳಿಸುತ್ತದೆ. ಒಂದಂಕಿ ಸಂಖ್ಯೆಗಳೊಂದಿಗಿನ ಸಂಕಲನವು, ಅದರಲ್ಲೂ ವಿಶೇಷವಾಗಿ 5ಕ್ಕಿಂತಲೂ ದೊಡ್ಡ ಸಂಖ್ಯೆಗಳಿದ್ದಾಗ, ಪ್ರಯಾಸವಿಲ್ಲದೇ ಯಾಂತ್ರಿಕವಾಗಿ ಸಾಗಲು ಹತ್ತರ ಕಟ್ಟುಗಳು ನೆರವಾಗುತ್ತವೆ. ಇದೇ ರೀತಿ, ಮಗ್ಗಿಯನ್ನೂ ಮಕ್ಕಳೇ ಕಟ್ಟಿಕೊಳ್ಳಬೇಕು. ಜೊತೆಗೆ, 10 ಅಥವಾ 5ರ ಮಗ್ಗಿ ಬಳಸಿ 6,

7 ಮತ್ತು 8ರ ಗುಣಲಬ್ಧಗಳನ್ನು ನೆನಪುಮಾಡಿಕೊಳ್ಳುವ ವಿಧಾನವನ್ನು ಮಕ್ಕಳಿಗೆ ತಿಳಿಸಿಕೊಡಬೇಕು. ಉದಾಹರಣೆಗೆ, 6 × 8 = 5 × 8 + 8 = 40 + 8 = 48 ಅಥವಾ 8 × 7 = 10 × 7 - 7 - 7 = 70 - 7 - 7 = 63 - 7 = 56.

ಇದರಿಂದ ಮಕ್ಕಳು ತಮ್ಮ ಮಗ್ಗಿ ಪುಸ್ತಕವನ್ನು ಮೊದಲಿನಿಂದ ಮತ್ತೊಮ್ಮೆ ನೋಡದೇ ಗುಣಲಬ್ಧಗಳನ್ನು ಕಂಡು–ಕೊಳ್ಳುವಂತಾಗುತ್ತದೆ. 9ರ ಮಗ್ಗಿಯನ್ನು ಈ ರೀತಿ ರಚಿಸಿಕೊಂಡು ಅದರಲ್ಲಿ ಮಕ್ಕಳು ಅನೇಕ ವಿನ್ಯಾಸಗಳನ್ನು ಪತ್ತೆ ಹಚ್ಚಬಹುದು. ಹೀಗಾಗಿ, 9ರ ಗುಣಲಬ್ಧಗಳನ್ನು ನೆನಪುಮಾಡಿಕೊಳ್ಳುವುದು ಸುಲಭವಾಗುತ್ತದೆ.

ಅಭ್ಯಾಸವು ಆಸಕ್ತಿದಾಯಕವಾಗುವಂತೆ ಮಾಡಲು ಅನೇಕ ವಿಧಗಳಿವೆ. "ಗೋಡೆ ಚಟುವಟಿಕೆ" (Wall activity) ಹಾಗೂ "ಯಾದೃಚ್ಛಿಕ ಅಂಕಿಗಳ ಆಟ" (Random Digits game)ದಂತಹ ಕೆಲವನ್ನು ಆಯ್ದುಕೊಳ್ಳಬಹುದು. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಪ್ರಕಟಣೆಯ (Thinking Skills) "ಥಿಂಕಿಂಗ್ ಸ್ಕಿಲ್ಸ್" ವಿಭಾಗವು ಸಾಕಷ್ಟು ಅಭ್ಯಾಸವನ್ನು ತಂತಾನೇ ನೀಡಬಲ್ಲ ಅನೇಕ ಹುಡುಕಾಟಗಳ ಸಮೃದ್ಧ ಆಕರವಾಗಿದೆ. ಈ ಲೇಖನವನ್ನು ಮುಗಿಸುವ ಮೊದಲು ಹಲವುವೇಳೆ ಕಡೆಗಣಿಸಲ್ಪಡುವ ಎರಡು ವಿಷಯಗಳನ್ನು ಚರ್ಚಿಸಲು ಬಯಸುತ್ತೇವೆ.

(i) ಸೊನ್ನೆಯೊಂದಿಗಿನ ಕ್ರಿಯೆಗಳು ಮತ್ತು
(ii) ಈ ಕ್ರಿಯೆಗಳ ಕೆಲವು ಗುಣಲಕ್ಷಣಗಳು.

ಮಕ್ಕಳು ಸೊನ್ನೆಯನ್ನು ಕೇವಲ ಸ್ಥಾನಗ್ರಹಣ ಬಿಂದುವಾಗಿಯಲ್ಲದೆ ಒಂದು ಸಂಖ್ಯೆಯನ್ನಾಗಿ ಪರಿಗಣಿಸುವುದು ಮಹತ್ವದ್ದಾಗಿದೆ. ಈ ಸಂಖ್ಯೆಯು ಯಾವ ರೀತಿ ನಾಲ್ಕು ಗಣಿತೀಯ ಕ್ರಿಯೆಗಳಲ್ಲಿ ಪಾಲ್ಗೊಳ್ಳುತ್ತದೆ ಎಂಬುದನ್ನು ನೋಡುವುದೇ ಇದನ್ನು ಸಾಧಿಸಲು ಇರುವ ಉತ್ತಮ ಮಾರ್ಗವಾಗಿದೆ. (NCERT) ಎನ್‌ಸಿಇಆರ್‌ಟಿ ಹಾಗೂ ಇತರೆ ಪಠ್ಯಪುಸ್ತಕಗಳು ಸೊನ್ನೆಯೊಂದಿಗಿನ ಸಂಕಲನ ಮತ್ತು ವ್ಯವಕಲನಗಳನ್ನು ಚರ್ಚಿಸುತ್ತವೆ. ಆದರೆ, ಬಹಳಷ್ಟು ಬಾರಿ ಸೊನ್ನೆಯೊಂದಿಗಿನ ಗುಣಾಕಾರವನ್ನು ಕಡೆಗಣಿಸಲಾಗುತ್ತದೆ. ಈ ಲೋಪವು, ಎರಡು ಪೂರ್ಣಸಂಖ್ಯೆಗಳ ಗುಣಲಬ್ಧವು ಗುಣಿಸಲ್ಪಡುವ ಸಂಖ್ಯೆಗಳಿಗಿಂತ ಯಾವಾಗಲೂ ದೊಡ್ಡದಾಗಿರುತ್ತದೆ ಎಂಬ ತಪ್ಪು ಕಲ್ಪನೆಗೆ ಎಡೆಮಾಡಿಕೊಡುತ್ತದೆ. ಸೊನ್ನೆಯೊಂದಿಗಿನ ಭಾಗಾಕಾರ ಪ್ರಕ್ರಿಯೆಯನ್ನು ಅರ್ಥಮಾಡಿಕೊಂಡಿರುವುದು ಇನ್ನೂ ವಿರಳ ಎಂದೇ ಹೇಳಬೇಕು. ಈ ಹಂತದಲ್ಲಿ 0 ÷ 4 ಎಂಬುದನ್ನು ವಿವರಿಸಬಹುದು, ಆದರೆ, ಸೊನ್ನೆಯಿಂದ ಭಾಗಿಸುವುದನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ. 6 ÷ 0 ಯನ್ನು ಪರಿಗಣಿಸೋಣ. ಇದನ್ನು ನಾವು __ × 0 = 6 ಎಂಬ ಗುಣಾಕಾರದ ಸಮೀಕರಣವನ್ನಾಗಿಸ–ಬಹುದು. ಇಲ್ಲಿನ ಖಾಲಿ ಸ್ಥಳದಲ್ಲಿ ತುಂಬಬಹುದಾದ ಯಾವ ಸಂಖ್ಯೆಯೂ ಇಲ್ಲ ಎಂಬುದಂತೂ ಸ್ಪಷ್ಟ. ಇನ್ನೊಂದೆಡೆ, 0 ÷ 0 = __ ಎಂಬುದನ್ನು __ × 0 = 0 ಎಂದು ಬರೆದು ನೋಡೋಣ. ಈಗ ಖಾಲಿ ಸ್ಥಳದಲ್ಲಿ ಯಾವ ಸಂಖ್ಯೆಯನ್ನು ಬರೆದರೂ ಉತ್ತರ ಸರಿಯಾಗಿರುತ್ತದೆ. ಇಷ್ಟೊಂದು ಸಂಖ್ಯೆಗಳಿಂದ ಯಾವುದಾದರು ಒಂದು ಸಂಖ್ಯೆಯನ್ನು ಆಯ್ಕೆ ಮಾಡಲು ಉಪಾಯವಿದೆಯೇ? ಆದ್ದರಿಂದ, ಈ ಸನ್ನಿವೇಶವು 0 ÷ 4ಕ್ಕೆ ಸಂಪೂರ್ಣ ವಿರುದ್ಧವಾಗಿದೆ! ಈ ಕಾರಣದಿಂದಲೇ ಸೊನ್ನೆಯಿಂದ ಯಾವ ಸಂಖ್ಯೆಯ ಭಾಗಾಕಾರವನ್ನೂ ವ್ಯಾಖ್ಯಾನಿಸಲಾಗಿಲ್ಲ.

ಸಂಕಲನ ಮತ್ತು ಗುಣಾಕಾರಕ್ಕೆ ಸಂಬಂಧಿಸಿದಂತೆ ಪರಿವರ್ತನೀಯ, ಸಹವರ್ತನೀಯ ಹಾಗು ವಿತರಣಾ ನಿಯಮಗಳನ್ನು ಈ ಹಂತದಲ್ಲಿ ಸಾಮಾನ್ಯವಾಗಿ ಉಪೇಕ್ಷಿಸಲಾಗುತ್ತದೆ. ಆದರೆ ಅವು ರೂಢಿಯಲ್ಲಿರುವ ಕ್ರಮಾವಳಿಗಳಿಗೆ ಅತ್ಯಂತ ಆವಶ್ಯಕವಾಗಿದ್ದು, ಅವುಗಳನ್ನು ಮಕ್ಕಳಿಗೆ ಹೊರೆಯಾಗದಂತೆ ಅನ್ವೇಷಿಸಬಹುದಾಗಿದೆ. ಎರಡಂಕಿ ಸಂಖ್ಯೆಯನ್ನು ರೂಢಿಯಲ್ಲಿರುವ ಕ್ರಮಾವಳಿಗೆ ಅನುಗುಣವಾಗಿ ಹತ್ತು(ದಶಕಗಳು) ಹಾಗೂ ಬಿಡಿಗಳಾಗಿ (ಏಕಗಳಾಗಿ) ಒಡೆದು ಮತ್ತೆ ಸೇರಿಸುವ ಪ್ರಕ್ರಿಯೆಯಲ್ಲಿ (ಮೇಲಿನ 37 + 25 ಉದಾಹರಣೆ ನೋಡಿ) ಪರಿವರ್ತನೀಯ ಹಾಗು ಸಹವರ್ತನೀಯ ನಿಯಮಗಳು ಅನೇಕ ಬಾರಿ ಪ್ರಯೋಗವಾಗುತ್ತವೆ. ಬಹು ಅಂಕೆಯ ಸಂಖ್ಯೆಗಳ ಗುಣಾಕಾರದ ಕ್ರಮಾವಳಿಯಲ್ಲಾದರೋ, ಸಹವರ್ತನೀಯ ಹಾಗು ವಿತರಣಾ ನಿಯಮಗಳು ನೇರವಾಗಿ ಬಳಸಲ್ಪಡುತ್ತವೆ. 4 × 30 = 4 × (3 × 10) = (4 × 3) × 10 = 12 × 10 = 120: ಈ ರೀತಿ ಸಂಖ್ಯೆಗಳ ಗುಣಲಬ್ಧವನ್ನು ಕಂಡುಕೊಳ್ಳುವ ವಿಧಾನದ ವಿವರಣೆಯಲ್ಲಿ ಗುಣಾಕಾರದ ಸಹವರ್ತನೀಯ ನಿಯಮವು ಬಳಸಲ್ಪಡುತ್ತದೆ. ಈ ನಿಯಮಗಳು ವ್ಯವಕಲನ ಹಾಗು ಭಾಗಾಕಾರಗಳಿಗೆ ಅನ್ವಯಿಸುತ್ತವೆಯೋ, ಇಲ್ಲವೋ ಎಂದು ಮಕ್ಕಳೇ ಕಂಡುಕೊಳ್ಳಲು ಬಿಡುವುದು ಒಳ್ಳೆಯ ಉಪಾಯ. (40 - 12) ÷ 4 ಎಂಬಲ್ಲಿ ವಿತರಣಾ ನಿಯಮವು ಪಾಲಿಸಲ್ಪಡುತ್ತದೆ (ಏಕೆ?).

ಮಕ್ಕಳು ಈ ನಾಲ್ಕು ಮೂಲಭೂತ ಕ್ರಿಯೆಗಳನ್ನು ಕರಗತಮಾಡಿಕೊಳ್ಳುವಲ್ಲಿ ಇರುವ ಸಮಸ್ಯೆಗಳು ಯಾವುವೆಂದು ನಮಗೆ ತಿಳಿದಿದ್ದೂ, ದುರದೃಷ್ಟವಶಾತ್, ಅವು ಇನ್ನೂ ಮುಂದುವರಿಯುತ್ತಲೇ ಇವೆ. ಆದರೆ, ಅದು ಹೀಗೇ ಇರಬೇಕೆಂದೇನೂ ಇಲ್ಲ; ಏಕೆಂದರೆ, ಇದಕ್ಕೆ ಪರಿಹಾರಗಳೂ ಬಹಳ ಹಿಂದಿನಿಂದಲೂ ತಿಳಿದೇ ಇವೆ. ವೃತ್ತಿಪೂರ್ವ ಮತ್ತು ವೃತ್ತಿನಿರತ ಶಿಕ್ಷಕ ವರ್ಗಗಳೆರಡನ್ನೂ ಒಳಗೊಂಡ "ಶಿಕ್ಷಕರ ಶಿಕ್ಷಣ"ದಂತಹ ವಿಶಾಲ ವ್ಯಾಪ್ತಿಯ ವ್ಯವಸ್ಥೆಯ ಪರಿವರ್ತನೆ ಬಹಳ ಪ್ರಯಾಸಕರವೂ, ಕಾಲಾವಕಾಶ ಬೇಡುವಂಥದ್ದಾದರೂ, ಬದಲಾವಣೆಗೆ ಒಪ್ಪುವ ಶಿಕ್ಷಕರಿಗೆ ವಿಭಿನ್ನ ಪ್ರಯೋಗಕ್ಕಾಗಿ ಕೆಲವು ಮಾರ್ಗದರ್ಶನ ಸೂತ್ರಗಳನ್ನು ಪ್ರಸಕ್ತ ಲೇಖನವು ನೀಡುವುದೆಂದು ಆಶಿಸುತ್ತೇವೆ. ಅದಕ್ಕಾಗಿ ಕೆಳಗೆ ಸೂಚಿಸಿರುವ ಸಂಪನ್ಮೂಲಗಳನ್ನು ಶೋಧಿಸಿ ಬೋಧನಕಲೆಯ ಅಭ್ಯಾಸಗಳನ್ನು ತಿದ್ದಿಕೊಳ್ಳುವ ಅಗತ್ಯವಿದೆ. ಈ ಪ್ರಯತ್ನದ ಫಲವು ಅದಕ್ಕಾಗಿ ನಾವು ತೆಗೆದುಕೊಳ್ಳುವ ಶ್ರಮವನ್ನು ಸಂಪೂರ್ಣವಾಗಿ ಸಮರ್ಥಿಸುವುದೆಂಬ ಅನುಭವವು ದೇಶದಾದ್ಯಂತ ಅನೇಕ ಶಿಕ್ಷಕರದ್ದಾಗಿದೆ ಎಂಬ ಆಶ್ವಾಸನೆಯನ್ನಂತೂ ನಾವು ನೀಡಬಹುದು.

**ಪರಾಮರ್ಶನೆಗಳು:**

ASER: http://www.asercentre.org//p/359.html
Math-Magic, Class 1-3, NCERT: http://ncert.nic.in/textbook/textbook.htm
Ganit Bodh, Digantar: http://www.digantar.org/uploads/pdf/publications.pdf
Place Value: http://www.teachersofindia.org/en/article/atria-pull-out-place-value
Addition: http://teachersofindia.org/en/article/atria-pullout-section-july-2013
Subtraction: http://teachersofindia.org/en/article/pullout-section-november-2013-teaching-subtraction
Multiplication: http://teachersofindia.org/en/article/pullout-section-march-2014-teaching-multiplication
http://teachersofindia.org/en/presentation/initiating-multiplication
Division: http://www.teachersofindia.org/en/article/pullout-section-july-2014-division
http://teachersofindia.org/en/ebook/thoughts-division-operation
Word problems: http://teachersofindia.org/en/article/word-problems-mathematics
Thinking Skills: http://teachersofindia.org/en/ebook/thinking-skills-pullout
Addition properties: http://azimpremjiuniversity.edu.in/SitePages/resources-ara-vol-7-no-2-july-2018-exploring-properties-of-addition.aspx
Ganitmala: http://teachersofindia.org/en/article/making-ganitmala
Flats-longs-units: http://teachersofindia.org/en/article/making-multiple-versions-flats-longs-units-teach-numbers-and-their-operations
Arrow cards: http://teachersofindia.org/en/article/making-your-own-arrow-cards
Ten-frames: http://teachersofindia.org/en/article/using-ten-frames-inside-your-classroom
*Wall: http://teachersofindia.org/en/activity/brick-wall-math-game*
*Random digits: http://teachersofindia.org/en/activity/number-game-random-digits*



**ಸ್ವಾತಿ ಸರ್ಕಾರ್** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಕಂಟಿನ್ಯೂಯಿಂಗ್ ಎಜುಕೇಶನ್ ಮತ್ತು ಸಂಪನ್ಮೂಲ ಕೇಂದ್ರದಲ್ಲಿ (School of Continuing Education and University Resource Centre)ದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿದ್ದಾರೆ. ಇವರಿಗೆ ಗಣಿತ ಅತ್ಯಂತ ಅಚ್ಚುಮೆಚ್ಚಿನ ವಿಷಯವಾಗಿದೆ ನಂತರದಲ್ಲಿ ಚಿತ್ರಕಲೆ. ಇವರು "ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ"ಯಿಂದ ಸಂಖ್ಯಾಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಅಮೇರಿಕದ ಸಿಯಾಟಲ್ ನಗರದಲ್ಲಿರುವ ವಾಷಿಂಗ್ಟನ್ ವಿಶ್ವವಿದ್ಯಾಲಯದಿಂದ ಗಣಿತದಲ್ಲಿ ಎಮ್.ಎಸ್. ಪದವಿ ಪಡೆದಿದ್ದಾರೆ. ಐದು ವರ್ಷಗಳಿಂದಲೂ ಗಣಿತವನ್ನು ಮಕ್ಕಳು ಮತ್ತು ಶಿಕ್ಷಕರಿಗೆ ಕಲಿಸುತ್ತಿದ್ದಾರೆ. ಇವರಿಗೆ ಚಟುವಟಿಕೆ ರೂಪದ ಅದರಲ್ಲೂ–ವಿಶೇಷವಾಗಿ ಓರಿಗಾಮಿಯಲ್ಲಿ (origami) ಅಪಾರ ಆಸಕ್ತಿ. ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: swati.sircar@apu.edu.in <mailto:swati.sircar@apu.edu.in

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಮೊದಲ ತಲೆಮಾರಿನ ಶಾಲಾ ಮಕ್ಕಳಿಗೆ ಕಲಿಸುವುದು | ಪ್ರಮುಖ ಕಲಿಕೆಗಳು

ವಿದ್ಯಾ ದಾಸ್

ಬಹುತೇಕ ಮಕ್ಕಳು ಅತ್ತಿಂದಿತ್ತ ಓಡಾಡುತ್ತಿರಲಿಲ್ಲವಾದರೂ, ಚೈತನ್ಯದಿಂದ ಪುಟಿಯುತ್ತಿದ್ದ ಈ ಮಕ್ಕಳು ಮಾತ್ರ ತಮ್ಮ ಸ್ಥಳಗಳಲ್ಲಿ ಕೂರಲು ಇಷ್ಟಪಡದೆ ಅಡ್ಡಾಡುತ್ತಿದ್ದರು. ಕೇವಲ ಐದಾರು ಮಕ್ಕಳಷ್ಟೇ ಸ್ವಲ್ಪ ತುಂಟಾಟ ಮಾಡುತ್ತಾ ಗದ್ದಲವೆಬ್ಬಿಸಿದ್ದರು. ನಾನು ಹೋಗಿ ಆ ಮಕ್ಕಳ ಪಕ್ಕ ಸುಮ್ಮನೆ ಕುಳಿತೆ. ಆ ತುಂಟ ಮಕ್ಕಳು ತಾವು ಬರೆದಿದ್ದನ್ನು ತೋರಿಸಲು ನನ್ನ ಬಳಿ ಬಂದರು. ಅವರಲ್ಲಿ ಹಲವು ಮಕ್ಕಳು ನನ್ನ ಗಮನವನ್ನು ಸೆಳೆಯುವುದಕ್ಕೆ ಕಾತರರಾಗಿದ್ದರೇ ಹೊರತು ತಮ್ಮ ಕೆಲಸವನ್ನು ಮುಗಿಸಿರಲಿಲ್ಲ. ಅವರ ಸರದಿ ಬಂದಾಗ ಅವರ ಕೆಲಸವನ್ನು ನೋಡಲು ನಾನೇ ಬರುತ್ತೇನೆಂದು ಸ್ಪಷ್ಟವಾಗಿ ಹೇಳಿದೆ. ಅವರಲ್ಲಿ ಅತ್ಯಂತ ಕಿರಿಯವಳು ತನ್ನ ಸ್ಥಳಕ್ಕೆ ನನ್ನನ್ನು ಎಳೆದೊಯ್ಯಲು ಪ್ರಯತ್ನಿಸಿದಳು. ಅವಳು ಹಾಗೆ ಮಾಡಬಾರದೆಂದೂ ನಾನು ಅವರ ಮುಖ್ಯ ಶಿಕ್ಷಕಿ ಎಂದು ಮತ್ತೊಂದು ಮಗು ಅವಳಿಗೆ ವಿವರಿಸಿದಳು, ಬಳಿಕ ಆ ಮಗು ನನ್ನನ್ನು ಎಳೆಯುವುದನ್ನು ನಿಲ್ಲಿಸಿದಳು, ಎಲ್ಲರೂ ತಮ್ಮ ತಮ್ಮ ಜಾಗಕ್ಕೆ ಹಿಂದಿರುಗಿದರು.

ಒಂದು ಬುಡಕಟ್ಟು ಪ್ರದೇಶದಲ್ಲಿ ಮೊದಲ ತಲೆಮಾರಿನ ಕಲಿಕಾರ್ಥಿಗಳೆಂದು ಸಾಮಾನ್ಯವಾಗಿ ಗುರುತಿಸುವ, ಮೊದಲ ಪೀಳಿಗೆಯ ಶಾಲಾ ಮಕ್ಕಳಿಗಾಗಿ ಇರುವ **ಅಗ್ರಗಾಮಿ** ಶಾಲೆಯ ಎರಡನೇ ತರಗತಿಗೆ ಹೋಗಿದ್ದೆ. ಮಕ್ಕಳು ಹುಟ್ಟಿದ ಕ್ಷಣದಿಂದಲೇ ಕಲಿಕಾರ್ಥಿಗಳಾಗಿರುತ್ತಾರೆ. ಇವರ ಪೋಷಕರು ಎಂದಿಗೂ ಶಾಲೆಗೆ ಹೋಗಿಯೇ ಇಲ್ಲದಿರುವುದರಿಂದ ಈ ಮಕ್ಕಳಿಗೆ ಶಾಲಾ ಶಿಕ್ಷಣ ಒಂದು ಸವಾಲಿನ ಸಂಗತಿಯಾಗಿರುತ್ತದೆ. ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರು ಬಲವಂತವಾಗಿ ಮತ್ತು ಒತ್ತಡ ಹೇರಿ ಪಠ್ಯ ವಿಷಯಗಳನ್ನು ಹೇರಲು ಪ್ರಯತ್ನಿಸುವುದರಿಂದ ಈ ಮಕ್ಕಳು ಸಂಪೂರ್ಣ ವಿಧೇಯರೂ, ನಮ್ರರಾಗುವಂತೆ ಮಾಡಲಾಗುತ್ತದೆ. ಇನ್ನು ಕೆಲವೆಡೆ ಶಿಕ್ಷಕರು ಈ ಮಕ್ಕಳು ಕಲಿಯಲಾರರು ಎಂದು ನಿರ್ಧರಿಸಿ ಕೈಚೆಲ್ಲುವುದರಿಂದ ಕಲಿಕೆ ಬಹುತೇಕ ಸಾಧ್ಯವಾಗುವುದೇ ಇಲ್ಲ. ಈ ಎರಡೂ ಸನ್ನಿವೇಶಗಳು ಒಟ್ಟಿಗೆ ಸಂಭವಿಸುವುದು ಅಪರೂಪವೇನಲ್ಲ, ಕಲಿಕೆ ಬಹುತೇಕ ಇಲ್ಲದಿರುವುದು ಮತ್ತು ಇದರ ಜೊತೆಗೆ ಮಕ್ಕಳನ್ನು ಒಂದು ರೀತಿಯ ಭಯ, ಕೀಳರಿಮೆ ಮತ್ತು ವಿಧೇಯತೆಯ ಭಾವನೆಗಳಿಗೆ ಒಗ್ಗಿಸಲಾಗುತ್ತದೆ. **ಅಗ್ರಗಾಮಿ** ಶಾಲೆಯಲ್ಲಿ ಈ ಮಕ್ಕಳು ಭಯಮುಕ್ತ ಅಥವಾ ಒತ್ತಡರಹಿತ ವಾತಾವರಣದಲ್ಲಿ ಕಲಿಯಲು ಸಹಾಯ ಮಾಡಲಾಗುತ್ತದೆ.

ಈಗಲೂ ದಾಖಲಾತಿ, ಶಾಲೆಯಿಂದ ಹೊರಬೀಳುವುದು ಮತ್ತು ಶೌಚಾಲಯಗಳ ಬಗ್ಗೆಯೇ ವ್ಯವಸ್ಥೆಯು ಹೆಚ್ಚಿನ ಗಮನ ನೀಡುತ್ತಿದ್ದರೂ, ಮೊದಲ ತಲೆಮಾರಿನ ಶಾಲಾ ಮಕ್ಕಳಿಗೆ ಶೈಕ್ಷಣಿಕ ಕೌಶಲ್ಯಗಳನ್ನು ಬೆಳೆಸಿಕೊಳ್ಳಲು ನೆರವು ನೀಡುವುದರಲ್ಲಿ ಇರುವ ಹಲವಾರು ಸವಾಲುಗಳನ್ನು ಇತ್ತೀಚೆಗೆ ಗುರುತಿಸಲಾಗುತ್ತಿದೆ. ಈ ಗುಣಾತ್ಮಕ ಸೂಚನೆಗಳು ತಮ್ಮದೇ ಆದ ಪ್ರಾಮುಖ್ಯತೆಯನ್ನು ಹೊಂದಿದ್ದರೂ ಅವನ್ನೇ ನಾವು ಶಿಕ್ಷಣದ ಗಮ್ಯ ಎಂದು ಪರಿಗಣಿಸಬಾರದು. ಉದಾಹರಣೆಗೆ ಸರ್ಕಾರದ ದಾಖಲೆಗಳ ಪ್ರಕಾರ ಈಗ ನಾವು ಸುಮಾರು ಶೇಕಡಾ ನೂರರಷ್ಟು ದಾಖಲಾತಿ ಸಾಧಿಸುತ್ತಿದ್ದೇವೆ. ಆದರೆ ಕಲಿಕೆಯ ಮಟ್ಟ ನಿಕೃಷ್ಟವಾಗಿದ್ದರೆ ದಾಖಲಾತಿಯ ಪ್ರಯೋಜನವಾದರೂ ಏನು? ಬಹುಪಾಲು ಮಕ್ಕಳು ಪ್ರಾಥಮಿಕ ಶಾಲೆಯ ಕೊನೆಯಲ್ಲಿಯೂ ಓದಲು ಕೂಡ ಸಮರ್ಥರಿರುವುದಿಲ್ಲ. ಈ ಹಂತದ ಇನ್ನುಳಿದ ಬಹುತೇಕರು ಕೇವಲ ಪ್ರಾಥಮಿಕ ಓದುವ ಸಾಮರ್ಥ್ಯವನ್ನಷ್ಟೇ ಹೊಂದಿರುತ್ತಾರೆ.

ಒಂದು ಮಗುವು ಸುಲಲಿತವಾಗಿ ಓದಲು ಕಲಿತ ಮೇಲಷ್ಟೇ ಹೆಚ್ಚಿನ ಎಲ್ಲಾ ಶಾಲಾ ಕಲಿಕೆಯು ಆರಂಭವಾಗುವುದು. ಶಾಲೆಯಲ್ಲಿ ಬಹುತೇಕ ಎಲ್ಲವೂ ಪುಸ್ತಕದಿಂದಲೇ ಕೂಡಿರುವುದರಿಂದ ಒಂದು ಮಗುವು ಸುಲಲಿತವಾಗಿ ಓದದಿದ್ದರೆ, ಓದಿದ್ದರ ಅರ್ಥಗ್ರಹಿಕೆ ಆಗದಿದ್ದರೆ ಶಾಲಾ ಕಲಿಕೆ ಆರಂಭವಾಗುವುದಿಲ್ಲ. ಹಾಗಾಗಿ ಯಾವುದೇ ವಿಷಯದ ಕಲಿಕೆಯು ಓದುವುದರ ಮೇಲೆ ಅವಲಂಬಿತವಾಗಿದೆ. ಒಂದು ಮಗುವಿಗೆ ಚೆನ್ನಾಗಿ ಮತ್ತು ಸಮಯಕ್ಕೆ ಸರಿಯಾಗಿ ಓದಲು ಸಾಧ್ಯವಿಲ್ಲದಿದ್ದರೆ ಆ ಮಗುವಿಗೆ ಸಮಾನ ಅವಕಾಶಗಳನ್ನು ನಿರಾಕರಿಸಲಾಗುತ್ತದೆ. ಎಲ್ಲಾ ರೀತಿಯ ಔಪಚಾರಿಕ ಶಿಕ್ಷಣಕ್ಕೂ ಓದುವಿಕೆಯೇ ಮೂಲಾಧಾರ. ಯಾವ ಮಗು ಬೇಗನೆ ಮತ್ತು ಸುಲಲಿತವಾಗಿ ಓದುವುದನ್ನು ಕಲಿಯುವುದಿಲ್ಲವೋ ಅದು ಇತರ ಜ್ಞಾನ ಮತ್ತು ಕೌಶಲ್ಯಗಳಲ್ಲಿ ಸುಲಭವಾಗಿ ಪರಿಣತಿಯನ್ನು ಪಡೆಯಲಾರದು ಮತ್ತು ಶಾಲೆಯಲ್ಲಿ ಚೆನ್ನಾಗಿ ಸಾಧನೆ ಮಾಡಲಾರದು ಎಂಬುದನ್ನು ಧಿರ್ ಜಿಂಗರಾನಿ ಅವರು ಒತ್ತಿ ಹೇಳುತ್ತಾರೆ. ಯಾವ ಮಕ್ಕಳು ತಡವಾಗಿ ಓದಲು ಕಲಿಯುತ್ತಾರೆ ಅಥವಾ ನಿಧಾನವಾಗಿ ಓದುತ್ತಾರೋ ಅವರು ಓದುವುದನ್ನು ತಪ್ಪಿಸಿಕೊಳ್ಳುತ್ತಾರೆ ಮತ್ತು ಅವರು ತಮ್ಮ ತರಗತಿಯ ಪಠ್ಯಪುಸ್ತಕಗಳನ್ನು ಓದಲಾರರು. ಅವರು ಶಾಲೆಯ ಬಗ್ಗೆ ಋಣಾತ್ಮಕ ಭಾವನೆಗಳನ್ನು ಬೆಳೆಸಿಕೊಳ್ಳುತ್ತಾರೆ ಹಾಗೂ ಶಾಲಾ ಶಿಕ್ಷಣವನ್ನು ಪೂರ್ತೈಸುವ ಸಾಧ್ಯತೆಗಳು ಕಡಿಮೆ!

ಹಾಗಾಗಿ ಮೊದಲ ತಲೆಮಾರಿನ ಶಾಲಾ ಮಕ್ಕಳು ಶಾಲೆಗೆ ದಾಖಲಾದರೂ ಕೂಡ ಶಾಲೆಯಿಂದ ಬೇಗನೆ ಹೊರಬೀಳುವುದು ಹೆಚ್ಚು. ಪ್ರಾಥಮಿಕ ಶಾಲಾ ಹಂತದಲ್ಲಿ ಈ ವ್ಯತ್ಯಾಸ ಎದ್ದು ಕಾಣುತ್ತದೆ. ಈ ಮಕ್ಕಳು ಕಡಿಮೆ ಹಾಜರಾತಿ, ಕೆಳಮಟ್ಟದ ಸಾಧನೆ, ಓದಿನಲ್ಲಿ ತೊಂದರೆ ಮತ್ತು ಕಡಿಮೆ ಆತ್ಮಗೌರವ ಹೊಂದಿರುವುದಾಗಿ ವರದಿಗಳು ಸೂಚಿಸುತ್ತವೆ. ಪಠ್ಯಕ್ರಮ, ಮನೆಗೆಲಸವನ್ನು ಪೂರ್ಣಗೊಳಿಸುವುದು, ವೇಳಾಪಟ್ಟಿ ಮತ್ತು ಅಧ್ಯಾಪನಕ್ಕೆ ಹೊಂದಿಕೊಳ್ಳುವುದು ಇವುಗಳಲ್ಲಿ ಮಕ್ಕಳು ಸಮಸ್ಯೆಗಳನ್ನೆದುರಿ–ಸುತ್ತಾರೆ ಎಂದು ಕೂಡಾ ವರದಿ ಹೇಳುತ್ತದೆ. ಇತರ ವಿದ್ಯಾರ್ಥಿಗಳಿಗೆ ಹೋಲಿಸಿದರೆ ಎರಡು ಪಟ್ಟಿಗಿಂತಲೂ ಹೆಚ್ಚಿನ ಸಂಖ್ಯೆಯ ಮೊದಲ ತಲೆಮಾರಿನ ವಿದ್ಯಾರ್ಥಿಗಳು ಶಾಲಾ ಶಿಕ್ಷಣದಲ್ಲಿ ಸವಾಲುಗಳನ್ನು ಎದುರಿಸುತ್ತಾರೆ. ಯಾವುದೇ ಮೊದಲ ತಲೆಮಾರಿನ ಶಾಲಾ ಮಕ್ಕಳ ಕುಟುಂಬದವರು ಅಗತ್ಯ ಜೀವನ ಮಟ್ಟವನ್ನು ಹೊಂದಿರುವುದಿಲ್ಲ ಎಂದು ಸಹ ವರದಿ ಹೇಳುತ್ತದೆ. ಬಡ ಜೀವನಮಟ್ಟವು ಮತ್ತು ಅದರೊಡನೆಯೇ ಬರುವ ಜೀವನ ನಿರ್ವಹಣೆಯ ಹೋರಾಟವು ಈ ಕುಟುಂಬಗಳ ಮಕ್ಕಳಿಗೆ ಶಾಲೆಯಲ್ಲಿ ಹಲವಾರು ಮಿತಿಗಳನ್ನು ಮತ್ತು ತಡೆಗಳನ್ನು ತೋರುತ್ತದೆ ಎಂಬುದನ್ನು ಅಲ್ಲಗಳೆಯಲಾಗದು. ಈ

ಮಕ್ಕಳು ದುಡಿಯಲು ಸಮಯ ಹೊಂದಿಸಬೇಕಾಗಬಹುದು, ಪಠ್ಯಪುಸ್ತಕಗಳಿಗೆ, ಬರಹ ಸಾಮಗ್ರಿಗಳಿಗೆ ಹಾಗೂ ಖಾಸಗೀ ಪಾಠಕ್ಕೆ ಹಣ ಇಲ್ಲದಿರಬಹುದು.

ಅಂತಿಮವಾಗಿ, ಶಾಲೆಗೆ ಹೋಗುವ ಮೊದಲ ತಲೆಮಾರಿನ ಮಕ್ಕಳು, ಶಾಲೆಯಲ್ಲಿ ತಮ್ಮ ಜೊತೆಗಾರರಾದ ಇತರ ಅದೃಷ್ಟಶಾಲಿ ಮಕ್ಕಳಿಗಿಂತ ಹೆಚ್ಚು ಪ್ರತಿಕೂಲ ಪರಿಸರವನ್ನು ಎದುರಿಸುತ್ತಾರೆ. ಇವರಲ್ಲಿ ಹೆಚ್ಚಿನ ಮಕ್ಕಳು ಶಿಕ್ಷಕರು ಮತ್ತು ಪ್ರಾಂಶುಪಾಲರುಗಳಿಂದ ಕಡೆಗಣನೆ ಮತ್ತು ನಿರಾಸಕ್ತಿಯನ್ನು ಅನುಭವಿಸುತ್ತಾರೆ ಎಂಬುದನ್ನು ಹಲವಾರು ತುಲನಾತ್ಮಕ ವರದಿಗಳು ತಿಳಿಸುತ್ತವೆ. ಇವು ಅವರ ಸ್ವಾಭಿಮಾನ ಮತ್ತು ಅಪೇಕ್ಷೆಗಳ ಮಟ್ಟವನ್ನು ಕುಗ್ಗಿಸುವುದಲ್ಲದೇ ಶಾಲೆಯಿಂದ ದೊಡ್ಡ ಸಂಖ್ಯೆಯಲ್ಲಿ ಹೊರಗುಳಿಯಲು ಬಹುಮುಖ್ಯ ಕಾರಣಗಳಲ್ಲೊಂದಾಗಿದೆ. ಈ ಮಕ್ಕಳು ಪೋಷಕರಿಂದ ಅಗತ್ಯವೆನಿಸುವ ಶೈಕ್ಷಣಿಕ ಬೆಂಬಲವನ್ನು ಪಡೆಯುವುದಿಲ್ಲ. ಹಾಗಾಗಿ ಶಾಲೆಯಲ್ಲಿ ಉತ್ತಮ ಶಿಕ್ಷಣ ಪಡೆಯಲು ಅಸಾಧ್ಯವಾಗುತ್ತದೆ. ಇವರು ಮುಂದೆ ತಮ್ಮ ಮಕ್ಕಳ ಶಾಲೆಯ ಕಲಿಕೆಗೆ ಬೆಂಬಲ ನೀಡಲು ಅಸಮರ್ಥರಾಗುತ್ತಾರೆ, ಹೀಗೆ ಇದೊಂದು ವಿಷವರ್ತುಲವಾಗಿ ಪರಿಣಮಿಸುತ್ತದೆ. ಹೆಣ್ಣು ಮಕ್ಕಳ ವಿಚಾರದಲ್ಲಿ ಈ ಪರಿಸ್ಥಿತಿ ಮತ್ತೂ ಶೋಚನೀಯವಾಗಿದ್ದು, ಬುಡಕಟ್ಟು ಹೆಣ್ಣುಮಕ್ಕಳು, ಮಹಿಳೆಯರು ಅತೀ ಕಡಿಮೆ ಸಂಖ್ಯೆಯಲ್ಲಿ ಅಕ್ಷರಸ್ಥರಾಗಿರುವುದೇ ಇದಕ್ಕೆ ಸಾಕ್ಷಿ.

ಈ ವಿಷವರ್ತುಲವನ್ನು ತುಂಡರಿಸುವುದು ಹೇಗೆ? ಬಹುತೇಕ ಮೊದಲ ತಲೆಮಾರಿನ ವಿದ್ಯಾರ್ಥಿಗಳಲ್ಲದ ಕುಟುಂಬಗಳಲ್ಲಿ (ಪೋಷಕರು ಅಥವಾ ಅಜ್ಜಿ ತಾತಂದಿರು ಕನಿಷ್ಠ ಪ್ರೌಢಶಿಕ್ಷಣವನ್ನಾದರೂ ಹೊಂದಿರುತ್ತಾರೆ) ಹಿರಿಯರು ಮಕ್ಕಳಿಗೆ ಶಾಲಾ ಶಿಕ್ಷಣಕ್ಕೆ ಅಗತ್ಯವಾದ ಮೂಲ ಕೌಶಲಗಳಾದ ಓದುವುದು, ಲೆಕ್ಕ ಮತ್ತು ಸಂಖ್ಯೆಗಳನ್ನು ಹೇಳಿಕೊಡುತ್ತಾರೆ. ಸಾಮಾನ್ಯವಾಗಿ ಪೋಷಕರಲ್ಲೊಬ್ಬರು ಅಥವಾ ಹಿರಿಯ ಸಂಬಂಧಿಕರು ಮಗುವಿಗೆ ವೈಯಕ್ತಿಕವಾಗಿ ಮನೆಯಲ್ಲಿ ಬೋಧಿಸುವುದರ ಮೂಲಕ ಅಥವಾ ಅಕ್ಷರಗಳನ್ನು ಹೇಳಿಕೊಡುವುದು, ಭಾಷೆಯಲ್ಲಿನ ಅಕ್ಷರಗಳನ್ನು ಗುರುತಿಸಲು ಮತ್ತು ಬರೆಯಲು ಪ್ರೋತ್ಸಾಹಿಸುವುದು, ವಸ್ತುಗಳ ಕಾಗುಣಿತವನ್ನು ಹೇಳಿಕೊಡುವುದು, ಕುಟುಂಬದವರ ಹೆಸರನ್ನು ಹೇಳಿಕೊಡುವುದು ಮುಂತಾದ ರೂಪಗಳಲ್ಲೂ ಕಲಿಸಲಾಗುತ್ತದೆ. ಇದರ ಜೊತೆಗೆ ಪುಸ್ತಕಗಳು, ನಿಯತಕಾಲಿಕೆಗಳು, ಕ್ಯಾಲೆಂಡರ್‌ಗಳಲ್ಲಿರುವ ಮುದ್ರಿತ ಪದಗಳನ್ನು ಪೋಷಕರು ಮತ್ತು ಕುಟುಂಬದ ಇತರರ ಜೊತೆ ಸೇರಿ ಓದುವುದು, ಆಸಕ್ತಿಕರ ಸುದ್ದಿಯ ತುಣುಕುಗಳನ್ನು ಓದುವುದು ಮುಂತಾದವು ಒಳಗೊಂಡಿರುತ್ತವೆ. ಉತ್ತಮವಾದ ವಾತಾವರಣದ ಜೊತೆಗೆ ಪೋಷಕರ ಕಾಳಜಿ ಮತ್ತು ಆರೈಕೆಯಿಂದೊಡಗೂಡಿದ ನಿರಂತರತೆ ಇವು ಯಾವುದೇ ಶಿಕ್ಷಣ ಶಾಸ್ತ್ರೀಯ ರೀತಿಗಳಿಗಿಂತಲೂ ಹೆಚ್ಚಾಗಿ ಮೊದಲ ತಲೆಮಾರಿನದಲ್ಲದ ಮಗು ಶಾಲೆಗೆ ಬರುವುದಕ್ಕೆ ಮುಂಚೆಯೇ ಓದು ಬರಹವನ್ನು ಕಲಿಯುವಂತೆ ಮಾಡುತ್ತದೆ. ಹೀಗಾಗಿ ಈ ಮಗುವು ಮೊದಲ ತಲೆಮಾರಿನ ಮಕ್ಕಳಿಗಿಂತ ಉತ್ತಮ ಪರಿಸ್ಥಿತಿಯಲ್ಲಿ ಇರುತ್ತದೆ. **ಅಗ್ರಗಾಮಿ** ಅನುಭವದಲ್ಲಿ ಎರಡನೇ ತಲೆಮಾರಿನ ಮಗುವೂ ಕೂಡ ಮೊದಲ ತಲೆಮಾರಿನ ಮಗುವಿಗಿಂತ ಉತ್ತಮ ಕಲಿಕೆಯನ್ನು ಹೊಂದಲು ಇದು ಸಹಾಯ ಮಾಡುತ್ತದೆಯಾದ್ದರಿಂದ ಮೊದಲ ತರಗತಿಗಳಲ್ಲಿ ಉತ್ತಮ ಕಲಿಕಾ ಮಟ್ಟವನ್ನು ಹೊಂದಿರುತ್ತದೆ ಎಂಬುವುದನ್ನು 'ಅಗ್ರಗಾಮಿ'ಯ ಅನುಭವಗಳು ಸೂಚಿಸುತ್ತವೆ.

ಮಕ್ಕಳಿಗೆ ಈ ಕೌಶಲಗಳನ್ನು ಕಲಿಸಲು ಹೆಚ್ಚಿನ ಶಿಕ್ಷಕರಿಗೆ ಸರಿಯಾದ ಸಿದ್ಧತೆ ಇರುವುದಿಲ್ಲ. ಬಹಳಷ್ಟು ಶಿಕ್ಷಕ ತರಬೇತಿ ಕಾರ್ಯಕ್ರಮಗಳಲ್ಲಿ ಓದುವುದನ್ನು ಕಲಿಸುವುದಕ್ಕೆ ಅಗತ್ಯವಾದ ಶಿಕ್ಷಣಶಾಸ್ತ್ರದ ವಿಷಯವು ಅತ್ಯಲ್ಪ ಮಟ್ಟದಲ್ಲಿರುತ್ತದೆ. ಮಗುವು ಸುಲಲಿತ ಓದನ್ನು ಬೆಳೆಸಿಕೊಳ್ಳಲು ಸಹಾಯ ಮಾಡುವಂತೆ ಶಿಶುವಿಹಾರದ ಅಥವಾ ಒಂದನೇ ತರಗತಿಯ ಪಠ್ಯಪುಸ್ತಕಗಳೂ ವಿನ್ಯಾಸಗೊಂಡಿಲ್ಲ.

ಈ ಎಲ್ಲಾ ವಿಷಯಗಳ ಹಿನ್ನೆಲೆಯಲ್ಲಿ **ಅಗ್ರಗಾಮಿ** ಶಾಲೆಯು ಮೊದಲ ತಲೆಮಾರಿನ ಶಾಲಾ ಮಕ್ಕಳ ಕಲಿಕೆಯನ್ನು ಪ್ರಭಾವಿಸುತ್ತಿರುವ ಸಂಕೀರ್ಣ ಸಮಸ್ಯೆಗಳನ್ನು ಪರಿಹರಿಸಲು ಗಮನಹರಿಸಿದೆ. ಮಕ್ಕಳು ಕಲಿಕೆಯಲ್ಲಿ ಹೊಂದಿರುವ ಮಿತಿಗಳು ಮತ್ತು ಎದುರಿಸುತ್ತಿರುವ ಹಲವು ಸವಾಲುಗಳನ್ನು ಶಿಕ್ಷಕರು ಅರ್ಥಮಾಡಿಕೊಳ್ಳುವುದು (ಹಾಜರಾತಿ, ಆರೋಗ್ಯ, ಹಿತಕರ ವಾತಾವರಣ, ಕಲಿಸುವುದರ ಆಶಯಗಳ ಗ್ರಹಿಕೆ, ತೊಡಗಿಸಿಕೊಳ್ಳುವಿಕೆ, ಗಮನ ವಹಿಸುವಿಕೆಗೆ ಒತ್ತು ಇತ್ಯಾದಿ) ಜೊತೆಗೆ ಕಲಿಕೆಯಲ್ಲಿ ಅವರು ಅನುಭವಿಸುತ್ತಿರುವ ತೊಂದರೆಗಳನ್ನು ಗ್ರಹಿಸುವುದು ಮತ್ತು ಇವೆಲ್ಲವನ್ನು ಎದುರಿಸಲು ಅಗತ್ಯವಾದ ರೀತಿ ಮತ್ತು ವಿಧಾನಗಳನ್ನು ಅಭಿವೃದ್ಧಿ-ಪಡಿಸುವುದರೆಡೆಗೆ ಶಿಕ್ಷಣ ಶಾಸ್ತ್ರೀಯ ವಿಧಾನಗಳು ಗಮನಹರಿಸಿವೆ. ಈ ಶಿಕ್ಷಣಶಾಸ್ತ್ರ ವಿಧಾನಗಳು ಸಾಂಪ್ರದಾಯಿಕ ರೀತಿ ಮತ್ತು ವಿಧಾನಗಳನ್ನು ಮೀರಿ ಶಿಕ್ಷಕರು ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುವುದನ್ನು ಪ್ರೋತ್ಸಾಹಿಸುತ್ತದೆ, ಜೊತೆಗೆ ಹೊಸ ವಿನೂತನ ದಾರಿಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ಅಳವಡಿಸಿಕೊಳ್ಳಲು ಅಗತ್ಯವಾದ ಚಿಂತನೆಯ ಬದಲಾವಣೆಗೂ ಸಹಾಯ ಮಾಡುತ್ತದೆ.

ಭಾಷಾ ಶಿಕ್ಷಣದಲ್ಲಿ ಆ ರೀತಿಯ ಒಂದು ಬದಲಾವಣೆ ಸಾಧ್ಯವಾಗಿದೆ. ಶಾಲೆಯಲ್ಲಿ ಭಾಷಾ ಶಿಕ್ಷಣವು ಮಗುವಿಗೆ ಓದುವುದನ್ನು ಕಲಿಸುವುದರ ಮೂಲಕ ಆರಂಭವಾಗುತ್ತದೆ. ರೂಢಿಯಲ್ಲಾದರೆ, ಮಗುವು ಅಕ್ಷರಗಳನ್ನು ಮತ್ತು ಅದರ ವಿವಿಧ ಆಕಾರಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದರ ಮೂಲಕ ಆರಂಭವಾಗುತ್ತದೆ. ಮಗುವಿಗೆ ಇದೊಂದು ಸಾಹಸವೇ ಸರಿ. ಅಂದರೆ, ಆಡುವ ಮಾತು ಮತ್ತು ಅಕ್ಷರಗಳ ಜೊತೆಗೆ ಸಮೀಕರಿಸಿಕೊಳ್ಳಲು ಸಾಧ್ಯವಾಗುವವರೆಗೂ, ಸುಮಾರು ಐವತ್ತಕ್ಕೂ ಹೆಚ್ಚು ಚಿಹ್ನೆಗಳನ್ನು ಅದರ ರೂಪ ಮತ್ತು ಶಬ್ದದ ಜೊತೆಗೆ ನೆನಪಿಟ್ಟುಕೊಳ್ಳುವುದಕ್ಕೆ ಅರ್ಥವಿಲ್ಲ. ಮಗುವಿನ ಚಿಂತನಾ ಕೌಶಲಗಳ ಜೊತೆ ಹೊಂದದ ಕಾರಣ ವರ್ಣಮಾಲೆಯ ಬಲವಂತದ ಉರು ಹೊಡೆಯುವಿಕೆಯಿಂದ ಆರಂಭವಾಗುವ ಸಾಕ್ಷರತೆಯ ಕಲಿಕೆಯು ಆರಂಭಿಕ ಶಾಲಾ ಕಲಿಕೆಯ ಹಂತದಲ್ಲೇ ಸೊರಗುತ್ತದೆ. ವರ್ಣಮಾಲೆಯ ಚಿಹ್ನೆಗಳು ಮಗುವಿನ ತಿಳುವಳಿಕೆ ಜೊತೆ ಯಾವುದೇ ಸಂಬಂಧ ಹೊಂದಿರದ ಕಾರಣ ವರ್ಣಮಾಲೆ ಅಥವಾ ವರ್ಣಮಾಲೆ ಕೇಂದ್ರಿತ ವಿಧಾನಗಳ ಮೂಲಕ ಮಗುವಿನ ಓದು ಮತ್ತು ಭಾಷಾ ಕೌಶಲದ ಬೆಳವಣಿಗೆ ನೇತ್ಯಾತ್ಮಕವಾದದ್ದು ಮತ್ತು ಶ್ರಮದ ಕೆಲಸ.

ಸಮಯ ಕಳೆದಂತೆ ಈ ಪದ್ಧತಿಯು ಪರಿಣಾಮಕಾರಿಯಲ್ಲ ಎಂದು ಸಾಬೀತಾದಾಗ, (ಹಲವು ಮಕ್ಕಳ ಹಲವಾರು ವರ್ಷಗಳನ್ನು ಈ ಹೊತ್ತಿಗೆ ಕಳೆದುಕೊಂಡಿದ್ದೆವು) 'ಎ ಫಾರ್ ಆಪಲ್' ಇತ್ಯಾದಿ ರೀತಿಯಂತೆ ಮಕ್ಕಳು ಪದ ಮತ್ತು ಅಕ್ಷರಗಳ ಸಂಬಂಧಗಳ ಮೂಲಕ ಕಲಿಯುವಂತೆ ಬದಲಾವಣೆ ಮಾಡಿಕೊಳ್ಳಲಾಯಿತು. ಇದಕ್ಕೆ ಪೂರಕವಾಗಿ ಧ್ವನಿಲಕ್ಷಣಗಳಲ್ಲಿ ಇಂಗ್ಲಿಷ್‌ಗಿಂತಲೂ ಹೆಚ್ಚು ವಿವರಗಳುಳ್ಳ (ಹೆಚ್ಚು ನಿರ್ದಿಷ್ಟವಾಗಿಯೂ ಇರುವ) ಭಾಷೆಗಳಲ್ಲಿ ಹಲವಾರು ಶಿಶು ಗೀತೆಗಳನ್ನು ಬರೆಯಲಾಗಿದೆ. ಈ ವಿಧಾನದಲ್ಲಿ ಕಲಿಸುವುದು ಬಹಳವೇ ಕಠಿಣವೆಂದು ಶಿಕ್ಷಕರಿಗೆ ತೋರಿದ್ದರಿಂದ ಓದುವುದನ್ನು ಕಲಿಯಲು ಆಗಿಲ್ಲ. ಈ ಪದ್ಧತಿಯಲ್ಲಿ ಕಲಿಕೆಗೆ ನಿರ್ದಿಷ್ಟ ತರ್ಕವೂ ಇಲ್ಲ, ಅಂದರೆ A ಕೇವಲ ಪದದ ಮೊದಲ ಧ್ವನಿಯನ್ನು

ಮಾತ್ರ ಸೂಚಿಸುತ್ತದೆ ಮತ್ತು ಮಗುವು ಒಂದು ಪದದಲ್ಲಿರುವ ಇತರ ಧ್ವನಿಗಳಿಗೆ ಅಕ್ಷರವನ್ನು ಹೊಂದಿಸಿಕೊಳ್ಳಲು ಹೆಣಗುತ್ತದೆ.

ನಂತರದಲ್ಲಿ ಇಡಿಯ ಭಾಷಾ ಕಲಿಕೆಯನ್ನು ಒಟ್ಟಾಗಿ ನೋಡುವ ಮೂಲಕ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಚಿಂತಿಸಿದೆವು. ಮಗು ಶಾಲೆಗೆ ಬರುವ ವೇಳೆಗೆ ಅದಕ್ಕೆ ಒಂದು ಭಾಷೆ ತಿಳಿದಿರುತ್ತದೆ. ಅಂದರೆ ಸುಮಾರು 1500ರಿಂದ 2000ದಷ್ಟು ಪದಸಂಪತ್ತನ್ನು ಆ ಮಗು ಹೊಂದಿರುತ್ತದೆ. ಆದೇಶಗಳಿಂದ ಹಿಡಿದು ಪ್ರಶ್ನೆ, ಭಾವನೆಗಳವರೆಗೆ; ಘಟನೆಗಳ ವಿವರಣೆ, ಕಥೆ ಹೇಳುವುದು ಇತ್ಯಾದಿಗಳ ಮೂಲಕ ಪದಗಳನ್ನು ಆರಿಸಿ ಜೋಡಿಸಲು, ತಿಳಿಹೇಳಲು ಮತ್ತು ಅರ್ಥ ಮಾಡಿಕೊಳ್ಳಲು ಆ ಮಗು ಶಕ್ತವಾಗಿರುತ್ತದೆ. ಮಗುವು ಸರಳ ಹಾಡು ಮತ್ತು ಪದ್ಯಗಳನ್ನು ಅರ್ಥಮಾಡಿಕೊಳ್ಳುತ್ತದೆ, ಹಾಡುತ್ತದೆ ಮತ್ತು ಆನಂದಿಸುತ್ತದೆ, ಭೂತ ವರ್ತಮಾನ ಮತ್ತು ಭವಿಷ್ಯತ್ ಕಾಲಗಳ ವ್ಯತ್ಯಾಸವನ್ನು ತಿಳಿದುಕೊಳ್ಳುತ್ತದೆ, ಅಲ್ಲದೆ ಸಂತೋಷ, ದುಃಖ, ಆನಂದ ಮುಂತಾದ ಅಮೂರ್ತ ಭಾವನೆಗಳನ್ನು ದಾಟಿಸಲು ಸಮರ್ಥವಾಗಿರುತ್ತದೆ. ಕುಟುಂಬದವರ ಮತ್ತು ಗ್ರಾಮಸ್ಥರ ಹೆಸರುಗಳನ್ನು ನೆನಪಿನಲ್ಲಿಡುತ್ತದೆ. ವ್ಯಕ್ತಿ ಹಾಗೂ ಸ್ಥಳಗಳನ್ನು ಗುರುತಿಸಲು ಶಕ್ತವಾಗಿರುತ್ತದೆ. ಈ ಕೌಶಲಗಳು ಪ್ರಾಥಮಿಕ ಅಕ್ಷರ ಕಲಿಕೆ ಅಥವಾ ಓದು ಮತ್ತು ಬರಹಕ್ಕೆ ಅಗತ್ಯವಾಗಿ ಬೇಕಾದ್ದಕ್ಕಿಂತ ಹೆಚ್ಚು ಸಂಕೀರ್ಣವಾದದ್ದು.

ಮಗುವಿನ ಈ ತಿಳಿವು ಮತ್ತು ಸಾಮರ್ಥ್ಯವನ್ನು ಮಗು ಶಾಲೆಗೆ ಬರಲಾರಂಭಿಸಿದ ಮೇಲೆ ಬಳಸಿ ಕಲಿಕೆಯನ್ನು ಬೆಳೆಸಬಹುದೇ ಎಂದು ನಮ್ಮನ್ನೇ ನಾವು ಕೇಳಿಕೊಂಡೆವು. ಅಂದರೆ ಯಾವ ಮಗು ಶಾಲೆ ಆರಂಭಿಸುತ್ತಿದೆಯೋ ಅದು ಸಾಧಾರಣ ಆಕೃತಿಗಳಾದ ಹೂವುಗಳು, ತರಕಾರಿಗಳು ಬರೆಯುವುದರಿಂದ ಮುಂದುವರೆದು ಸ್ಲೇಟಿನ ಮೇಲೆ ಪ್ರಾಸ ಪದ್ಯಗಳನ್ನು, ಕ್ರಿಯಾ ಹಾಡುಗಳನ್ನು, ತನ್ನ ಹೆಸರಿನಿಂದಲೇ ಆರಂಭಿಸಿ ಪರಿಚಿತವಾದ ಹೆಸರುಗಳನ್ನು, ಚಿತ್ರದ ಹೆಸರುಗಳು, ತನ್ನ ಬಗ್ಗೆ, ನಿತ್ಯ ಬದುಕಿನ ವಿಷಯಗಳ ಬಗ್ಗೆ ಸಣ್ಣ ವಾಕ್ಯಗಳು, ಪರಿಚಿತವಾದ ಪದ್ಯಗಳು ಹೀಗೆ ಬರೆಯಲು ಕಲಿಯಬಹುದೇ?. ಮಗುವು ತನ್ನ ಹೆಸರು, ತನ್ನ ಪಾಲಕರ ಹೆಸರು, ತನ್ನ ಒಡಹುಟ್ಟಿದವರ ಹೆಸರು ಹೀಗೆ ನೇರವಾಗಿ ಸಂಬಂಧವಿರುವುದನ್ನು ಬರೆದ ತಕ್ಷಣ ಶಾಲೆಯ ಮತ್ತು ತರಗತಿಯ ಜೊತೆಗೆ ಆತ್ಮೀಯ ಸಂಬಂಧ ಏರ್ಪಡುತ್ತದೆ, ರೋಮಾಂಚನದ ಅನುಭವವಾಗುತ್ತದೆ. ಮಗು ಮನೆಗೆ ಹೋದಮೇಲೆ ಇದನ್ನೆಲ್ಲ ಬರೆದು ತನ್ನ ಕುಟುಂಬದವರಿಗೆ ತೋರಿಸಿದಾಗ ಬರುವ ಉತ್ತಮ ಪ್ರೋತ್ಸಾಹ, ಮೆಚ್ಚುಗೆ ತರಗತಿಯ ಕಲಿಕೆಯನ್ನು ಮತ್ತಷ್ಟು ಹೆಚ್ಚು ಅರ್ಥಪೂರ್ಣಗೊಳಿಸುತ್ತದೆ, ಇಂತಹ ಕಲಿಕೆಗೆ ಮತ್ತೆ ಮತ್ತೆ ತೆರೆದುಕೊಳ್ಳಲು ಹುರಿದುಂಬಿಸುತ್ತದೆ.

ಕಿರಿಯ ತರಗತಿಗಳ ಶಿಕ್ಷಕರೊಡನೆ ಈ ವಿಚಾರಗಳ ಬಗ್ಗೆ ಹಲವಾರು ಬಾರಿ ಚರ್ಚೆ ನಡೆಸಲಾಯಿತು. ಮಕ್ಕಳಿಗೆ ಅರ್ಥಪೂರ್ಣ ಓದು–ಬರಹ ಕಲಿಸುವಲ್ಲಿನ ಸವಾಲುಗಳು, ಅದಕ್ಕೆ ಕಾರಣಗಳು, ಪ್ರತಿಕ್ರಿಯೆಗಳು ಮತ್ತು ಬುಡಕಟ್ಟು ಮಕ್ಕಳು ಶಾಲೆಗೆ ಬಂದಾಗ ಎದುರಿಸುವ ಭಾಷಾ ಸಮಸ್ಯೆಗಳು ಹೀಗೆ ಹಲವು ವಿಚಾರಗಳು ಕೆಲವು ತಿಂಗಳುಗಳ ಕಾಲದ ಔಪಚಾರಿಕ ಮತ್ತು ಅನೌಪಚಾರಿಕ ಚರ್ಚೆಗಳ ವಿಷಯವಾದವು. ಮಕ್ಕಳಿಗೆ ಕಂಠಪಾಠಕ್ಕಿಂತ ಪರಿಚಿತ ಪದಗಳ ಮೂಲಕ ಕಲಿಯಲು ಅನುವಾಗುವಂತೆ ಶಿಕ್ಷಕರು ಪದಭಂಡಾರ ಹಾಗೂ ಬೋಧನಾ ಸಾಮಗ್ರಿಗಳನ್ನು ತಯಾರಿಸಿಕೊಂಡರು.

ಆದರೂ ತರಗತಿಗಳಲ್ಲಿ ಶಿಕ್ಷಕರು ಸಾಂಪ್ರದಾಯಿಕವಾದ ಅಕ್ಷರ ಕೇಂದ್ರಿತ ಪದ್ಧತಿಗಳಿಗೆ ಶರಣು ಹೋದ ಕಾರಣ ಸಣ್ಣ ಮಟ್ಟದ ಬದಲಾವಣೆ ಸಾಧ್ಯವಾಯಿತಷ್ಟೇ. ಇಷ್ಟೆಲ್ಲಾ ಸಂವಾದಗಳು ಮತ್ತು ಅರ್ಥ ಗ್ರಹಿಕೆಯ ನಂತರವೂ ಹೆಚ್ಚಿನ ಸೃಜನಾತ್ಮಕ, ಮಗುಕೇಂದ್ರಿತ ವಿಧಾನಕ್ಕೆ ಬದಲಾಗಲು ಅಷ್ಟೊಂದು ಕಷ್ಟವೇಕೆ? ಶಿಕ್ಷಕರಿಗೆ ಮಕ್ಕಳನ್ನು ಈ ಪದ್ಧತಿಯ ಪ್ರಕಾರ ತೊಡಗಿಸಿಕೊಳ್ಳಲು ಅಗತ್ಯವಾದ ಸಂಪನ್ಮೂಲಗಳು ಸಾಕಷ್ಟು ದೊರಕಲಿಲ್ಲ ಎನ್ನುವುದನ್ನು ಕಂಡುಕೊಳ್ಳಲಾಯಿತು. ಹಾಗಾಗಿಯೇ ಅವರು ಉರು ಹೊಡೆಯುವುದಕ್ಕೇ ಹಿಂದಿರುಗಬೇಕಾಯಿತು. ಮೊದಲಿಗೆ ಅಕ್ಷರಗಳನ್ನು ಕಲಿಯದೆಯೇ ಮಕ್ಕಳಿಗೆ ಕಲಿಯಲು ಸಾಧ್ಯ ಎಂಬುದನ್ನು ನಂಬಲು ಕೆಲವು ಶಿಕ್ಷಕರು ಸಿದ್ಧರಿರಲಿಲ್ಲ. ಕೆಲವು ತರಗತಿಗಳಲ್ಲಿ ಎರಡು ಭಾಷೆಯ ಮಕ್ಕಳಿದ್ದರೂ ಅದರಲ್ಲಿ ಅರ್ಧದಷ್ಟು ಮಕ್ಕಳು ಬುಡಕಟ್ಟು ಭಾಷೆಯನ್ನು ಮಾತನಾಡುತ್ತಿದ್ದರು ಹಾಗೂ ರಾಜ್ಯಭಾಷೆಯಾದ ಒಡಿಯಾವನ್ನು ಅರ್ಥವೂ ಮಾಡಿಕೊಳ್ಳಲಾಗುತ್ತಿರಲಿಲ್ಲ.

ಈ ಸಂವಾದಗಳ ನಂತರ, ಎಲ್ಲರೂ ಜೊತೆಗೂಡಿ ಹೆಚ್ಚು ಮಗುಕೇಂದ್ರಿತವಾದ ಪಾಠ ಕ್ರಮಕ್ಕೆ ಬದಲಾಗಲು ನೆರವಾಗುವಂಥ ಒಂದು ಪುಸ್ತಕವನ್ನು ರೂಪಿಸಿದರು. ಇದರೊಟ್ಟಿಗೆ ಬುಡಕಟ್ಟು ಮಕ್ಕಳು ಇದ್ದ ತರಗತಿಗಳಲ್ಲಿ ಕಲಿಸಲು (ಬುಡಕಟ್ಟು ಭಾಷೆಯು ಮೊದಲ ಭಾಷೆಯಾಗಿದ್ದ) ಶಿಕ್ಷಕರನ್ನು ನೇಮಿಸಲಾಯಿತು. ಶಿಕ್ಷಕರು ತಾವು ಹೇಗೆ ಪುಸ್ತಕವನ್ನು ಬಳಸುತ್ತಾರೆ, ವಿವಿಧ ಮಾತೃಭಾಷೆಯ ಮಕ್ಕಳಿಗೆ ಪದ ಮತ್ತು ಚಿತ್ರದ ಆಟಗಳ ಮೂಲಕ ಹೇಗೆ ನೆರವಾದರೆಂದು ಹಲವಾರು ತರಬೇತಿ ಕಾರ್ಯಕ್ರಮಗಳಲ್ಲಿ ಶಿಕ್ಷಕರು ಹಂಚಿಕೊಂಡರು.

ಜೊತೆಗೆ ತರಗತಿ ಕೊಠಡಿಯ ಸಮಸ್ಯೆಗಳನ್ನೂ ಚರ್ಚಿಸಲಾಯಿತು. ಈ ಸಂವಾದಗಳು ಮಕ್ಕಳೊಳಗೇ ಇರುವ ಸಂಪನ್ಮೂಲಗಳನ್ನು ಗುರುತಿಸಲು ಸಹಾಯ ಮಾಡಿದವು. ಮಕ್ಕಳು ಒಬ್ಬರಿಗೊಬ್ಬರು ಸಹಾಯ ಮಾಡಲು ತೋರುವ ಉತ್ಸುಕತೆ ಉದಾಹರಣೆಗೆ ತನ್ನ ಕೆಲಸ ಮುಗಿದ ನಂತರ ಮಗುವು ಜೊತೆಗಾರರಿಗೆ ಸಹಾಯ ಮಾಡಲು ತೊಡಗುವಂಥ ತಾವು ಮಕ್ಕಳಲ್ಲಿ ಗಮನಿಸಿದ ಕೆಲ ವಿಚಾರಗಳನ್ನು ಶಿಕ್ಷಕರು ಹಂಚಿಕೊಂಡರು. ಅಲ್ಲದೆ ಅವರು ಜೊತೆಗಾರರಿಂದ ಕಲಿಯಲು ಹೆಚ್ಚು ಆಸಕ್ತರಾಗಿದ್ದರು ಮತ್ತು ತಮ್ಮ ಶಿಕ್ಷಕರಿಗಿಂತಲೂ ಮಿಗಿಲಾಗಿ ತಮ್ಮ ಜೊತೆಗಾರರ ಮಾತುಗಳನ್ನು ಹೆಚ್ಚಾಗಿ ಆಲಿಸಿದರು! ಈ ಸಂವಾದಗಳು ಮಕ್ಕಳನ್ನು ಹೆಚ್ಚು ಅರಿತುಕೊಳ್ಳಲು, ನಮ್ಮ ಅಧ್ಯಾಪನ ಮತ್ತು ಬೋಧನಾ ಸಾಮಗ್ರಿಗಳನ್ನು ಸುಧಾರಿಸಲು ನೆರವಾದವು. ಮೇಲಿನ ಮೊದಲ ಪುಸ್ತಕದ ನಂತರದಲ್ಲಿ ಕ್ರಿಯಾಪುಸ್ತಕ ಮಾರ್ಗದರ್ಶಿಯನ್ನು ವಿನ್ಯಾಸಗೊಳಿಸಲಾಯಿತು. ಈ ಪುಸ್ತಕವು ಮಕ್ಕಳು ರಚನಾತ್ಮಕವಾಗಿ ಮತ್ತು ಸೃಜನಾತ್ಮಕವಾಗಿ ತೊಡಗಿಕೊಳ್ಳಲು ಮತ್ತು ಹಂತಹಂತವಾಗಿ ಅಕ್ಷರ ಜ್ಞಾನ ಮತ್ತು ಓದುವುದಕ್ಕೆ ಅನುವಾಗುವಂಥ ಚಟುವಟಿಕೆಗಳನ್ನು ಮಕ್ಕಳಿಗೆ ಮಾಡಿಸಲು ಶಿಕ್ಷಕರಿಗೆ ಸಹಾಯ ನೀಡಿತು.

ಒಂದನೇ ತರಗತಿಯ ಮಕ್ಕಳಿಗೂ ನೀಡಿದ ಸಚಿತ್ರ ಕ್ರಿಯಾಪುಸ್ತಕ ಮಾರ್ಗದರ್ಶಿಯು ಮಕ್ಕಳಿಗೆ ಬಹಳ ಆಕರ್ಷಣೀಯವಾಗಿತ್ತು. ಬಣ್ಣ ತುಂಬುವುದು, ಚಿತ್ರಗಳನ್ನು ಬರೆಯುವುದು, ಪದಗಳ ಆಟ ಇವುಗಳಿಂದ ಕೂಡಿದ ಪುಸ್ತಕವು ಮಕ್ಕಳನ್ನು ಕ್ಷಣದಲ್ಲಿ ಹಿಡಿದಿಟ್ಟುಕೊಂಡು ಹೆಚ್ಚು ರಚನಾತ್ಮಕ ರೀತಿಯಲ್ಲಿ ಪ್ರೇರೇಪಿಸಿತು. ಈ ಪುಸ್ತಕವು ಮುಂದಿನ ಆಟಗಳಿಗೆ, ಸಮಸ್ಯೆಗಳ ನಿವಾರಣೆಗೆ ಮತ್ತು ಕಪ್ಪು ಹಲಗೆಯ ಚಟುವಟಿಕೆಗಳನ್ನು ವಿನ್ಯಾಸ ಮಾಡಲು ಸಹಾಯ

ಮಾಡಿತು. ಈ ಪುಸ್ತಕದಲ್ಲಿದ್ದ ಚಟುವಟಿಕೆಗಳನ್ನು ಮಾಡಲು ಮಕ್ಕಳಿಗೆ ಎರಡು ವರ್ಷಗಳ ಅವಧಿ ಬೇಕಾಗುತ್ತದೆ ಮತ್ತು ಕೊನೆಗೆ ಮಕ್ಕಳು ಓದುವುದರ ಮೂಲಕ ಕೌಶಲವನ್ನು ಹೊಂದುತ್ತಾರೆ ಎಂಬುದು ಶಿಕ್ಷಕರಿಗೆ ತಿಳಿಯಿತು. ಮುಂದಿನ ತರಗತಿಗಳಲ್ಲಿ ಜೋರಾಗಿ ಓದುವುದು ಕಪ್ಪುಹಲಗೆಯ ಮೂಲಕ ಓದು ಹಾಗೂ ಅರ್ಥಗ್ರಹಿಕೆಯ ಅಭ್ಯಾಸ ಮತ್ತು ಓದುವಿಕೆಯ ಮೂಲಕ ಮಕ್ಕಳ ಓದು ಹಂತಹಂತವಾಗಿ ಹೆಚ್ಚಿಸುವಂತೆ ಮಾಡಲಾಯಿತು.

ಎಲ್ಲ ಮಕ್ಕಳೂ ಒಂದೇ ವೇಗದಲ್ಲಿ ಕಲಿಯಲಾರರು. **ಅಗ್ರಗಾಮಿ** ಶಾಲೆಯಲ್ಲಿ ಪ್ರತಿ ಮಗುವೂ ತನ್ನ ವೇಗದಲ್ಲೇ ಕಲಿಯಲು ಮತ್ತು ಮೇಲೆ ಹೇಳಿದಂತೆ, ತಮ್ಮ ಜೊತೆಗಾರರು ಕಲಿಯಲೂ ಸಹಾಯ ಮಾಡಲು ಉತ್ತೇಜಿಸಲಾಗುತ್ತದೆ. ಯಾವ ಮಗುವೂ ಹೊರಗುಳಿಯದಂತಹ ಸಮೂಹ ಪರಿಶ್ರಮದ ಒಂದು ಪರಿಸರವನ್ನು ಇದು ಸೃಷ್ಟಿಸುತ್ತದೆ. ಇಲ್ಲಿ ಶಿಕ್ಷಕರು ಮಕ್ಕಳಿಗೆ ಪಾಠವನ್ನು ವಿವರಿಸುವುದರ ಬದಲಿಗೆ, ಪ್ರಶ್ನೆಗಳನ್ನು ಕೇಳುವ ಮೂಲಕ ಪುಸ್ತಕದಲ್ಲಿರುವ ಪಾಠವನ್ನು ಅರ್ಥ ಮಾಡಿಕೊಳ್ಳಲು, ಪದಗಳನ್ನು ಗುರುತಿಸುವ ಮೂಲಕ, ಪ್ಯಾರಾಗಳ ಪ್ರಕಾರ ದೃಶ್ಯ ಸ್ಮರಣೆಯನ್ನು ಪರೀಕ್ಷಿಸುವ ಅಭ್ಯಾಸಗಳು, ಮಕ್ಕಳು ಓದುವುದು ಮತ್ತು ಶಿಕ್ಷಕರು ಹೇಳಿದ ಪದಗಳನ್ನು ತಕ್ಷಣ ಮಕ್ಕಳು ಗುರುತಿಸುವುದು, ಸ್ವಯಂ ಓದು ಮುಂತಾದವುಗಳ ಮೂಲಕ ಕಲಿಕೆಗೆ ಸಹಾಯ ಮಾಡಲಾಗುತ್ತದೆ.

**ಅಗ್ರಗಾಮಿ** ಶಾಲೆಯ ಮಕ್ಕಳಲ್ಲಿ ಒಂದು ಮತ್ತು ಎರಡನೇ ತರಗತಿಯಿಂದಲೇ ಸರಳ ಮತ್ತು ಮೋಜಿನ ವಿಧಾನಗಳ ಮೂಲಕ ಓದುವ ಮತ್ತು ಭಾಷಾ ಕೌಶಲಗಳನ್ನು ಬೆಳೆಸಲು ಈ ಎಲ್ಲವೂ ಸಹಾಯ ಮಾಡಿದೆ. ಹೀಗೆ, ತಮ್ಮ ಆಯ್ಕೆಯ ಮತ್ತು ತಮ್ಮ ಆಸಕ್ತಿಯ ವಿಷಯಗಳನ್ನು ಓದುವುದರಲ್ಲಿ ಸಂತೋಷವಿದೆ ಎಂದು ಅರಿತಾಗ ಮಕ್ಕಳು ಎಲ್ಲ ವಿಷಯಗಳನ್ನು ಉತ್ಸಾಹದಿಂದ ಕಲಿಯುವವರಾಗಿದ್ದಾರೆ. ಇದೇ ಹೊತ್ತಿಗೆ ಅವರೆಲ್ಲರೂ ಉತ್ಸುಕ ಬರಹಗಾರರಾಗಿದ್ದು, ತಮ್ಮನ್ನು ಪ್ರಕಟಪಡಿಸಲು ಉತ್ಸುಕರಾಗಿದ್ದು ಶಾಲೆಯ ಜೀವನದ ಘಟನೆಗಳು ಮತ್ತು ಅನುಭವಗಳ ಬಗ್ಗೆ ವಾರ್ಷಿಕ ವರದಿ ಮತ್ತು ವಾರ್ತಾಪತ್ರಗಳಲ್ಲಿ ಬರೆಯುತ್ತಾರೆ. **ಡಂಗಾರ್ ಕಥಾ** ಎಂದು ಹೆಸರಿಸಿರುವ ವಾರ್ತಾ ಪತ್ರದಲ್ಲಿ ಮಕ್ಕಳ ಹಳ್ಳಿಯ ಬದುಕು, ಅವರ ಕಲ್ಪನೆಗಳು ಮತ್ತು ಅವರ ಆಶಯ ಮತ್ತು ಕಲ್ಪನೆಯ ಭವಿಷ್ಯ ಇವುಗಳ ಬಗ್ಗೆ ಸ್ಥೂಲ ನೋಟ ಇರುತ್ತದೆ. ಶಿಕ್ಷಕರ ಸಲಹೆಯ ಮೇರೆಗೆ ವರ್ಣರಂಜಿತ, ಆಕರ್ಷಕ ಚಿತ್ರಗಳ ಮೂಲಕ ತಮ್ಮ ಬರಹಗಳನ್ನು ಚಿತ್ರಿಸಲು ಆರಂಭಿಸಿದ್ದಾರೆ. ಚಿತ್ರ ಬರೆಯುವ ವಿಷಯದಲ್ಲಿ ಹೆಚ್ಚಿನ ಬೋಧನೆ ಇಲ್ಲದೆ ಕೇವಲ ಅವರ ಕಲ್ಪನೆಗಳು ಮುಕ್ತವಾಗಿ ಚಿತ್ರಿತವಾಗಲು ಅನುವು ಮಾಡಿಕೊಟ್ಟಿರುವುದರಿಂದಲೇ **ಅಗ್ರಗಾಮಿ** ಶಾಲೆಯ ಮಕ್ಕಳ ಕಲ್ಪನೆಗಳು ಮತ್ತು ಚಿತ್ರ ಬರೆಯುವ ಕಲೆ ಅರಳಿವೆ ಎಂದು ಹೇಳಲು ಹೆಮ್ಮೆಯಾಗುತ್ತದೆ.

**ಅಗ್ರಗಾಮಿ** ಶಾಲೆಯ ನಮ್ಮ ಈ ಅನುಭವಗಳು ನಮಗೆ ಸರ್ಕಾರೀ ಶಾಲೆಗಳೊಡನೆ ತೊಡಗಿಸಿಕೊಳ್ಳಲೂ ಸಹಾಯ ಮಾಡಿವೆ. ಈ ರೀತಿ ಮತ್ತು ವಿಧಾನಗಳಲ್ಲಿ ತರಬೇತಾದ ಯುವಕರನ್ನು ಹದಿನೆಂಟು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಆರಂಭಿಕ ತರಗತಿಗಳಲ್ಲಿನ ಕಲಿಕೆಯನ್ನು ಹೆಚ್ಚಿಸುವ ದೃಷ್ಟಿಯಿಂದ ನಿಯೋಜಿಸಲಾಯಿತು. ಹಿಂದಿನ ಅನುಭವದ ಪ್ರಕಾರ ಮೂಲ ಪರಿಕಲ್ಪನೆಗಳ ಅರ್ಥೈಸುವಿಕೆ ಮತ್ತು ತರಬೇತಿಗೆ ಹೆಚ್ಚಿನ ಗಮನ ನೀಡಲಾಯಿತು. ಮಕ್ಕಳು ಮತ್ತು ತರಬೇತಿ ನಿರತರಿಗೆ ಕ್ರಿಯಾಪುಸ್ತಕ ಮಾರ್ಗದರ್ಶಿಯನ್ನು ನೀಡಲಾಯಿತು. ಜೊತೆಗೆ **ಅಗ್ರಗಾಮಿ** ಶಾಲೆಗಳಲ್ಲಿ ಆರಂಭಿಕ ತರಗತಿಗಳ ಬೋಧನೆಯ ಬಗ್ಗೆ ಹಲವು ಅವಲೋಕನ ಸಭೆಗಳನ್ನು ನಡೆಸಲಾಯಿತು. ಒಡಿಶಾದ ಮೂರು ಬುಡಕಟ್ಟು ಜಿಲ್ಲೆಗಳಾದ ಕೋರಾಪಟ್, ರಾಯಗಢ ಮತ್ತು ನಬ್‌ರಂಗ್‌ಪುರಗಳಲ್ಲಿ ಎರಡು ವರ್ಷಗಳ ಪರಿಶ್ರಮದ ಫಲವಾಗಿ ಅದ್ಭುತ ಫಲಿತಾಂಶಗಳನ್ನು ನೀಡಿದವು. ಎರಡನೇ ತರಗತಿಯ ಕೊನೆಯ ವೇಳೆಗೆ ಸುಮಾರು ಶೇಕಡಾ ೮೦ರಷ್ಟು ಮಕ್ಕಳು ಓದಬಲ್ಲವರಾಗಿದ್ದರು ಎಂದು ಸ್ವತಂತ್ರ ಅಧ್ಯಯನಗಳು ತಿಳಿಸುತ್ತಿವೆ.

ಈ ಅನುಭವವು ನಮಗೆ ಬಹಳ ದೊಡ್ಡ ಕಲಿಕೆಯ ವ್ಯಾಪ್ತಿಯನ್ನು ನೀಡಿದೆಯಾದರೂ, ನಾವು ಶಿಕ್ಷಕರಿಗೆ ಬೆಂಬಲ ಮತ್ತು ಪರಿಣಾಮಕಾರಿ ತರಬೇತಿ ನೀಡುವ ವಿಚಾರಕ್ಕೆ ಹೆಚ್ಚು ಒತ್ತು ನೀಡಬೇಕಾಗಿದೆ. ಶಿಕ್ಷಕರ ಮಾತುಗಳನ್ನು ಆಲಿಸುವುದು, ಅವರ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವುದು ಮತ್ತು ಪರಿಹಾರದೆಡೆಗೆ ಅವರು ಮುಂದುವರೆಯಲು ಅವರಿಗೆ ಅಗತ್ಯ ಬೆಂಬಲ ನೀಡುವುದು ಇವುಗಳು ತುಂಬಾ ಮುಖ್ಯ. ಸರ್ಕಾರಿ ವ್ಯವಸ್ಥೆಯಲ್ಲಿ ಶಿಕ್ಷಕರು ಅಧೀನರು, ಸೇವಾ ನಿಯಮಗಳನ್ನು ಅನುಸರಿಸಬೇಕು ಮತ್ತು ಮೇಲಧಿಕಾರಿಗಳ ಆಜ್ಞೆಯನ್ನು ಪಾಲಿಸಬೇಕು. ಉತ್ತಮ ಬೋಧನಾ ವಿಧಾನಗಳನ್ನು ಅಭಿವೃದ್ಧಿಪಡಿಸಿ ಕಲಿಕಾ ಫಲಿತಗಳನ್ನು ಉತ್ತಮ ಪಡಿಸಲು ಇದೇ ಬಲು ದೊಡ್ಡ ಅಡಚಣೆಯಾಗಿದೆ. ಇವುಗಳನ್ನೂ ದಾಟಿ ಸರ್ಕಾರೀ ಪ್ರಾಥಮಿಕ ಶಾಲೆಯ ಶಿಕ್ಷಕರಿಗೆ ಜ್ಞಾನ ಮತ್ತು ಕೌಶಲಗಳೊಂದಿಗೆ ಸೃಜನಾತ್ಮಕ ನೆಲೆಗಳನ್ನು ಮುಟ್ಟಲು ಸಹಾಯ ಮಾಡಬೇಕಿದೆ. ಇಂದಿನ ನಮ್ಮ ವ್ಯವಸ್ಥೆಯನ್ನು ಗಮನಿಸಿದರೆ ಇದೊಂದು ಅಸಾಧ್ಯ ಕೆಲಸವೇ ಎನಿಸಬಹುದು. ಆದರೆ, ಸಣ್ಣ ಪ್ರಮಾಣದಲ್ಲಿ ಆರಂಭಿಸಿ ನಮ್ಮ ಸಾಧನೆ ಮತ್ತು ಹರಹುಗಳನ್ನು ವಿಸ್ತರಿಸುತ್ತಾ ಹೋದರೆ, ಸರ್ವರಿಗೂ ಗುಣಮಟ್ಟದ ಶಿಕ್ಷಣದೆಡೆಗೆ ಮುನ್ನಡೆಯಬಹುದೇನೋ.



**ವಿದ್ಯಾ ದಾಸ್** ಅವರು ಸ್ವಯಂಸೇವಾ ಸಂಸ್ಥೆ ಅಗ್ರಗಾಮಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಮಹಿಳಾ ಹಕ್ಕುಗಳು, ಜೀವನಮಟ್ಟ, ಶಿಕ್ಷಣ ಕ್ಷೇತ್ರಗಳಲ್ಲಿ ಇವರ ಕಾರ್ಯಗಳಿಗಾಗಿ ಗುರುತಿಸಲಾಗುತ್ತದೆ. ಬುಡಕಟ್ಟು ಶಿಕ್ಷಣ ಮತ್ತು ಬುಡಕಟ್ಟು ಹಕ್ಕುಗಳ ಕುರಿತು ಇವರ ಹಲವು ಬರಹಗಳು ಪ್ರಕಟಗೊಂಡಿವೆ. 'ಅಗ್ರಗಾಮಿ'ಯ ದೂರದೃಷ್ಟಿಯಂತೆ ಅವರು ಹಸಿವು ಮತ್ತು ಅನ್ಯಾಯವಿಲ್ಲದ ಸಮಾಜ ನಿರ್ಮಾಣದ ನಿಟ್ಟಿನಲ್ಲಿ ಸಕ್ರಿಯರಾಗಿದ್ದಾರೆ. ವಿದ್ಯಾ ದಾಸ್ ಅವರನ್ನು ಇಲ್ಲಿ vidhyadas@agragamee.org ಸಂಪರ್ಕಿಸಬಹುದು.

ಅನುವಾದ: **ಜನಾರ್ದನ ಚನ್ನಗಿರಿ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಕಲಿಕೆಯ ಸಾಧನವಾಗಿ ನಿಯತಕಾಲಿಕೆಗಳು

ವಿನತಾ ವಿಶ್ವನಾಥನ್ ಮತ್ತು ರುಚಿ ಶೇವಡೆ

**ಮಕ್ಕಳ ಪತ್ರಿಕೆಗಳ ಸಂಕ್ಷಿಪ್ತ ಇತಿಹಾಸ**

18ನೆಯ ಶತಮಾನದಷ್ಟು ಹಿಂದೆಯೇ ಮಕ್ಕಳನ್ನು ತನ್ನ ಓದುಗರನ್ನಾಗಿ ದೃಷ್ಟಿಯಲ್ಲಿಟ್ಟುಕೊಂಡು ಕೆಲವು ನಿಯತಕಾಲಿಕೆಗಳು ಆರಂಭವಾದದ್ದನ್ನು ಕಾಣಬಹುದು. ಈ ಪತ್ರಿಕೆಗಳು ಬಹುತೇಕವಾಗಿ ಯುರೋಪ್ ಮತ್ತು ಉತ್ತರ ಅಮೆರಿಕಾದಿಂದ ಪ್ರಕಟವಾಗುತ್ತಿದ್ದವು. ನೀತಿಪಾಠಗಳು ಮತ್ತು 'ಉತ್ತಮ' ಬದುಕನ್ನು ಹೇಗೆ ಜೀವಿಸಬೇಕು ಎನ್ನುವುದರ ಕುರಿತಾದ ಬೋಧನೆಯ ವಿಚಾರಗಳನ್ನು ಒಳಗೊಂಡಿದ್ದವು. 19ನೆಯ ಶತಮಾನದಲ್ಲಿ ಪತ್ರಿಕೆಗಳ ವಸ್ತುವಿಷಯಗಳ ಸ್ವರೂಪವು ಕಥೆ, ಜಾನಪದ ಮತ್ತು ಕಾಲ್ಪನಿಕ ಕಥೆಗಳಿಗೆ ಬದಲಾಯಿತು. 20ನೆಯ ಶತಮಾನದ ಆರಂಭದಲ್ಲಿ ಆಧುನಿಕ ಯುಗದ ಮಕ್ಕಳ ಪತ್ರಿಕೆಗಳು ಹಾಗೂ ಕಾಮಿಕ್ಸ್‌ಗಳು ಆರಂಭವಾದವು. ಸಮಾಜದಲ್ಲಿ ಮಕ್ಕಳ ಬಾಲ್ಯದ ಬಗೆಗಿದ್ದ ನಂಬಿಕೆ ಹಾಗೂ ಈ ಕ್ಷೇತ್ರದಲ್ಲಿದ್ದ ಸಂಭಾವ್ಯ ಲಾಭವನ್ನು ಅನುಸರಿಸಿ, ಮಕ್ಕಳ ನಿಯತಕಾಲಿಕೆಗಳು ವಿಕಾಸಗೊಂಡವು. ಭಾರತದಲ್ಲಿ 20ನೆಯ ಶತಮಾನದ ಮೊದಲಾರ್ಧದಲ್ಲಿ ಮಕ್ಕಳ ಪತ್ರಿಕೆಗಳು ಪ್ರಕಟವಾಗ-ತೊಡಗಿದವು. ಆನಂದ (ಮರಾಠಿ), ಸಂದೇಶ (ಬಂಗಾಳ), ಬಲರಾಮ (ಮಲಯಾಳಂ), ಚಂದಮಾಮ (ತೆಲುಗು ಮತ್ತು ತಮಿಳು) ಇವು ಆರಂಭದಲ್ಲಿ ಪ್ರಕಟವಾದ ಮಕ್ಕಳ ನಿಯತ-ಕಾಲಿಕೆಗಳು. 1970ರ ದಶಕದ ನಂತರ ಮಕ್ಕಳಿಗಾಗಿ ಪ್ರಕಟಗೊಳ್ಳುತ್ತಿದ್ದ ನಿಯತಕಾಲಿಕೆಗಳ ಹೆಜ್ಜೆಯು ಭಾರತದಲ್ಲಿ ದೃಢವಾಯಿತು.

ಭಾಷಾಕಲಿಕೆಯನ್ನು ಬೆಂಬಲಿಸುವ ಮುದ್ರಣ-ಸಮೃದ್ಧ ವಾತಾವರಣವನ್ನು ಒದಗಿಸುವ ಕುರಿತಾದ ಮಾತುಕತೆಗಳಲ್ಲಿ ಅಥವಾ ಶೈಕ್ಷಣಿಕ ವಲಯಗಳಲ್ಲಿ ನಡೆದ ಕಲಿಕೆಯ ಸಂಪನ್ಮೂಲಗಳನ್ನು ಕುರಿತಾದ ಚರ್ಚೆಗಳಲ್ಲಿ ಪತ್ರಿಕೆಗಳನ್ನು ಶಿಕ್ಷಣದ ಅತಿಮುಖ್ಯ ಸಾಧನ/ಉಪಕರಣಗಳೆಂದೇ ಉಲ್ಲೇಖಿಸಲಾಗಿದೆ. ಪತ್ರಿಕೆಗಳು ಮಾತ್ರವಲ್ಲ, ಕಾಮಿಕ್ಸ್‌ಗಳನ್ನು ಕೂಡ ತರಗತಿ-ಕೊಠಡಿಯಲ್ಲಿ ಪ್ರಬಲವಾದ ಕಲಿಕೆಯ ಸಾಧನವನ್ನಾಗಿ ಬಳಸಬಹುದು ಎಂಬ ವಿಚಾರವನ್ನು ಜಗತ್ತಿನೆಲ್ಲೆಡೆಯ ಶಿಕ್ಷಕರ ಅನುಭವಗಳು ಪುಷ್ಟೀಕರಿಸುತ್ತವೆ. ಹಾಗಿದ್ದರೂ ಈ ವಿಚಾರಕ್ಕೆ ಸಿಕ್ಕ ಬಹುಮಟ್ಟಿನ ಬೆಂಬಲವು ಅನೌಪಚಾರಿಕವಾಗಿದೆಯಲ್ಲದೆ, ಮಕ್ಕಳ ಪತ್ರಿಕೆಗಳು, ಅವುಗಳ ಉಪಯುಕ್ತತೆ ಹಾಗೂ ಪ್ರಭಾವಗಳನ್ನು ಕುರಿತು ವ್ಯವಸ್ಥಿತವಾಗಿ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಕಲಿಕೆಯ ಸಾಧನಗಳೆಂದು ಮುಖ್ಯವಾಗಿ ಗುರುತಿಸಲ್ಪಟ್ಟಿದ್ದರೂ ಪತ್ರಿಕೆಗಳು ತರಗತಿ ಕೊಠಡಿಯಯಲ್ಲಿ ಕಡಿಮೆ ಬಳಸಲ್ಪಡುವ ಪೂರಕ ಕಲಿಕಾ ಸಾಧನಗಳಾಗಿವೆ.

ತರಗತಿ ಕೊಠಡಿಯ ಕಲಿಕಾ ಪ್ರಕ್ರಿಯೆಯಲ್ಲಿ ಮಕ್ಕಳ ಪತ್ರಿಕೆಗಳು ಹೇಗೆ ಪಾತ್ರ ವಹಿಸಬಲ್ಲವು ಎಂಬ ವಿಷಯದ ಕುರಿತು ನಡೆಸಲಾದ ಸಾಹಿತ್ಯಿಕ ಸಮೀಕ್ಷೆಯೊಂದರಲ್ಲಿ ಸಂಗ್ರಹಿಸಿದ ವಿಚಾರಗಳನ್ನು ಈ ಲೇಖನದಲ್ಲಿ ನಾವು ಚರ್ಚಿಸುತ್ತಿದ್ದೇವೆ. ಹಲವಾರು ಶಿಕ್ಷಕರು ನೀಡಿದ ಮೆಚ್ಚುಗೆಯ ನುಡಿಗಳನ್ನು ನಮ್ಮ ಚರ್ಚೆಯು ಮುಖ್ಯವಾಗಿ ಆಧರಿಸುತ್ತದೆ. ಮಾಧ್ಯಮಿಕ ಶಾಲಾ ಮಕ್ಕಳನ್ನು ಗುರಿಯಾಗಿಟ್ಟು-ಕೊಂಡು ಹೊರಬರುತ್ತಿರುವ **ಚಕ್‌ಮಕ್** ಎಂಬ ವಿಜ್ಞಾನ ವಿಷಯಗಳ ಮೇಲಿನ ಪತ್ರಿಕೆಯನ್ನು ಪೂರಕ ಓದಿನ ಸಾಮಗ್ರಿಯಾಗಿ ಹೇಗೆ ಬಳಸಿಕೊಳ್ಳಲಾಯಿತು ಎಂಬುದರ ಕುರಿತೂ ನಾವು ಮಾತನಾಡಲಿದ್ದೇವೆ.

**ತರಗತಿ ಕೊಠಡಿಗಳಲ್ಲಿ ನಿಯತಕಾಲಿಕೆಗಳನ್ನು ಏಕೆ ಬಳಸಬೇಕು?**

ಪತ್ರಿಕೆಯೊಂದರ ಮೇಲೆ ಕಣ್ಣು ಹಾಯಿಸುತ್ತ ಹೋದಂತೆ ಅದು ತನ್ನಲ್ಲಿರುವ ಪಠ್ಯ, ಚಿತ್ರಗಳು ಹಾಗೂ ಪ್ರತಿಯೊಂದು ಬರಹದ ವಿನ್ಯಾಸದಲ್ಲಿ ಪ್ರತಿಬಿಂಬಿತವಾಗಿರುವ ವಿಷಯವಸ್ತುಗಳಲ್ಲಿನ ಸಮೃದ್ಧತೆ ಹಾಗೂ ವೈವಿಧ್ಯದ ಮೇಲ್ನೋಟವನ್ನು ನೀಡುತ್ತದೆ. ಸಣ್ಣ ಕಥೆಗಳು, ಕವಿತೆಗಳು, ಹಾಸ್ಯ ತುಣುಕುಗಳು ಹಾಗೂ ಸುದ್ದಿ ತುಣುಕುಗಳು, ಅದ್ಭುತ ಸಂಗತಿಗಳು, ಬಗೆಬಗೆಯ ಒಗಟುಗಳು, ಲೇಖನಗಳು, ಚಟುವಟಿಕೆ ಮತ್ತು ಸ್ಪರ್ಧೆಗಳು-ಹೀಗೆ ಮಕ್ಕಳ ನಿಯತಕಾಲಿಕೆಗಳಲ್ಲಿ ಕಥಾ ಸಾಹಿತ್ಯ ಮತ್ತು ವಾಸ್ತವಿಕ ಸಂಗತಿಗಳನ್ನು ಆಧರಿಸಿ ರಚಿಸಿದ ಬರಹಗಳ ಭಂಡಾರವೇ ಇದೆ. ವಿಭಿನ್ನ ಓದು ಮತ್ತು ಗ್ರಹಿಕೆಯ ಮಟ್ಟಗಳಿಗೆ ಬೇಕಾದದ್ದೂ ಅದರಲ್ಲಿದೆ. ಪತ್ರಿಕೆಗಳು ನಿಯಮಿತವಾಗಿ ಪ್ರಕಟವಾಗುವುದರಿಂದ ಮತ್ತು ಬಹುತೇಕವಾಗಿ ಅವು ಕಿರು ಅಂತರದಲ್ಲಿಯೇ ಪ್ರಕಟವಾಗುವುದರಿಂದ ಅಲ್ಲಿರುವ ಮಾಹಿತಿಗಳೂ ಪ್ರಸಕ್ತ ಹಾಗೂ ಪ್ರಸ್ತುತವಾಗಿರುತ್ತವೆ. ಇಲ್ಲಿರುವ ವಸ್ತುಗಳುದ್ದಕ್ಕೂ ಕಾಣುವ ಸಾಮಾನ್ಯ ಅಂಶವೆಂದರೆ, ಅವುಗಳ ಸಂಕ್ಷಿಪ್ತತೆ. ಪತ್ರಿಕೆಗಳ ಬರಹಗಳು ಚಿಕ್ಕದಾಗಿದ್ದು ಮಾಹಿತಿಗಳ ತುಣುಕುಗಳು ಸುಲಭಗ್ರಾಹ್ಯವಾಗಿರುತ್ತವೆ. ಪತ್ರಿಕೆಯನ್ನು ನೀವು ಸಂಪೂರ್ಣವಾಗಿ ಓದಬೇಕಾಗಿಲ್ಲ, ನಿಮಗೆ ಆಸಕ್ತಿಕರವಾದ ಭಾಗಗಳನ್ನಷ್ಟೇ ಓದಬಹುದು ಎನ್ನುವುದು ಈ ಪತ್ರಿಕೆಗಳಲ್ಲಿ ಗುರುತಿಸಬಹುದಾದ ಅತ್ಯುತ್ತಮ ಗುಣ.

ಕೆಲವು ಪತ್ರಿಕೆಗಳು ವಿಜ್ಞಾನ, ಪರಿಸರದಂತಹ ಒಂದೇ ಒಂದು ವಸ್ತುವಿಷಯದ ಮೇಲೆ **ವ್ಯಾಪಕರೂಪದಲ್ಲಿ ಕೇಂದ್ರೀಕೃತವಾಗಿರುತ್ತವೆ. ಉದಾಹರಣೆಗೆ, ಬ್ರೇನ್‌ವೇವ್ ಮತ್ತು ನ್ಯಾಷನಲ್ ಜಿಯಾಗ್ರಫಿಕ್ ಕಿಡ್ಸ್. ಚಕ್‌ಮಕ್, ಕಿಶೋರ್ ಮತ್ತು ಚಂಪಕ್**‌ನಂತಹ ಇನ್ನು ಕೆಲವು ಪತ್ರಿಕೆಗಳು ತಮ್ಮ ಓದುಗರಿಗೆ ವೈವಿಧ್ಯಮಯ ವಸ್ತುವಿಷಯಗಳನ್ನು ಒದಗಿಸುತ್ತವೆ. ಯಾವುದೇ ರೀತಿಯಲ್ಲಾದರೂ ಸರಿ, ಅವು ಮೇಲೆ ಉಲ್ಲೇಖಿಸಿದ ಕಾರಣಗಳಿಂದಾಗಿ ಮಕ್ಕಳಿಗೆ ಆಕರ್ಷಕವಾಗಿ ತೋರುತ್ತವೆ ಹಾಗೂ ಮಕ್ಕಳು ಅವುಗಳ ಓದಿನಲ್ಲಿ ತೊಡಗಿ-ಕೊಳ್ಳುತ್ತಾರೆ. ಇದೇ ಕಾರಣಗಳಿಂದಾಗಿಯೇ ಶಿಕ್ಷಕರಿಗೆ ಅವು ತರಗತಿ ಕೊಠಡಿಯಲ್ಲಿ ಪೂರಕ ಸಾಮಗ್ರಿಗಳಾಗಿ ಆಕರ್ಷಕವೆನಿಸುತ್ತವೆ. ಅವುಗಳಿಗೆ ಹೊಂದುವಂತೆ ಒಂದೋ ಅಥವಾ ಅದಕ್ಕಿಂತಲೂ ಹೆಚ್ಚೋ ಪಾಠದ ಅವಧಿಗಳನ್ನು ಕೂಡ ಅವರು ಯೋಜಿಸಿ-ಕೊಳ್ಳಬಹುದು.

**ಮಕ್ಕಳ ಪತ್ರಿಕೆಗಳು ಮತ್ತು ಓದು ಬರಹದ ಕಲಿಕೆ:**
ಈ ಪತ್ರಿಕೆಗಳು ಕಥೆ ಮತ್ತು ಕವಿತೆಗಳಿಂದ ಸಮೃದ್ಧವಾಗಿರು–ವುದರಿಂದ ಒಂದು ಭಾಷಾ ತರಗತಿಯಲ್ಲಿ ಅವುಗಳನ್ನು ಯಾವಾಗಲೂ ಅವಲಂಬಿಸಬಹುದು. ಅವುಗಳ ಗಾತ್ರ, ಸಂಕೀರ್ಣತೆಯ ಮಟ್ಟ, ವಿಷಯ ಮತ್ತು ಪ್ರಕಾರಗಳನ್ನು ಆಧರಿಸಿ, ಕಥೆ ಮತ್ತು ಬರಹಗಳನ್ನು ದೊಡ್ಡದಾಗಿ ವಾಚಿಸಲು, ಕಥೆ ಹೇಳಲು, ಅವಲೋಕಿಸಲು ಹಾಗೂ ಸಾಹಿತ್ಯಿಕ ಚರ್ಚೆಗಳಿಗೆ ಬಳಸಿಕೊಳ್ಳ–ಬಹುದು. ವಿವಿಧ ವಯೋಮಾನದ ಮಕ್ಕಳಿಗೆ ರಂಗಚಟುವಟಿಕೆ–ಗಳಲ್ಲಿಯೂ ಅವನ್ನು ಬಳಸಿಕೊಳ್ಳಬಹುದು.

ಓದು ಎನ್ನುವುದು ಕವಿತೆ ಮತ್ತು ಶಿಶುಗೀತೆಗಳ ಮೂಲಕವೂ ರೂಢಿಸಿಕೊಳ್ಳಬಹುದಾದ ಒಂದು ಕೌಶಲ್ಯವಾಗಿರುವುದರಿಂದ ಅದರಲ್ಲಿ ಅಮೂರ್ತ ಪರಿಣಾಮಗಳೂ ಇರುತ್ತವೆ. ಅನೇಕ ಮಕ್ಕಳು ಕವಿತೆ ಮತ್ತು ಶಿಶುಗೀತೆಗಳ ಸ್ವರೂಪದಿಂದಾಗಿಯೇ ಅವುಗಳನ್ನು ಇಷ್ಟಪಡುತ್ತಾರೆ. ಪ್ರೊ.ಕೃಷ್ಣಕುಮಾರ್ ಅವರು ಹೇಳಿದಂತೆ ಅವು, 'ಅತ್ಯಂತ ಸೃಜನಶೀಲ ಹಾಗೂ ಭಾಷೆಯ ಚೈತನ್ಯಪೂರ್ಣ ರೂಪಗಳ ಸಂಪನ್ಮೂಲವಾಗಿದೆ.' ಕವಿತೆಗಳು ಮಗುವಿಗೆ ಭಾಷೆಯೊಡನೆ ಆಟವಾಡಲು ಅನುವು ಮಾಡಿಕೊಡುತ್ತವೆ. ಸಾಂಪ್ರದಾಯಿಕ ಶಿಶುಗೀತೆ ಪುಸ್ತಕಗಳು ಅಥವಾ ಪಠ್ಯಪುಸ್ತಕಗಳ ಭಾಗವಾಗಿರದ ವೈವಿಧ್ಯಮಯ ಕವಿತೆಗಳನ್ನು ಪತ್ರಿಕೆಗಳು ಮಕ್ಕಳಿಗೆ ನೀಡುತ್ತವೆ. ಉದಾಹರಣೆಗೆ, **ಚಕ್‌ಮಕ್‌ನಲ್ಲಿ** ನಾವು ಕೇವಲ ಹಿಂದಿ ಕವಿತೆಗಳನ್ನಷ್ಟೇ ಅಲ್ಲದೆ ವಿದೇಶಗಳ ಹಾಗೂ ಇಂಗ್ಲಿಷ್ ಮತ್ತು ಇರಾನಿಯನ್ ಭಾಷೆಗಳಿಂದ ಅನುವಾದಗೊಂಡ ಹಲವಾರು ಕವಿತೆಗಳನ್ನೂ ಪ್ರಕಟಿಸುತ್ತೇವೆ. ಮಕ್ಕಳ ಪತ್ರಿಕೆಗಳಲ್ಲಿ ಪ್ರಕಟವಾದ ಕೆಲವೊಂದು ರಚನೆಗಳು ಈ ಮಾತನ್ನು ದೃಢಪಡಿಸಿದ್ದು, ಅವುಗಳನ್ನು ಯಾವಾಗ, ಎಷ್ಟೇ ಬಾರಿ ಪಠಿಸಲಿ, ಮಕ್ಕಳು ಅವುಗಳಿಗೆ ಮತ್ತೆ ಮತ್ತೆ ಅದೇ ತುಂಬು ಉತ್ಸಾಹದಿಂದ ಸ್ಪಂದಿಸುತ್ತಾರೆ ಎನ್ನುವುದು ಕಂಡುಬಂದಿದೆ. **ಚಕ್‌ಮಕ್‌ನ** ಮೊದಲನೆಯ ಸಂಚಿಕೆಯಲ್ಲಿ ರಾಜೀವ ಉತ್ಸಾಹಿಯವರ, **ಆಲೂ ಮಿರ್ಚಿ ಚಾಯ್ ಜೀ** ಎಂಬ ಕವಿತೆ ಪ್ರಕಟವಾಗಿತ್ತು. ಮೇಲೆ ಹೇಳಿದ ರೀತಿಯಲ್ಲಿ ಅತ್ಯಂತ ಜನಪ್ರಿಯತೆಯನ್ನು ಪಡೆದ ಕವಿತೆಗಳಲ್ಲಿ ಇದೂ ಒಂದು. ಈ ಕವಿತೆಯು ಕಳೆದ ಹಲವಾರು ದಶಕಗಳಿಂದ ಸರ್ಕಾರವು ನಿಗದಿಪಡಿಸಿದ ಹಾಗೂ ಖಾಸಗೀ ಪಠ್ಯಪುಸ್ತಕಗಳೆರಡಲ್ಲಿಯೂ ಸ್ಥಾನ ಪಡೆದುಕೊಳ್ಳುತ್ತಲೇ ಇದೆ.

ಮನೋರಂಜನೆಯ ಓದಿಗೆಂದು ಕೈಗೆತ್ತಿಕೊಂಡರೆ ಈ ಪತ್ರಿಕೆಗಳು ಪಠ್ಯಪುಸ್ತಕಗಳ ಓದು ಉಂಟುಮಾಡುವ ಬಳಲುವಿಕೆಯಿಂದ ನಿರಾಳತೆಯನ್ನು ಉಂಟುಮಾಡುತ್ತವೆ. ತರಗತಿ ಕೊಠಡಿಗಳಲ್ಲಿ ಪತ್ರಿಕೆಗಳು ಕೈಗೆಟಕುವಂತೆ ಇರಲು ಬಿಟ್ಟರೆ ಬಹುಶಃ ಓದಲು ಏನೇನೂ ಮನಸ್ಸೇ ಇರದ ಮಕ್ಕಳೂ ಕೂಡ ಅವುಗಳ ಆಕರ್ಷಕ ಮುಖಪುಟ, ಹೊರಾವರಣ ಹಾಗೂ ವೈವಿಧ್ಯಮಯ ವಸ್ತುವಿಷಯಗಳ ಕಾರಣ, ಅವುಗಳನ್ನು ಕೈಗೆತ್ತಿಕೊಳ್ಳಲು ಹಾಗೂ ಓದುವ ಅಭ್ಯಾಸವನ್ನು ರೂಢಿಸಿಕೊಳ್ಳಲು ನೆರವಾಗುತ್ತದೆ ಎಂಬುದನ್ನು ಶಿಕ್ಷಕರು ಕಂಡುಕೊಂಡಿದ್ದಾರೆ. ಇದು ಪೂರ್ವ ಪ್ರಾಥಮಿಕ ಮಟ್ಟದಲ್ಲಿಯೂ ನಿಜ. ಮುದ್ರಿತ ವಸ್ತುವಿಷಯಗಳ ಬಗ್ಗೆ ಆಸಕ್ತಿ ಮೂಡಿಸಲು ಇದು ಮೊದಲ ಹೆಜ್ಜೆ. ಹಲವಾರು ಮಕ್ಕಳು ಅದರಲ್ಲಿಯೂ ವಿಶೇಷವಾಗಿ ಆರಂಭಿಕ ತರಗತಿಗಳಲ್ಲಿರುವ ಮಕ್ಕಳು ಅನೇಕ ಕಾರಣಗಳಿಂದಾಗಿ ಪುಸ್ತಕಗಳನ್ನು ಕಂಡರೆ ಭಯಪಡುತ್ತಾರೆ. ಅವರಲ್ಲಿ ಕೆಲವರಂತೂ ಪುಸ್ತಕಗಳು, ಪಠ್ಯಪುಸ್ತಕಗಳು ಅಥವಾ ಇಂತಹುದೇ ಇನ್ನಿತರ ವಿಚಾರಗಳ ಹೆಚ್ಚಿನ ಸಂಪರ್ಕಕ್ಕೆ ಬಂದಿರುವುದಿಲ್ಲ. ಇತರ ಕೆಲವರು ತಮ್ಮ ಸಹಪಾಠಿಗಳು ಸುಲಭವಾಗಿ ಓದುವುದನ್ನು ನೋಡುತ್ತಾರೆ. ಆದರೆ ಅವರಿಗೆ ತಾವು ಸ್ವತಃ ಅಂತಹ ಕೌಶಲ್ಯವನ್ನು ಹೊಂದಬಲ್ಲೆವು ಎನ್ನುವುದರ ಬಗ್ಗೆ ಖಚಿತತೆ ಇರುವುದಿಲ್ಲ. ಒಂದೊಮ್ಮೆ ಈ ಮಕ್ಕಳು ಪತ್ರಿಕೆಗಳನ್ನು ಕೈಗೆತ್ತಿಕೊಂಡರೆ, ಮುದ್ರಿತ ವಸ್ತುಗಳು ಅಷ್ಟೊಂದು ಬೆದರಿಸುವುದಿಲ್ಲ ಎಂದು ಅವರಿಗೆ ಅರಿವಾಗುತ್ತದೆ. ಮಕ್ಕಳಿಗೆ ಈ ಪ್ರೇರಣೆಯನ್ನು ಆದಷ್ಟು ಬೇಗ ನೀಡಿದರೆ, ಅವರು ಒಳ್ಳೆಯ ಓದುಗರಾಗಿ ಬೆಳೆಯುತ್ತಾರೆ ಎಂಬುದನ್ನು ಕೆಲವು ಶಿಕ್ಷಕರು ಕಂಡುಕೊಂಡಿದ್ದಾರೆ.

ಪತ್ರಿಕೆಗಳು ಮಕ್ಕಳನ್ನು ಬರೆಯುವಂತೆಯೂ ಪ್ರೇರೇಪಿಸುತ್ತವೆ. ಮಕ್ಕಳು ಪತ್ರಿಕೆಗಳಲ್ಲಿ ಓದುವ ಕಥೆ ಮತ್ತು ಇತರ ಬರಹಗಳು ಅವರಿಗೆ ಬರೆಯಲು ಬೇಕಾದ ಆಲೋಚನೆ ವಿಚಾರಗಳನ್ನು ನೀಡುತ್ತವೆ ಎಂಬುವುದು ಶಿಕ್ಷಕರ ಅನುಭವಕ್ಕೆ ಬಂದಿದೆ. ಪತ್ರಿಕೆಗಳಲ್ಲಿನ ತುಣುಕುಗಳನ್ನು ಅವರು ತಮ್ಮ ಬರವಣಿಗೆಗೆ ಮಾದರಿಯಾಗಿಯೂ ಬಳಸುವುದಿದೆ. ಪತ್ರಿಕೆಗಳು ಆಗಾಗ ಸಂಪಾದಕರಿಗೆ ಪತ್ರ ಬರೆಯುವಂತೆ, ಸಮಸ್ಯೆ–ಒಗಟುಗಳಿಗೆ ತಮ್ಮ ಉತ್ತರವನ್ನು ಬರೆದು ಕಳುಹಿಸುವಂತೆ ಹಾಗೂ ಬಹುಮಾನಗಳಿಗಾಗಿ ಸ್ಪರ್ಧಿಸುವಂತೆ ಓದುಗರನ್ನು ಉತ್ತೇಜಿಸುತ್ತವೆ.

**ಪೂರಕ ಸಾಧನವಾಗಿ ಚಕ್‌ಮಕ್ :**
**'ಚಕ್‌ಮಕ್'** ಎನ್ನುವುದು ಏಕಲವ್ಯ ಫೌಂಡೇಷನ್‌ನ ಪರಿಕಲ್ಪನೆ. ೧೯೮೦ರ ದಶಕದಲ್ಲಿ ಏಕಲವ್ಯ ಫೌಂಡೇಶನ್, ಮಾಧ್ಯಮಿಕ ಶಾಲಾ ಮಕ್ಕಳಿಗೆ ಪೂರಕ ಓದಿನ ಸಾಮಗ್ರಿಯಾಗಿ 'ಚಕ್‌ಮಕ್' ವಿಜ್ಞಾನ ಪತ್ರಿಕೆಯನ್ನು ಆರಂಭಿಸಿತು. ಮಧ್ಯಪ್ರದೇಶದ ಹೋಶಂಗಾ–ಬಾದ್‌ನಲ್ಲಿ ಏಕಲವ್ಯ ಫೌಂಡೇಶನ್‌ನ ವಿಜ್ಞಾನ ಬೋಧನಾ ಕಾರ್ಯಕ್ರಮವನ್ನು (HSTP –Hoshangabad Science Teaching Programme) ನಡೆಸುತ್ತಿದ್ದವರ ಅನುಭವದಿಂದಾಗಿ ಇಂತಹ ಪತ್ರಿಕೆಯ ಅಗತ್ಯವು ಕಂಡುಬಂದಿತು. ಆರಂಭದ ಆ ವರ್ಷಗಳಲ್ಲಿ ಚಕ್‌ಮಕ್‌ನ್ನು HSTP ಯ ಹಲವಾರು ಸರ್ಕಾರೀ ಗ್ರಾಮೀಣ ಶಾಲೆಗಳಲ್ಲಿ ಕಡಿಮೆ ಬೆಲೆಗೆ ಮಾರಲಾಗುತ್ತಿತ್ತು. ಮಕ್ಕಳು ಪತ್ರಿಕೆಯನ್ನು ಓದಲು ತುಂಬಾ ಇಷ್ಟಪಡುತ್ತಿದ್ದರು. ಪತ್ರಿಕೆ–ಆರಂಭವಾದಾಗಿನಿಂದ ಪತ್ರಿಕೆಯು **ಮೇರಾ ಪನ್ನಾ** (ನನ್ನ ಪುಟಗಳು) ಎಂಬ ಹೆಸರಿನಲ್ಲಿ ಹಲವಾರು ಪುಟಗಳನ್ನು ಮಕ್ಕಳ ಕೊಡುಗೆಗೆಂದೇ ಮೀಸಲಾಗಿಟ್ಟದ್ದರಿಂದ ಮಕ್ಕಳು ಪ್ರಶ್ನೆ, ಕವಿತೆ, ಕಥೆ, ಚಿತ್ರಕಲೆ ಹಾಗೂ ದೃಷ್ಟಾಂತಗಳನ್ನು ಅದಕ್ಕೆ ಕಳುಹಿಸುತ್ತಿದ್ದರು. ಮಕ್ಕಳ ದಿನಾಚರಣೆಯ ಅಂಗವಾಗಿ ಪತ್ರಿಕೆಯು ಹೊರತರುತ್ತಿದ್ದ ನವಂಬರ್ ಸಂಚಿಕೆಯು ಹಲವಾರು ವರುಷಗಳವರೆಗೆ ಸಂಪೂರ್ಣ **ಮೇರಾ ಪನ್ನಾ** ಸಂಚಿಕೆಗಳೇ ಆಗಿರುತ್ತಿದ್ದವು.

ಈ ರೀತಿಯಾಗಿ **'ಚಕ್‌ಮಕ್'** ನಿಯತಕಾಲಿಕೆಯು ಮಕ್ಕಳ ಬರವಣಿಗೆಯನ್ನು ಮತ್ತು ಅವರ ಕುತೂಹಲವನ್ನು ಪ್ರೋತ್ಸಾಹಿಸಿತು. ಇದಕ್ಕಾಗಿ ಅವರು 'ಒಳ್ಳೆಯ' ಕಲೆ ಅಥವಾ 'ಸಮರ್ಪಕ' ಬರವಣಿಗೆ ಎಂಬ ಸಾಂಪ್ರದಾಯಿಕ, ಪ್ರಮಾಣಿತ ಮಾನದಂಡಗಳನ್ನು ಬಿಟ್ಟು ತಮ್ಮನ್ನು ತಾವು ಕಾಗದದಲ್ಲಿ ಅಭಿವ್ಯಕ್ತಿಗೊಳಿಸಿಕೊಳ್ಳಲು ನೆರವಾಯಿತು. **'ಚಕ್‌ಮಕ್'**ನಲ್ಲಿ ಅವಕಾಶ ದೊರಕಿಸಿಕೊಳ್ಳಲು ಒಂದು ಮಗುವಿಗೆ ಅದರ ಸೃಜನಶೀಲತೆ ಹಾಗೂ ಆಲೋಚನೆಗಳೇ ಮಾನದಂಡಗಳಾಗಿದ್ದವು. ಅಲ್ಲಿ ಒಪ್ಪಿಗೆಯಾಗಲು/ಸ್ವೀಕೃತಿ ಪಡೆಯಲು 'ಏಕೈಕ' ಹಿಂದಿಯೆನ್ನುವುದೇನೂ ಇರಲಿಲ್ಲ. ಭಾಷಾ ವೈವಿಧ್ಯ ಹಾಗೂ ಶೈಲಿಗಳನ್ನು ಯಾವ ರೀತಿಯಲ್ಲಿಯೂ ಹಾಳುಮಾಡುತ್ತಿರಲಿಲ್ಲ. ಆ ಮಕ್ಕಳಲ್ಲಿ ಅನೇಕರು ಮೊದಲ ಪೀಳಿಗೆಯ ವಿದ್ಯಾರ್ಥಿಗಳಾಗಿದ್ದುದರಿಂದ ಈ ಶಾಲೆಗಳಲ್ಲಿ ಮಕ್ಕಳ ಆತ್ಮವಿಶ್ವಾಸದ ಮೇಲೆ ಇದು ಎಂತಹ ಪರಿಣಾಮವನ್ನು ಬೀರಿರಬಹುದು ಎಂಬುದನ್ನು ಕೇವಲ ಊಹಿಸಬಹುದು.

ಹೆಚ್ಚಿನ ಬಾರಿ ಮಕ್ಕಳು ಪತ್ರಿಕೆಯಲ್ಲಿ ಎಲ್ಲಕ್ಕಿಂತ ಮೊದಲು ಓದುವುದು **ಮೇರಾ ಪನ್ನಾ** ಪುಟಗಳೇ ಆಗಿರುತ್ತವೆ. ಅದರಲ್ಲಿನ ಬರಹಗಳು ಮಕ್ಕಳ ದೈನಂದಿನ ಜೀವನದ ಸುತ್ತಲೂ ಸುತ್ತುವ ಅನೇಕಾನೇಕ ವೈವಿಧ್ಯಮಯ ಸಂಗತಿಗಳ ಕುರಿತಾಗಿಯೇ ಇರುತ್ತವೆ ಹಾಗೂ ಹಿಂದೀ ಭಾಷೆಯ ವಿಭಿನ್ನ ಸ್ವರೂಪಗಳಲ್ಲಿಯೂ ಇರುತ್ತವೆ. ಔಪಚಾರಿಕ ವ್ಯವಸ್ಥೆ ಅಥವಾ ತರಗತಿ ಕೊಠಡಿಗಳಲ್ಲಿಯೂ ಕೂಡ ಮಗುವಿನ ಮನೆಮಾತು ಮತ್ತು ವಿಭಿನ್ನ ಭಾಷಿಕ ಸ್ವರೂಪಗಳನ್ನು ಒಪ್ಪಿಕೊಳ್ಳಲು ಸಮುದಾಯವು ಇನ್ನೂ ಸಿದ್ಧವಾಗಿಲ್ಲ. ತರಗತಿ ಕೊಠಡಿಯ ಪ್ರಕ್ರಿಯೆಗಳಲ್ಲಿ ಮಗುವೊಂದು ತೊಡಗಿಕೊಳ್ಳುವುದನ್ನು ಹಾಗೂ ಶಾಲಾ ವ್ಯವಸ್ಥೆಯಲ್ಲಿ ಅದರ ಧಾರಣಾ ವಿಚಾರವನ್ನು ನಿರ್ಧರಿಸುವುದರಲ್ಲಿ ಇಂತಹ ಸ್ವೀಕರಿಸುವಿಕೆಯು ಮಹತ್ತರ ಪಾತ್ರವನ್ನು ವಹಿಸುತ್ತದೆ ಎಂಬುದು ತಿಳಿದಿರುವ ಸಂಗತಿಯಾಗಿದೆ. ಈ ತರಹದಲ್ಲಿ, **ಮೇರಾ ಪನ್ನಾ**ದಂತಹ ಉಪಕ್ರಮಗಳು ಮಕ್ಕಳಿಗೆ ತುಂಬಾ ಅಗತ್ಯವಾಗಿದ್ದ ಭರವಸೆಯನ್ನು ನೀಡಬಲ್ಲವು.

**'ಚಕ್‌ಮಕ್'**ದ ಆರಂಭಿಕ ವರ್ಷಗಳಲ್ಲಿ ಶಿಕ್ಷಕರೂ ಕೂಡ ತಮ್ಮ ತರಗತಿಗಳಲ್ಲಿ ಪತ್ರಿಕೆಯ ಹಲವಾರು ಲೇಖನಗಳನ್ನು ಚರ್ಚಿಸುತ್ತಿದ್ದರು ಹಾಗೂ 'ಅಪ್‌ನೀ ಪ್ರಯೋಗಶಾಲಾ'ದಲ್ಲಿ ಇದ್ದಂತಹ ಕೆಲವು ಚಟುವಟಿಕೆಗಳನ್ನು ಕೈಗೊಳ್ಳಲು ಪ್ರಯತ್ನಿಸಿದರು. ಇದು ಪತ್ರಿಕೆಯನ್ನು ಒಂದು ಶೈಕ್ಷಣಿಕ ಸಾಧನವಾಗಿ ಪ್ರಸ್ತುತವಾಗಿರುವಂತೆ ಹಾಗೂ ಉಪಯುಕ್ತವಾಗಿರುವಂತೆ ನೋಡಿಕೊಳ್ಳಲು ನೆರವಾಯಿತು ಎಂಬುದಾಗಿ ಅವರು **'ಚಕ್‌ಮಕ್'**ನ ಸಂಪಾದಕೀಯ ತಂಡಕ್ಕೆ ನಿಯಮಿತವಾಗಿ ಹಿಮ್ಮಾಹಿತಿಯನ್ನು ನೀಡಿದರು. ಕಾಲಕ್ರಮೇಣ 'ಚಕ್‌ಮಕ್'ನಲ್ಲಿ ವಿಜ್ಞಾನದ ವಿಷಯಗಳು ಕಡಿಮೆಯಾದವು. ಇನ್ನೊಂದೆಡೆ ಅದರ ಓದುಗ ವರ್ಗದಲ್ಲಿಯೂ ಬದಲಾವಣೆಯಾಯಿತು. ಮೊದಲು ಹಿಂದೀ ಮಾಧ್ಯಮದ ಸರ್ಕಾರೀ ಶಾಲೆಗಳ ಮಕ್ಕಳು ಮುಖ್ಯವಾಗಿ ಇದನ್ನು ಓದುತ್ತಿದ್ದರು. ನಂತರ, ಇಂಗ್ಲೀಷ್ ಮಾಧ್ಯಮದ ಖಾಸಗೀ ಶಾಲೆಗಳ ಮಕ್ಕಳು ದೊಡ್ಡ ಸಂಖ್ಯೆಯಲ್ಲಿ ಇದನ್ನು ಓದತೊಡಗಿದರು. ಇಂದಿಗೂ **'ಚಕ್‌ಮಕ್'**ಅನ್ನು ಶಾಲೆಗಳು, ಗ್ರಂಥಾಲಯಗಳು ಹಾಗೂ ಹಲವಾರು ಸಂಘಟನೆಗಳ ಚಟುವಟಿಕೆ ಕೇಂದ್ರಗಳಲ್ಲಿ ಬಳಸಲಾಗುತ್ತಿದೆ. ಆದರೆ ಮಕ್ಕಳು ನಮಗೆ ಕಳುಹಿಸುವ ತಮ್ಮ ಬರಹಗಳು ಅಥವಾ ಚಿತ್ರಕಲೆಗಳನ್ನು ಹೊಂದಿರುವ ಸಂವಹನಾತ್ಮಕ ಅಂಕಣಗಳಿಗಷ್ಟೇ ಇದರ ಬಳಕೆ ಹೆಚ್ಚಾಗಿ ಆಗುತ್ತಿದೆ.

**'ಕ್ಯೂಂವ್-ಕ್ಯೂಂವ್'** ಎನ್ನುವುದು ವರುಷದ ಹಿಂದಷ್ಟೇ ಆರಂಭಿಸಿದ ಒಂದು ಅಂಕಣ. ಈ ಅಂಕಣದಲ್ಲಿ ನಾವು, ಪ್ರಶ್ನೆಗಳಿಗೆ ಪ್ರತಿಸ್ಪಂದಿಸುವಂತೆ ಮಕ್ಕಳನ್ನು ಉತ್ತೇಜಿಸುತ್ತೇವೆ. ಪ್ರಶ್ನೆಗಳ ವ್ಯಾಪ್ತಿಯು **ಯಾಕೆ ಹೂಸು ಬಿಡುತ್ತೇವೆ** ಎನ್ನುವುದರಿಂದ ಹಿಡಿದು ಯಾವುದನ್ನು ಕೆಲಸವೆಂದು ಪರಿಗಣಿಸಲಾಗುತ್ತದೆ ಹಾಗೂ ತಮ್ಮ ಕುಟುಂಬಗಳಲ್ಲಿ ಯಾರ್‍ಯಾರಿಗೆ ಅವರ ಮಾಡುವ ಕೆಲಸಕ್ಕೆಂದು ಸಂಬಳ ನೀಡತಕ್ಕದ್ದು ಎನ್ನುವುದರ ಕುರಿತಂತೆ ಅವರ ಅಭಿಪ್ರಾಯವೇನು ಎನ್ನುವುದರವರೆಗೆ ಇರುತ್ತದೆ. ನಿಂತಿರುವ ಒಂದು ಸೈಕಲ್ ಏಕೆ ಬೀಳುತ್ತದೆ? ತಮ್ಮ ಕುಟುಂಬದಲ್ಲಿ ಯಾರು ಅತ್ಯಂತ ಹೆಚ್ಚು ಸ್ವಾತಂತ್ರ್ಯವನ್ನು ಹೊಂದಿದ್ದಾರೆ ಎಂದು ಅವರು ಭಾವಿಸುತ್ತಾರೆ? ಯಾರನ್ನಾದರೂ ಮಾಯವಾಗಿಸುವುದು ಅವರಿಗೆ ಸಾಧ್ಯವಾಗಿದ್ದರೆ, ಅವರು ಯಾರನ್ನು ಆಯ್ದುಕೊಳ್ಳುತ್ತಾರೆ ಮತ್ತು ಏಕೆ? ಎನ್ನುವಂತಹ ಪ್ರಶ್ನೆಗಳೂ ಇರುತ್ತವೆ. ಇಂತಹ ಪ್ರಶ್ನೆಗಳು ಮಕ್ಕಳನ್ನು ತಮ್ಮ ಸುತ್ತಲಿನ ಆಗುಹೋಗುಗಳನ್ನು ಗಮನಿಸುವಂತೆ, ಆ ಕುರಿತು ಆಲೋಚಿಸುವಂತೆ ಹಾಗೂ ವಿಭಿನ್ನ ದೃಷ್ಟಿಕೋನವನ್ನು ಬಳಸಿ ಅವರು ಉತ್ತರವನ್ನು ಕಂಡುಕೊಳ್ಳಲು ಸಾಧ್ಯವಾಗುವಂತೆ ಮಾಡುತ್ತವೆ. ಬಹಳಷ್ಟು ವೈಜ್ಞಾನಿಕ ಮತ್ತು ತಾತ್ತ್ವಿಕ ಶೋಧನೆಗಳ ಆರಂಭಿಕ ಚಾಲನೆಗೆ ಕಾರಣವಾಗುವುದು ಇದೇ.

ಮಕ್ಕಳು ಹೊರಾಂಗಣಕ್ಕೆ ಹೋಗಿ, ಸುತ್ತಲಿನ ಆಗುಹೋಗುಗಳನ್ನು ಗಮನಿಸಿ, ತಮ್ಮ ನೈಸರ್ಗಿಕ ಪರಿಸರದೊಡನೆ ಸಂಪರ್ಕ-ಸಂಬಂಧವನ್ನು ಹೊಂದುವ ನಿಟ್ಟಿನಲ್ಲಿ ಅವರಿಗೆ ಉತ್ತೇಜನ ನೀಡುವ ನೇಚರ್ ಕನ್ಸರ್ವೇಷನ್ ಫೌಂಡೇಷನ್ ಅಭಿವೃದ್ಧಿಪಡಿಸಿದ ಅಂಕಣವೂ ಈ ಪತ್ರಿಕೆಯಲ್ಲಿದೆ. ಪ್ರಾಣಿ ಅಥವಾ ಸಸ್ಯಸಮೂಹಗಳ (ಕೋತಿ, ಬಿದಿರು ಇತ್ಯಾದಿ) ಮೇಲೆ ಹಾಗೂ ಪರಿಕಲ್ಪನೆಗಳ (ಸ್ವರಾನುಕರಣೆ, ನಮ್ಮ ಸುತ್ತಮುತ್ತಲಿನ ಶಬ್ದಗಳು) ಮೇಲೆ ಕೇಂದ್ರೀ-ಕೃತವಾಗಿರುವ ವಿಷಯಗಳು ಇರುತ್ತವೆ. ಇವುಗಳಿಗೆ ಪ್ರತಿ-ಸ್ಪಂದನೆಗಳು ಸೀಮಿತವಾಗಿಯೇ ಇರುತ್ತವೆ. ತಮ್ಮ ವಿದ್ಯಾರ್ಥಿಗಳು ಪ್ರಕೃತಿಯೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿಕೊಳ್ಳಲು ನೆರವಾಗುವ ಹಾಗೆ ಶಾಲೆಗಳು ಹೆಚ್ಚಿನ ಚಟುವಟಿಕೆಗಳನ್ನು ಕೈಗೊಳ್ಳುವಂತೆ ನಾವು ಶಾಲೆಗಳೊಂದಿಗೆ ಕೆಲಸ ಮಾಡಬೇಕಾದ ಅಗತ್ಯವನ್ನು ಇದು ಸೂಚಿಸುತ್ತದೆ.

ಒಟ್ಟಾರೆಯಾಗಿ, ಚಕ್‌ಮಕ್‌ನಲ್ಲಿರುವ ವಸ್ತುವಿಷಯಗಳು ತಮ್ಮ ಓದುಗರಿಗೆ ಇಂದಿನ ಪ್ರಪಂಚದ ಒಳಹೊಕ್ಕು ನೋಡಲು ಬೇಕಾದ ಒಂದು ಕನ್ನಡಿಯಂತೆ ಕೆಲಸ ಮಾಡುತ್ತವೆ. ಅದೇ ವೇಳೆಗೆ, ನಮ್ಮಂತಹ ವಯಸ್ಕರಿಗೆ ಮಕ್ಕಳ ಲೋಕದೊಳಗೆ ಇಣುಕಿ ನೋಡಲು, ಅವರು ಯಾವುದರ ಬಗ್ಗೆ ಆಲೋಚಿಸುತ್ತಿದ್ದಾರೆ ಎನ್ನುವುದನ್ನು ತಿಳಿಯಲು, ಅವರಿಗೆ ಕಿರಿಕಿರಿ, ಬೇಸರ, ನೋವನ್ನುಂಟುಮಾಡುವುದು ಯಾವುದು, ಅವರು ತಮ್ಮ ಸುತ್ತಲಿನ ಜಗತ್ತನ್ನು ಹೇಗೆ ನೋಡುತ್ತಾರೆ ಎನ್ನುವುದನ್ನು ಅರಿತುಕೊಳ್ಳಲು ಖಂಡಿತವಾಗಿಯೂ ಇದು ಒಂದು ಬೆಳಕಿಂಡಿಯಾಗಿದೆ.

ಒಂದು ಸಾಧನವಾಗಿ ಅಥವಾ ಕಲಿಕೆಯ ಮೂಲವಾಗಿ, **'ಚಕ್‌ಮಕ್'**ನಂತಹವೂ ಸೇರಿದಂತೆ ಮಕ್ಕಳ ಪತ್ರಿಕೆಗಳ ಸಾಮರ್ಥ್ಯವು ಅಗಾಧವಾದದ್ದು. ಬೋಧನಾಕ್ರಮಕ್ಕೆ ಬೆಂಬಲವಾಗಿ ಅನೇಕ ಸಾಧನಗಳಿದ್ದರೂ, ಅವು ಹೆಚ್ಚು ಬಳಕೆಯಾಗಿಲ್ಲ. ಹಾಗೆ ಕಡಿಮೆ ಬಳಕೆಗೊಳಗಾದ ಸಾಧನಗಳಲ್ಲಿ ಮಕ್ಕಳ ಪತ್ರಿಕೆಗಳೂ ಸೇರಿವೆ. ಸಾಂಪ್ರದಾಯಿಕ ತರಗತಿ ಕೊಠಡಿಗಳಲ್ಲಿ ಜಾಗ ಪಡೆಯದ ಚಲನಚಿತ್ರಗಳು, ಸಿನಿಮಾ ಭಿತ್ತಿಚಿತ್ರಗಳು ಹಾಗೂ ಜಾಹೀರಾತುಗಳಂಥ ಇತರ ಅಸಾಂಪ್ರದಾಯಿಕ ಸಾಧನಗಳು ನಿಸ್ಸಂದೇಹವಾಗಿಯೂ ಇವೆ. ಇಂದು, ಹಲವಾರು ತರಹದ ಕಲಿಕಾ ಸಾಮಗ್ರಿಗಳ ಅಗತ್ಯವಿರುವುದನ್ನು ಹಾಗೂ ಅವುಗಳನ್ನು ಬೆಂಬಲಿಸುವ ಕುರಿತು ನಾವು ಚರ್ಚಿಸುತ್ತಿದ್ದೇವೆ. ವಿದ್ಯಾರ್ಥಿಗಳ ಕಲಿಕೆಯ ರೀತಿ ಹಾಗೂ ಅವರ ಆದ್ಯತೆಗಳಲ್ಲಿರುವ ವೈವಿಧ್ಯವನ್ನು ಒಪ್ಪಿಕೊಳ್ಳುತ್ತಿದ್ದೇವೆ. ಅಂದಾಗ, ಪತ್ರಿಕೆಗಳನ್ನು ಹಾಗೂ ಇಂಥ ಇನ್ನಿತರ ಸ್ವರೂಪಗಳೆಲ್ಲವನ್ನೂ ನಾವು ಬಳಸುವ ಬೋಧನಾಕ್ರಮದ ಸಾಧನಗಳ ಸಂಚಯಕ್ಕೆ ಸೇರಿಸಿ ಬಳಸಬೇಕಿದೆ.

---

ಈ ಲೇಖನವನ್ನು ಬರೆಯುವಾಗ ಉಪಯೋಗಿಸಿದ ಪರಾಮರ್ಶನ ಕೃತಿಗಳ ಪಟ್ಟಿಗೆ ruchi.shevade@gmail.com ಸಂಪರ್ಕಿಸಿ.



**ವಿನತಾ ವಿಶ್ವನಾಥನ್** ಅವರು 'ಚಕ್‌ಮಕ್'ನ ಸಂಪಾದಕರು. ಪರಿಸರ ತಜ್ಞೆಯಾಗಿ ತರಬೇತಿ ಪಡೆದ ಇವರು ಸಂಶೋಧಕಿ, ಶಿಕ್ಷಕಿ ಹಾಗೂ ವಿಜ್ಞಾನ ಬರಹಗಾರ್ತಿಯಾಗಿ ಕೆಲಸ ಮಾಡಿದ್ದಾರೆ. ಅವರನ್ನು vvinatha@gmail.com ಮೂಲಕ ಸಂಪರ್ಕಿಸಬಹುದು.



**ರುಚಿ ಶೇವಡೆ** ಅವರು ಭೋಪಾಲ್‌ನ ಏಕಲವ್ಯ ಫೌಂಡೇಷನ್‌ನ ಪ್ರಕಾಶನ ತಂಡದೊಂದಿಗೆ ಕೆಲಸ ಮಾಡುತ್ತಾರೆ. ಇವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾನಿಲಯದಿಂದ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನು (M.A in Education) ಪಡೆದಿರುತ್ತಾರೆ. ಇವರನ್ನು ruchi.shevade@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ದ ರಿಫ್ಲೆಕ್ಟಿವ್ ಲರ್ನರ್: ಸೀಯಿಂಗ್ 'ಮಿಸ್ಡ್ ಟೇಕ್ಸ್' ಇನ್ ಮಿಸ್ಟೇಕ್ಸ್ | ಪುಸ್ತಕ ವಿಮರ್ಶೆ

ಇಂದಿರಾ ವಿಜಯಸಿಂಹ

ವಿದ್ಯಾರ್ಥಿಗಳು ಮಾಡುವ ತಪ್ಪುಗಳು ಬಹುಬಾರಿ ಒಂದು ಬಗೆಯ ಕಿರಿಕಿರಿ, ಹತಾಶೆ ಮತ್ತು ಕೆಲವೊಮ್ಮೆ ಕೋಪಕ್ಕೂ ಕಾರಣವಾಗುತ್ತದೆ. ನಮ್ಮಲ್ಲಿ ಅನೇಕರಿಗೆ ಶಾಲಾ ವರ್ಕ್ ಪುಸ್ತಕದಲ್ಲಿ ನಮ್ಮ ತಪ್ಪುಗಳನ್ನು ಬಹಳ ಗಾಢವಾದ ಕೆಂಪು ಶಾಯಿಯಿಂದ ಎತ್ತಿ ತೋರಿಸಿದ ಗುರುತುಗಳು ಭಯಭೀತರಾಗಿ, ಅಪಮಾನಿಸಿದ, ಮೂರ್ಖ ಎಂಬ ಭಾವನೆಯನ್ನು ಉಂಟುಮಾಡಿದ ನೆನಪುಗಳಿವೆ. ಆದಾಗ್ಯೂ, ದೋಷಗಳನ್ನು ಕಲಿಕಾ ಪ್ರಕ್ರಿಯೆಯ ಒಂದು ಭಾಗವಾಗಿ ಕಾಣಬೇಕಾದ ಅಗತ್ಯವಿದೆ. ಈ ದೋಷಗಳು ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಬ್ಬರಲ್ಲೂ ಅನೇಕ ಒಳನೋಟಗಳನ್ನು ನೀಡಬಲ್ಲದು. 'ಒಂದೆಡೆ, ಕಲಿಕಾರ್ಥಿಗಳಿಗೆ ತಪ್ಪುಗಳಿಂದ ನೇರ ಪ್ರಯೋಜನವಾದರೆ, ಶಿಕ್ಷಕರು ಕೂಡ ತಪ್ಪುಗಳಿಂದ ಅಮೂಲ್ಯ ಮಾಹಿತಿಯನ್ನು ಗಳಿಸುತ್ತಾರೆ. ತಪ್ಪುಗಳತ್ತ ಸಹಿಷ್ಣುತೆಯಿದ್ದರೆ, ವಿದ್ಯಾರ್ಥಿಗಳು ಕ್ರಿಯಾಶೀಲರಾಗಿ, ಪ್ರಯೋಗಶೀಲರಾಗಿ, ಸಕಾರಾತ್ಮಕ ಚಟುವಟಿಕೆಗಳಲ್ಲಿ ಸಕ್ರಿಯರಾಗುವಂತೆ ಉತ್ತೇಜಿಸುತ್ತದೆ. 'ಕಡಿಮೆ ಆಸಕ್ತಿಯ ಕಲಿಕಾ ಸನ್ನಿವೇಶಕ್ಕಿಂತಲೂ, ಹೆಚ್ಚಿನ ಆಸಕ್ತಿಯ ಪರಿಸ್ಥಿತಿಗಳಲ್ಲಿ ಪ್ರಶಸ್ತವಾದ ಕಾರ್ಯಕ್ಷಮತೆಯು ಗುರಿಯಾಗಿದ್ದಲ್ಲಿ ಯಾವುದೇ ತಪ್ಪುಗಳಾಗದಂತೆ ನೋಡಿಕೊಳ್ಳುವುದಕ್ಕಿಂತಲೂ, ತಪ್ಪುಗಳನ್ನು ಮಾಡಲು ಮತ್ತು ಅವನ್ನು ಸರಿಪಡಿಸಲು ಅನುಮತಿಸುವುದು ಮತ್ತು ಕೆಲವೊಮ್ಮೆ ಪ್ರೋತ್ಸಾಹಿಸುವುದು ಉತ್ತಮ'. **(ಲರ್ನಿಂಗ್ ಫ್ರಮ್ ಎರರ್ಸ್ ಆನ್ಯುಯಲ್ ರಿವ್ಯು ಆಫ್ ಸೈಕಾಲಜಿ)***

'ಯಾವುದೇ ತಪ್ಪುಗಳು ಸಂಭವಿಸದಿರುವ ಪರಿಸ್ಥಿತಿಗಿಂತಲೂ ತಪ್ಪುಗಳನ್ನು ಮಾಡಲು ಬಿಟ್ಟು ಮತ್ತು ಅವುಗಳನ್ನು ಸರಿಪಡಿಸುವಂತಹದ್ದು ಸಂಗತಿಯ ಬಗ್ಗೆ ಬಹಳ ಉತ್ತಮ ಗ್ರಹಿಕೆಗೆ ಎಡೆಮಾಡಿಕೊಡುತ್ತದೆ' ಎಂದು ಎಲಿನರ್ ಡಕ್‌ವರ್ತ್ ತಮ್ಮ ದಿ ಹ್ಯಾವಿಂಗ್ ಆಫ್ ವಂಡರ್‌ಫುಲ್ ಐಡಿಯಾಸ್ ಎಂಬ ಮಹತ್ವದ ಪುಸ್ತಕದಲ್ಲಿ ಹೇಳಿದ್ದಾರೆ.

ಶಿಕ್ಷಕರು ವಿದ್ಯಾರ್ಥಿಗಳ ತಪ್ಪುಗಳ ಬಗ್ಗೆ ವ್ಯವಸ್ಥಿತವಾಗಿ ಅಧ್ಯಯನ ಮಾಡಿದರೆ, ವಿದ್ಯಾರ್ಥಿಗಳ ಚಿಂತನಾಕ್ರಮದ ಬಗ್ಗೆ ಉತ್ತಮ ತಿಳುವಳಿಕೆಯನ್ನು ಹೊಂದುತ್ತಾರೆಯೇ? ತಮ್ಮ ತಪ್ಪುಗಳನ್ನು ಗುರುತಿಸಿ ವಿಶ್ಲೇಷಿಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಮೂಲಕ ಶಿಕ್ಷಕರು ವಿದ್ಯಾರ್ಥಿಗಳಿಗೆ ತಪ್ಪುಗಳಿಂದ ಕಲಿಯಲು ನೆರವಾಗಬಲ್ಲರೇ? ಈ ಕೆಲವು ಪ್ರಶ್ನೆಗಳನ್ನು 'ರಿಫ್ಲೆಕ್ಟಿವ್ ಲರ್ನರ್' ಪುಸ್ತಕದಲ್ಲಿ ಚರ್ಚಿಸಲಾಗಿದೆ. ತಮ್ಮ ವಿದ್ಯಾರ್ಥಿಗಳ ತಪ್ಪುಗಳನ್ನು ವಿಶ್ಲೇಷಿಸಿದ ನಾಲ್ಕು ಶಿಕ್ಷಕರ ಅನುಭವಗಳನ್ನು ದಾಖಲಿಸಿದ ಒಂದು ಒಳನೋಟವುಳ್ಳ ಪುಸ್ತಕ ಇದಾಗಿದೆ. ಈ ವಿಶ್ಲೇಷಣೆಯ ಪ್ರಕ್ರಿಯೆಯಲ್ಲಿ ಶಿಕ್ಷಕರು ತಮ್ಮದೇ ಅಭ್ಯಾಸಗಳು, ವಿದ್ಯಾರ್ಥಿಗಳ ಬಗ್ಗೆ ಅವರಿಗಿರುವ ಕಲ್ಪಿತ ವಿಚಾರಗಳು, ಗ್ರಹಿಕೆಗಳು ಮತ್ತು ಪರಿಕಲ್ಪನೆಗಳ ಬಗ್ಗೆ ಗಾಢವಾಗಿ ಕೂಡಾ ಆಲೋಚಿಸಲು ಪ್ರಾರಂಭಿಸುತ್ತಾರೆ.

ಈ ಪುಸ್ತಕವು ಕಾರ್ಯನಿರತ ಶಿಕ್ಷಕರಿಗೆ ಚಿಂತಿಸಲು ಸಾಕಷ್ಟು ವಿಷಯಾಂಶಗಳನ್ನು ಒದಗಿಸುತ್ತದೆ. ಅಲ್ಲದೆ ಕ್ಲಿಷ್ಟ ಪರಿಭಾಷೆಗಳಿಂದ ಮುಕ್ತವಾಗಿದ್ದು, ಮುದ ನೀಡುವಂತಿದೆ. ಈ ಪುಸ್ತಕದ ಮುನ್ನುಡಿಯಲ್ಲಿ ಕಮಲಾ ಮುಕುಂದರವರು, **'ಮನೋವಿಜ್ಞಾನ' ಪದವು ಈ ಪುಸ್ತಕದೆಲ್ಲೆಡೆ ಕಂಡುಬರುತ್ತದೆಯಾದರೂ ಅದು ಎಲ್ಲೂ ಉಲ್ಲೇಖಗೊಂಡಿಲ್ಲ** (ಉಲ್ಲೇಖಿತ ಶೀರ್ಷಿಕೆಯ ಭಾಗದಲ್ಲಿ ಹೊರತುಪಡಿಸಿ) ಎಂದು ಬರೆದಿದ್ದಾರೆ.

ಶೈಕ್ಷಣಿಕ ಸಂಶೋಧನಾ ಲೇಖನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ 'ನಿಯಂತ್ರಕ ಗ್ರಹಿಕೆ', 'ಶಿಷ್ಟಾಚಾರಗಳು' ಮತ್ತು 'ನಿಯಂತ್ರಣ ಗುಂಪುಗಳು' ('Monitoring comprehension', 'protocols' and 'control groups') ಎಂಬಂತಹ ಪದಗಳು ಅ ಪುಸ್ತಕದಲ್ಲಿ ನಿಮಗೆ ಎದುರಾಗುವುದಿಲ್ಲ. ಅಂತಹ ಸಂಶೋಧನಾ ಲೇಖನಗಳು ಲೇಖಕರಿಗೆ ಶೈಕ್ಷಣಿಕ ಲಾಭಗಳನ್ನು, ಪದವಿಗಳನ್ನು ಅಥವಾ ಶೈಕ್ಷಣಿಕ ಯಶಸ್ಸಿನ ಮೆಟ್ಟಿಲನ್ನು ಏರಲು ನೆರವಾಗ–ಬಹುದೇನೋ. ಆದರೆ ಅವು ತಮ್ಮ ಕೆಲಸದಲ್ಲೇ ತಲ್ಲೀನರಾದ ಕ್ರಿಯಾಶೀಲ ಶಿಕ್ಷಕರಿಗೆ ಹೆಚ್ಚೇನೂ ನೀಡುವುದಿಲ್ಲ. ಈ ಅಂಶದಲ್ಲಿಯೇ ಪುಸ್ತಕದ ಸೌಂದರ್ಯ ಅಡಗಿದೆ. ಈ ಪುಸ್ತಕವು ಸಕ್ರಿಯವಾಗಿರುವ ಶಿಕ್ಷಕರನ್ನು ಉದ್ದೇಶಿಸಿದ್ದು, ಅವರಿಗೆ ಸಾಕಷ್ಟು ರೀತಿಯಲ್ಲಿ ನೆರವಾಗುತ್ತದೆ. ಈ ಪುಸ್ತಕವನ್ನು ಓದಿದ ನಂತರ, ಹೆಚ್ಚಿನ ಶಿಕ್ಷಕರು ತಮ್ಮ ತರಗತಿಗಳಲ್ಲಿ ಇಂತಹುದೇ ಪ್ರಯೋಗಗಳನ್ನು ಉತ್ಸಾಹದಿಂದ ಕೈಗೊಳ್ಳುವರೆಂದು ಮತ್ತು ಈ ಪ್ರಕ್ರಿಯೆಯಲ್ಲಿ ತಮ್ಮ ಉದ್ಯೋಗವನ್ನು ಹೆಚ್ಚು ಆಸಕ್ತಿದಾಯಕವಾಗಿ ಮತ್ತು ಅತ್ಯಂತ ತೃಪ್ತಿದಾಯಕವಾಗಿ ಕಂಡುಕೊಳ್ಳುತ್ತಾರೆಂದು ನಾನು ಭಾವಿಸುತ್ತೇನೆ.

ಈ ಪುಸ್ತಕದಲ್ಲಿ ಇಬ್ಬರು ಇಂಗ್ಲಿಷ್ ಶಿಕ್ಷಕರು ಮತ್ತು ಇಬ್ಬರು ಗಣಿತದ ಶಿಕ್ಷಕರು ಕೈಗೊಂಡ ಕ್ರಿಯಾ ಸಂಶೋಧನೆಯ ಅಧ್ಯಯನವನ್ನು ಮತ್ತು ಅವರ ಶೋಧನೆ ಮತ್ತು ಫಲಿತಗಳನ್ನು ಮುದ ನೀಡುವ ರೀತಿಯಲ್ಲಿ ನಿರೂಪಿಸಲಾಗಿದೆ. ಪ್ರತಿಯೊಬ್ಬ ಶಿಕ್ಷಕರ ಕಾರ್ಯವನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ. ಮೂವರು ಶಿಕ್ಷಕರ ಕಾರ್ಯವನ್ನು ನೀರಜ ರಾಘವನ್ ನಿರೂಪಿಸಿದರೆ, ಶಿಕ್ಷಕರಲ್ಲಿ ಒಬ್ಬರಾದ ಕಾಂಚನಾರವರು ತಮ್ಮ ಕೆಲಸವನ್ನು ಸಂಶೋಧನಾ ಅಧ್ಯಯನದ ರೂಪದಲ್ಲಿ ಬರೆದಿದ್ದಾರೆ. ಪ್ರಾರಂಭದಲ್ಲಿ ಪರಿಚಯಾತ್ಮಕ ಅಧ್ಯಾಯವಿದ್ದು ಇಲ್ಲಿ ಸಂದರ್ಭ ಹಾಗೂ ಹಿನ್ನೆಲೆಯನ್ನು ತಿಳಿಸಲಾಗಿದೆ. ನಂತರ ಈ ನಾಲ್ಕು ಅಧ್ಯಾಯಗಳು ಪ್ರಾರಂಭವಾಗುತ್ತವೆ. ಮುಕ್ತಾಯದ ಅಧ್ಯಾಯವು ನಾಲ್ಕು ನಿರೂಪಣೆಯನ್ನು ಹೊಂದಿದ್ದು, ಇಡೀ ಪ್ರಕ್ರಿಯೆಯ ಪಕ್ಷಿನೋಟವನ್ನು ಒದಗಿಸುತ್ತದೆ.

ಕಾಂಚನಾ ಅವರು ಹೇಳುವಂತೆ, ಪುಸ್ತಕವು ವಿಫುಲ ಉದಾಹರಣೆಗಳ ಮೂಲಕ, 'ಶಿಕ್ಷಕ–ಸಂಶೋಧಕರು ವಿದ್ಯಾರ್ಥಿಯ ಕೆಲಸದಲ್ಲಿ ತಪ್ಪುಗಳನ್ನು ಗುರುತಿಸುವುದರ ಬದಲು (ವಿದ್ಯಾರ್ಥಿಗೆ ತಪ್ಪು ಮಾಡದಿರುವುದು ಹೇಗೆಂದು ಕಲಿಸಲು) ವಿದ್ಯಾರ್ಥಿಯ ಆಲೋಚನಾ ವಿಧಾನದ ಬಗ್ಗೆ ಉತ್ತಮವಾದ ತಿಳುವಳಿಕೆ ಪಡೆಯಲು

ತಪ್ಪುಗಳನ್ನು ವಿಶ್ಲೇಷಿಸುವತ್ತ ಹೇಗೆ ಬದಲಾದರೆಂದು ವಿವರಿಸುತ್ತದೆ. ಈ ಎಲ್ಲಾ ನಾಲ್ವರು ಶಿಕ್ಷಕರು ವಿದ್ಯಾರ್ಥಿಗಳಿಗೆ ತಮ್ಮ ಸ್ವಂತ ಆಲೋಚನೆಯ ಬಗ್ಗೆ ಅರಿವು ಹೊಂದಲು, ತಮ್ಮ ತಪ್ಪುಗಳನ್ನು ಕಂಡುಹಿಡಿಯಲು ಸಹಾಯ ಮಾಡುತ್ತಾ ಆ ಮೂಲಕ, ತಮ್ಮ ಸ್ವಂತ ಕಲಿಕೆಯ ಬಗ್ಗೆ ಹೆಚ್ಚಿನ ಜವಾಬ್ದಾರಿಯನ್ನು ತೆಗೆದುಕೊಳ್ಳುವಲ್ಲಿ ಸಶಕ್ತರಾಗುವಂತೆ ಮಾಡುತ್ತಾರೆ. ಶಿಕ್ಷಕರ ಈ ಕ್ರಿಯಾ ಸಂಶೋಧನೆಯ ಪರಿಣಾಮವಾಗಿ, ವಿದ್ಯಾರ್ಥಿಗಳು ತಮ್ಮ ಸಾಮರ್ಥ್ಯಗಳ ಬಗ್ಗೆ ಹೆಚ್ಚು ಆತ್ಮವಿಶ್ವಾಸ ಹೊಂದಿದ್ದಾರೆ ಮತ್ತು ಅವರಲ್ಲಿ ಹಲವರು ಪಠ್ಯವಿಷಯದ ಬಗ್ಗೆ ಹೆಚ್ಚಿನ ತಲ್ಲೀನತೆ ಹಾಗೂ ಆಸಕ್ತಿ ಹೊಂದಿದ್ದಾರೆ. ಪ್ರೇರಣಾ, ಮೈಕೆಲ್, ಗೋಪಿ ಮತ್ತು ಕಾಂಚನಾ ಎಂಬ ಈ ನಾಲ್ವರು ಶಿಕ್ಷಕರು ಮಕ್ಕಳ ತಪ್ಪುಗಳ ಬಗ್ಗೆ ಗಂಭೀರವಾಗಿ ಅಧ್ಯಯನ ಮಾಡಲು ಪ್ರಾರಂಭಿಸಿ, ಅದರ ಆಧಾರದಲ್ಲಿ ತರಗತಿ ಕಾರ್ಯತಂತ್ರವನ್ನು ಸ್ಥೂಲವಾಗಿ ರೂಪಿಸಲು ಮುಂದಾದರು. ಅವರೆಲ್ಲರೂ ಅನಿವಾರ್ಯವಾಗಿ ವಿದ್ಯಾರ್ಥಿಗಳ ತಪ್ಪುಗಳನ್ನು ವರ್ಗೀಕರಿಸಲು ಪ್ರಾರಂಭಿಸಿ ಅವುಗಳ ವಿನ್ಯಾಸವನ್ನು ಗಮನಿಸಲು ಮುಂದಾದರು. ನಂತರ ಅವರು ತಪ್ಪುಗಳತ್ತ ವಿದ್ಯಾರ್ಥಿಗಳ ಗಮನ ಮತ್ತು ಆಸಕ್ತಿಯನ್ನು ಸೆಳೆಯಲು ಪ್ರಯತ್ನಿಸಿದರು. ಕೊನೆಗೆ ಅವರು ವಿದ್ಯಾರ್ಥಿಗಳಿಗೆ ತಾವೇ ತಮ್ಮ ತಪ್ಪುಗಳನ್ನು ಗುರುತಿಸಲು, ವಿಶ್ಲೇಷಿಸಲು ಮತ್ತು ಅವುಗಳಿಂದ ಹೊರಬರಲು ಸಾಕಷ್ಟು ಸಮಯವನ್ನು ಮತ್ತು ಅಭ್ಯಾಸಗಳನ್ನು ನೀಡಿದರು. ಕೆಲವು ತಪ್ಪುಗಳು ವಿದ್ಯಾರ್ಥಿಗಳಲ್ಲಿ ಪದೇಪದೇ ಮರುಕಳಿಸುವಂತೆ ಕಂಡುಬಂದರೆ, ವಿದ್ಯಾರ್ಥಿಗಳಲ್ಲಿ ಇನ್ನೂ ಕೆಲವು ನಿರ್ದಿಷ್ಟ ವಿನ್ಯಾಸದ ತಪ್ಪುಗಳಿರುವುದನ್ನು ಅವರು ಕಂಡುಕೊಂಡರು.

5ನೇ ತರಗತಿಗೆ ಇಂಗ್ಲಿಷ್ ಕಲಿಸುವ ಪ್ರೇರಣಾ ಮತ್ತು 9 ಮತ್ತು 10 ತರಗತಿಗಳಿಗೆ ಗಣಿತವನ್ನು ಕಲಿಸುವ ಕಾಂಚನಾ ಇವರಿಬ್ಬರೂ, ತಪ್ಪುಗಳ ವಿಂಗಡಣೆ ಯೋಜನೆಯೊಂದನ್ನು ಬಳಸಿ, ವಿದ್ಯಾರ್ಥಿಗಳು ತಮ್ಮ ತಪ್ಪುಗಳನ್ನು ವಿಶ್ಲೇಷಿಸಲು ನೆರವಾದರು. ಎಂಟನೇ ತರಗತಿಗೆ ಇಂಗ್ಲಿಷ್ ಕಲಿಸುವ ಮೈಕೆಲ್, ತಪ್ಪುಗಳನ್ನು ಗುರುತಿಸುವ ಮತ್ತು ಅವನ್ನು ವಿಭಜಿಸಲು ವಿದ್ಯಾರ್ಥಿಗಳಿಗೆ ನೆರವಾಗುವಂಥ ಕಾಂಚನಾರಿಗೆ ಸಮಾನವಾದ ಅನುಭವವನ್ನು ಹೊಂದಿದ್ದರು. ಮೈಕೆಲ್ ಅವರು, ವಿದ್ಯಾರ್ಥಿಗಳ ವರ್ಕ್‌ಬುಕ್‌ನ ಅಂಚಿನಲ್ಲಿ ತಪ್ಪುಗಳನ್ನು ಸೂಚಿಸುವ ತಂತ್ರವನ್ನು ಕಂಡುಕೊಂಡು, ಸುಳಿವುಗಳನ್ನು ನೀಡುವ ಮೂಲಕ ವಿದ್ಯಾರ್ಥಿಗಳಿಗೆ ತಮ್ಮ ತಪ್ಪುಗಳನ್ನು ಅರಿಯಲು ನೆರವಾದರು. ಕಾಂಚನಾರವರು ವಿದ್ಯಾರ್ಥಿಗಳ ಜೊತೆಗೆ ವೈಯಕ್ತಿಕ ಮಾತುಕತೆಯಲ್ಲಿ ತೊಡಗಿ ಅವರಿಗೆ ತಮ್ಮ ತಪ್ಪುಗಳನ್ನು ವರ್ಗೀಕರಿಸಲು ಸೂಚಿಸಿದರು. ಸಂಬಂಧಪಟ್ಟ ವಿದ್ಯಾರ್ಥಿಯ ಜೊತೆಗೆ ಚರ್ಚಿಸಿದ ನಂತರ ತಪ್ಪನ್ನು ತಾವು ವರ್ಗೀಕರಿಸಿದ ರೀತಿಯನ್ನು ಬದಲಿಸಬೇಕಾಗಿ ಬಂದದ್ದು ಕುತೂಹಲಕಾರಿ ವಿಷಯ.

ಎಲ್ಲ ನಾಲ್ಕು ಪ್ರಕರಣಗಳಲ್ಲಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ತಮ್ಮ ಆಲೋಚನಾ ಪ್ರಕ್ರಿಯೆಯ ಬಗ್ಗೆ ಹೆಚ್ಚಿನ ಒಳನೋಟಗಳನ್ನು ಪಡೆದಂತೆ ಕಂಡುಬಂದಿತು. ಕ್ರಿಯಾ ಸಂಶೋಧನೆಯಲ್ಲಿ ರೂಪಿಸಿದ 9 ಪ್ರಯೋಗಗಳ ಸರಣಿಯಲ್ಲಿ ಗಣಿತದ ಸಮಸ್ಯೆಗಳ ಮೂಲಕ ಮಕ್ಕಳು ಹೇಗೆ ಯೋಚಿಸುತ್ತಾರೆ ಎಂಬ ಆಕರ್ಷಕ ಅನ್ವೇಷಣೆಯನ್ನು 8, 9, 10ನೇ ತರಗತಿಗಳಿಗೆ ಗಣಿತವನ್ನು ಕಲಿಸುವ ಗೋಪಿಯವರು ಕಂಡುಕೊಂಡರು. ಅವರು ತಮ್ಮ ಪರಿಹಾರ ಪ್ರಕ್ರಿಯೆಯನ್ನು ನಾಲ್ಕು ಹಂತಗಳಾಗಿ ವಿಂಗಡಿಸಿದರು ಮತ್ತು ಪ್ರತಿ ಹಂತವನ್ನು ಹೇಗೆ ನಿಭಾಯಿಸುವುದೆಂದು ಹುಡುಕಲು ವಿದ್ಯಾರ್ಥಿಗಳು ವ್ಯವಸ್ಥಿತವಾಗಿ ಕೆಲಸ ಮಾಡುವಂತೆ ಮಾಡಿದರು. ಅವರ ಕೆಲಸದ ವಿವರಗಳು ಓದಲು ಬಹಳ ಆಕರ್ಷಕವಾಗಿದೆ. ಮೇಲ್ನೋಟದ ತಪ್ಪುಗಳನ್ನು ತಡೆಯಲು ವಿದ್ಯಾರ್ಥಿಗಳಿಗೆ ನೆರವಾಗುವುದು ತನ್ಮೂಲಕ ವಿದ್ಯಾರ್ಥಿಗಳು ವ್ಯವಸ್ಥಿತವಾಗಿ ಸಮಸ್ಯೆಯ ಬಗ್ಗೆ ಅರಿಯುವಂತೆ ಈ ಇಬ್ಬರೂ ಗಣಿತದ ಶಿಕ್ಷಕರು ಕಾರ್ಯತಂತ್ರವನ್ನು ರೂಪಿಸಿದರು. ಇವರಿಬ್ಬರೂ, ವಿದ್ಯಾರ್ಥಿಗಳು ತಮ್ಮ ಆಲೋಚನೆಯನ್ನು ಅರಿಯುವಂತೆ ಸಹಾಯ ಮಾಡುವಲ್ಲಿ ಹೆಚ್ಚಾಗಿ ಯಶಸ್ವಿಯಾಗಿದ್ದಾರೆಂದು ಇಲ್ಲಿ ತೋರುತ್ತದೆ. ಇದು ವಿದ್ಯಾರ್ಥಿಗಳು ಗಣಿತದ ಕಡೆಗೆ ಸಕಾರಾತ್ಮಕ ಭಾವನೆಯನ್ನು ಹೊಂದಿ ಕಲಿಯುವಲ್ಲಿ ಹೆಚ್ಚು ತೊಡಗಿರುವ ತಲ್ಲೀನ ಕಲಿಕಾರ್ಥಿಗಳಾಗಲು ಕಾರಣವಾಯಿತು.

ಆಸಕ್ತಿದಾಯಕ ವಿಚಾರವೆಂದರೆ, ಶಿಕ್ಷಕರು ವಿದ್ಯಾರ್ಥಿಗಳ ತಪ್ಪುಗಳ ಮೇಲೆ ಕ್ರಿಯಾಶೀಲರಾಗಿದ್ದಾಗ, ಇವೆಲ್ಲವನ್ನು ವಿದ್ಯಾರ್ಥಿಗಳ ಚಿಂತನೆಯುತ್ತ ಒಂದು ಕಿಟಕಿಯಾಗಿ ಗಮನಿಸತೊಡಗಿದಾಗ, ಶಿಕ್ಷಕರು ಕೂಡಾ ವಿಷಯಗಳು ಮತ್ತು ವಿದ್ಯಾರ್ಥಿಗಳ ಕುರಿತಂತೆ ತಮ್ಮದೇ ಚಿಂತನೆಯತ್ತಲೂ ಹೆಚ್ಚು ಜಾಗೃತರಾಗುತ್ತಾರೆ. ಕೆಲವೊಮ್ಮೆ ಶಿಕ್ಷಕರು ಪ್ರಶ್ನೆಯನ್ನು ರೂಪಿಸುವ ವಿಧಾನದಿಂದಲೂ ತಪ್ಪುಗಳು ಸಂಭವಿಸಬಹುದೆಂದು ವಿದ್ಯಾರ್ಥಿ ತಪ್ಪುಗಳ ಮೂಲಗಳನ್ನು ವಿಶ್ಲೇಷಿಸುವಾಗ ಪ್ರೇರಣಾ ಅವರು ಕಂಡುಕೊಂಡರು. ಒಂದು ಪರೀಕ್ಷೆಯಲ್ಲಿ ಮಕ್ಕಳಿಗೆ ತಯಾರಿಸಿದ ಒಂದು ಪ್ರಶ್ನೆಯನ್ನು ಉತ್ತರಿಸಲು ತಮಗೇ ಕಷ್ಟವಾಯಿತೆಂದು ಅವರು ಕಂಡುಕೊಂಡರು! ಮೈಕೆಲ್ ವೈಯಕ್ತಿಕ ವಿದ್ಯಾರ್ಥಿಗಳ ಬಗ್ಗೆ ತಮ್ಮ ಕಲ್ಪಿತ ಭಾವನೆಗಳನ್ನು ಅರಿತರು ಮತ್ತು ತಮ್ಮ ಕ್ರಿಯಾ ಸಂಶೋಧನೆಯ ಪ್ರಕ್ರಿಯೆಯ ಹಾದಿಯಲ್ಲಿ ಈ ಭಾವನೆಗಳ ಬಗ್ಗೆ ಪರಿಶೀಲಿಸಿ ಪುನರ್ ನಿರ್ಧಾರಣೆ ಮಾಡಲು ಕಲಿತರು. ತಮ್ಮ ಸಂಶೋಧನೆಯ ಕೊನೆಯಲ್ಲಿ ತಮ್ಮ ಇಂಗ್ಲಿಷ್ ಭಾಷೆಯ ಬಳಕೆ ಸುಧಾರಿಸಿತೆಂದು ಅವರಿಗೆ ಅನಿಸಿತು.

ಕಲಿಕೆಯ ಗುರಿಗಳನ್ನು ಸಾಧಿಸಲು ಒಟ್ಟಾಗಿ ಕೆಲಸ ಮಾಡುತ್ತಿದ್ದಂತೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಏನು ನಡೆಯುತ್ತಿದೆ ಎಂಬುದರ ಬಗ್ಗೆ ಪುಸ್ತಕದ ಪ್ರತಿಯೊಂದು ಅಧ್ಯಾಯವು ಬಹಳಷ್ಟು ಹೇಳುತ್ತದೆ. ಈ ಪುಸ್ತಕವು ವಿದ್ಯಾರ್ಥಿಗಳಿಗೆ ಅರಿವಿನ ಬಗ್ಗೆ ಅರಿವು ಮೂಡಿಸುವ ಕೌಶಲ್ಯಗಳನ್ನು ಬೆಳೆಸಿಕೊಳ್ಳಲು ಮತ್ತು ಮೌಲ್ಯೀಕರಿಸಲು ಸಹಾಯ ಮಾಡುವ ತಂತ್ರಗಳನ್ನು ಹೇಗೆ ಶಿಕ್ಷಕರು ರೂಪಿಸಿದರು ಎಂಬುದನ್ನು ವಿವರಿಸುತ್ತದೆ. ಈ ಪ್ರಯತ್ನದ ಮೂಲಕ ಕೊನೆಗೆ ಹೇಗೆ ತಾವು ಹೆಚ್ಚಿನ ತಿಳುವಳಿಕೆಯೊಂದಿಗೆ ಕಲಿಯಬಹುದು, ತಪ್ಪುಗಳು ನಾಚಿಕೆಪಡುವ ಸಂಗತಿಯಾಗಿರಬೇಕಾಗಿಲ್ಲ, ತಾವೇ ಸ್ವತಃ ತಮ್ಮ ತಪ್ಪುಗಳನ್ನು ಕಡಿಮೆ ಮಾಡಬಹುದು ಎಂಬುದನ್ನು ವಿದ್ಯಾರ್ಥಿಗಳು ಅರಿತುಕೊಳ್ಳಲು ಪ್ರಾರಂಭಿಸಿದರು. ವಿದ್ಯಾರ್ಥಿಯು ಪ್ರಗತಿ ಸಾಧಿಸುತ್ತಿದ್ದಂತೆ ತಪ್ಪುಗಳ ಗತಿಯು ಮೇಲಕ್ಕೆ ಹೋಗುತ್ತಿರುವಂತೆ ಕಾಣುವುದು ಸಾಮಾನ್ಯ ನಿರೀಕ್ಷೆಯೆಂದು ಭಾಸವಾಗುವುದು. ಆದರೆ, ಇದನ್ನೇ ಒಬ್ಬ ವಿದ್ಯಾರ್ಥಿಯಲ್ಲಿ ಮೈಕೆಲ್ ಗಮನಿಸಿದ ವಿಷಯ. ಆ ಹುಡುಗ ತನ್ನ ಬರಹದ ಬಗ್ಗೆ ಹೆಚ್ಚು ಭರವಸೆ ಹೊಂದಿ ಸರಳ ಬರಹಕ್ಕಿಂತ ಸಂಕೀರ್ಣ ವಾಕ್ಯಗಳನ್ನು ರಚಿಸಲು ಬಹಳ ವಿಸ್ತೃತ ಶಬ್ದಕೋಶವನ್ನು ಬಳಸಲು ಪ್ರಾರಂಭಿಸಿದನು. ಆಗ ಅವರು ಈ ವಿದ್ಯಾರ್ಥಿಯ ಹೆಚ್ಚಿದ ತಪ್ಪಿನ ಸಂಖ್ಯೆಯು ಪ್ರಗತಿಯ ಗುರುತು ಎಂಬ ತೀರ್ಮಾನಕ್ಕೆ ಸರಿಯಾಗಿಯೇ ಬಂದರು.

ಪುಸ್ತಕದ ಮುಕ್ತಾಯದ ಅಧ್ಯಾಯವು ಕೆಲವು ಸಂಬಂಧಿತ ಸಾಹಿತ್ಯದ ಬಗ್ಗೆ ಒಂದು ಅವಲೋಕನವನ್ನು ಹೊಂದಿದ್ದು, ಆದರೆ ಅದಕ್ಕಿಂತಲೂ ಮುಖ್ಯವಾಗಿ, ಹೆಚ್ಚಿನ ಶಿಕ್ಷಕರು ಸಂಶೋಧಕರಾಗಲು ಪ್ರೋತ್ಸಾಹಿಸುವ ಮತ್ತು ವಿದ್ಯಾರ್ಥಿಗಳು ಚಿಂತನಶೀಲ

ಕಲಿಕಾರ್ಥಿಗಳಾಗಲು ನೆರವಾಗುವಂತೆ ವಿವಿಧ ಮಾರ್ಗಗಳನ್ನು ಹುಡುಕುವ ಒಂದು ಪ್ರಯತ್ನವಾಗಿದೆ. ಹೆಚ್ಚಿನ ಪ್ರಾವೀಣ್ಯತೆ ಮತ್ತು ಆಳವಾದ ಕಲಿಕೆಯತ್ತ ತಪ್ಪುಗಳು ಮೆಟ್ಟಿಲ ಕಲ್ಲುಗಳಾಗುವಂತೆ ಒಂದು ಆರೋಗ್ಯಕರ ಕಲಿಕಾ ವಾತಾವರಣಕ್ಕೆ ಅಗತ್ಯವಿರುವ ಸನ್ನಿವೇಶಗಳನ್ನು ಈ ಅಧ್ಯಾಯವು ಸ್ಪಷ್ಟವಾಗಿ ತಿಳಿಸುತ್ತದೆ.

ಅಂತಹ ಒಂದು ಕಾರ್ಯವನ್ನು ನಿರ್ವಹಿಸಲು ಪ್ರಮುಖ ಪೂರ್ವಭಾವಿ ಸ್ಥಿತಿಯೆಂದರೆ, ತಪ್ಪುಗಳನ್ನು ನೋಡಿ ಅವಮಾನಿಸದೆ ಅಥವಾ ದೂಷಿಸದೆ ಅವುಗಳನ್ನು ಗುರುತಿಸಿ ವಿಶ್ಲೇಷಿಸುವ ಒಂದು ವಾತಾವರಣವನ್ನು ಸೃಷ್ಟಿಸುವುದು. ಇಷ್ಟೇ ಅಲ್ಲದೇ, ಈ ಅಧ್ಯಾಯವು ಕ್ರಿಯಾ ಸಂಶೋಧನೆಯನ್ನು ಕೈಗೊಳ್ಳುವ ಹಂತಗಳನ್ನೂ ಸಹ ತಿಳಿಸುತ್ತದೆ ಮತ್ತು ಈ ಪುಸ್ತಕದಲ್ಲಿ ಪ್ರತಿಯೊಬ್ಬ ನಾಲ್ವರು ಶಿಕ್ಷಕರು ಕೈಗೊಂಡ ಕಾರ್ಯ ವಿಧಾನದ ಕುರಿತ ತುಂಬಾ ಉಪಯುಕ್ತವಾದ ಗತಿ ನಕ್ಷೆಗಳನ್ನು ಒದಗಿಸಲಾಗಿದೆ.

ಒಟ್ಟಾರೆಯಾಗಿ, ಈ ಪುಸ್ತಕವು ಬಹುವಾಗಿ ಓದಬಹುದಾದ ಪುಸ್ತಕವಾಗಿದ್ದು, ಈ ಬಗ್ಗೆ ವಿಚಾರಿಸುತ್ತಿರುವ ಭಾರತೀಯ ಶಿಕ್ಷಕರಿಗಾಗಿ ಸೀಮಿತ ಪ್ರತಿಗಳು ಲಭ್ಯವಿವೆ. ಮಕ್ಕಳು ಪದೇಪದೇ ಏಕೆ ಒಂದೇ ರೀತಿಯ ತಪ್ಪುಗಳನ್ನು ಮಾಡುತ್ತಾರೆ? ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿಂದ ಒಂದೇ ತಪ್ಪು ಏಕಾಗುತ್ತದೆ? ಈ ತಪ್ಪುಗಳಿಂದ ನಾವು ಏನನ್ನು ಕಲಿಯಬಹುದು? ಉತ್ತಮವಾಗಿ ಕಲಿಯಲು ನಾವು ಮಕ್ಕಳಿಗೆ ಹೇಗೆ ಸಹಾಯ ಮಾಡಬಹುದು? ಈ ನಿಟ್ಟಿನಲ್ಲಿ ಪುಸ್ತಕವು ಬಹಳ ಮೌಲ್ಯಯುತವಾದದ್ದು. ತಮ್ಮ ಹಿಂದಿನ 'ರಿಫ್ಲೆಕ್ಟಿವ್ ಟೀಚರ್' ಎಂಬ ಪುಸ್ತಕದ ಸಾರವನ್ನೇ ಇಲ್ಲಿ ನೀರಜ ರಾಘವನ್ ಮುಂದುವರೆಸಿದ್ದಾರೆ. ಕಲಿಕಾರ್ಥಿಗಳು ಕೂಡ ಹೇಗೆ ಚಿಂತನಶೀಲರಾಗುವಂತೆ ಪ್ರೋತ್ಸಾಹಿಸಲು, ಚಿಂತನಶೀಲ ಕಲಿಕೆಯ ವ್ಯಾಪ್ತಿಯನ್ನು ಹೇಗೆ ವಿಸ್ತರಿಸಬಹುದೆಂದು ಇಲ್ಲಿ ನಮಗೆ ಬಹಳ ಸಮೃದ್ಧವಾದ ವಿವರಣೆಯನ್ನು ನೀಡಲಾಗಿದೆ.

ಖಂಡಿತವಾಗಿ ಇದು ಕಪಾಟಿನಲ್ಲಿಟ್ಟು ಧೂಳು ಸೇರಲು ಬಿಡುವಂಥ ಪುಸ್ತಕವಲ್ಲ. ಇದನ್ನು ವ್ಯಾಪಕವಾಗಿ ಓದಬೇಕಾಗಿದೆ, ತರಗತಿಗಳಲ್ಲಿ ಮತ್ತು ಶಿಕ್ಷಕರ ಕೊಠಡಿಗಳಲ್ಲಿ ಚರ್ಚಿಸಬೇಕಾಗಿದೆ. ತನ್ಮೂಲಕ ಹೆಚ್ಚುಹೆಚ್ಚು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಪರಸ್ಪರರ ಮನೋಲೋಕವನ್ನು ಪ್ರವೇಶಿಸುವಂತಾಗಬೇಕಾಗಿದೆ.

*Learning from Errors Annual Review of Psychology, Vol. 68:465-489 (Volume publication date January 2017) First published online as a Review in Advance on September 14, 2016 https://doi.org/10.1146/annurev-psych-010416-044022)




**ಶೀರ್ಷಿಕೆ:**

The Reflectve Learner:
Seeing 'Missed Takes' in Mistakes

**ಲೇಖಕರು:**

ನೀರಜ ರಾಘವನ್

**ಪೇಪರ್‌ಬ್ಯಾಕ್:**

186 ಪುಟಗಳು

**ಪ್ರಕಾಶಕರು:**

ನೋಟನ್ ಪ್ರೆಸ್; 1 ಸಂಪುಟ
(14 ನವೆಂಬರ್ 2019)

**ಭಾಷೆ:**

ಇಂಗ್ಲಿಷ್

**ISBN-10:**
164678801 ಎಕ್ಸ್

**ISBN-13:**
978-1646788019

Noton Press.com ಮತ್ತು Amazon.inನಲ್ಲಿ ಲಭ್ಯ



ಮಾನವನ ಒಳಿತು ಅಥವಾ ಯೋಗಕ್ಷೇಮ ಮತ್ತು ಅದನ್ನು ಉತ್ತೇಜಿಸುವ ಅಥವಾ ಹಾನಿ ಮಾಡುವಲ್ಲಿ ಶಿಕ್ಷಣದ ಪಾತ್ರದ ವಿಷಯಗಳು ಇಂದಿರಾರವರ ಆಳವಾದ ಕಾಳಜಿಯ ವಿಷಯಗಳು. ಮಾನವ, ಮಾನವೇತರ ವಸ್ತು ಪ್ರಪಂಚದ ಪರಿಸರ ವ್ಯವಸ್ಥೆಯಲ್ಲಿ ಎಲ್ಲ ಪಾಲುದಾರರ ನಡುವೆ ಪರಸ್ಪರ ದೃಢೀಕರಿಸುವ ಮತ್ತು ನಿರಂತರತೆಯ ಒಂದು ಜಾಲವಾಗಿ ಅವರು ಯೋಗಕ್ಷೇಮವನ್ನು ಅರ್ಥೈಸುತ್ತಾರೆ. ಶಿಕ್ಷಕರಾಗಿ ಮತ್ತು ಕಲಿಕಾ ಶಿಕ್ಷಕರಾಗಿ ಅವರ ಕಾರ್ಯವು ಶಿಕ್ಷಣದ ಪ್ರಕ್ರಿಯೆಗಳ ಬಗ್ಗೆ ಆಳವಾದ ಪ್ರಶ್ನೆಯನ್ನು ಕೇಳಲು ಪ್ರೇರೇಪಿಸಿತು ಮತ್ತು ಇದರಿಂದ ಅವರು ಪೂರ್ಣಾ ಲರ್ನಿಂಗ್ ಸೆಂಟರ್ ಎಂಬ ಒಂದು ಪರ್ಯಾಯ ಶಾಲೆಯನ್ನು ಪ್ರಾರಂಭಿಸಲು ಕಾರಣವಾಯಿತು. ಇಂದಿರಾರವರು ಜನವರಿ 2020ರಲ್ಲಿ ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ನಿವೃತ್ತರಾದರು. ಈಗ ಅವರು ತಮ್ಮ ಪೂರ್ಣಾ ಸಂಸ್ಥೆಯಲ್ಲಿ ಸಕ್ರಿಯವಾಗಿ ನಿರತರಾಗಿದ್ದಾರೆ. ಇಂದು ಅವರ ಹಲವಾರು ಶೈಕ್ಷಣಿಕ ಮತ್ತು ಜನಪ್ರಿಯ ಲೇಖನಗಳು ಪ್ರಕಟವಾಗಿವೆ. ಅವರನ್ನು indira502@gmail.com ನಲ್ಲಿ ಸಂಪರ್ಕಿಸಬಹುದು

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಶಿಕ್ಷಾ: ಮೈ ಎಕ್ಸ್‌ಪೆರಿಮೆಂಟ್ಸ್ ಆ್ಯಸ್ ಆ್ಯನ್ ಎಜುಕೇಷನ್ ಮಿನಿಸ್ಟರ್ | ಪುಸ್ತಕ ವಿಮರ್ಶೆ

ಪ್ರೇಮಾ ರಘುನಾಥ್

ಈ ಪುಸ್ತಕವು ಆಮ್ ಆದ್ಮಿ ಪಕ್ಷದ ಮೊದಲ ಅಧಿಕಾರಾವಧಿಯಡಿ ದೆಹಲಿ ಸರಕಾರವು ಜಾರಿಗೆ ತಂದ ಶಿಕ್ಷಣ ನೀತಿಯ ಸ್ಥೂಲ–ಚಿತ್ರಣವನ್ನು ಕೊಡುತ್ತದೆ.

ಸಾರ್ವತ್ರಿಕ ಭಾಗವಹಿಸುವಿಕೆಯನ್ನು ಉತ್ತೇಜಿಸುವ ಒಂದು ಸಂಗತಿಯಾಗಿ ಶಿಕ್ಷಣವು, ಅಭಿಪ್ರಾಯ ಅಥವಾ ಆಕ್ರೋಶದ ರೂಪದಲ್ಲಿ, ಇಂದು ಮತ್ತು ಇನ್ನು ಮುಂದೆಯೂ ಮುಂದುವರಿಯುತ್ತದೆ. ಪ್ರತಿಯೊಬ್ಬರಿಗೂ, ಏನನ್ನು ಕಲಿಸಬೇಕು, ಹೇಗೆ, ಯಾವಾಗ ಮತ್ತು ಯಾಕೆ ಎಂಬ ಅಭಿಪ್ರಾಯಗಳು ಇರುತ್ತವೆ. ಶಾಲೆಗಳು ತಮ್ಮ ಯಶಸ್ಸಿನ ಪ್ರಮಾಣವನ್ನು ಜಾಹೀರಾತು ಮಾಡುತ್ತವೆ ಮತ್ತು ಈ ಪ್ರಕ್ರಿಯೆಯಲ್ಲಿ ವಿದ್ಯಾರ್ಥಿಗಳಿಗೆ ಏನಾಗಬಹುದೆಂಬ ಅರಿವು ಅಥವಾ ಕಾಳಜಿಯನ್ನು ಹೊಂದದೆ, ಕೆಲವು ಶಾಲೆಗಳು 'ನೂರಕ್ಕೆ ನೂರು ಫಲಿತಾಂಶ' ತೆಗೆಯುವ ತಮ್ಮ ಸಾಮರ್ಥ್ಯದಿಂದ ಇತರ ಶಾಲೆಗಳಿಗಿಂತ ಹೆಚ್ಚು ಪ್ರಸಿದ್ಧಿ ಪಡೆಯುತ್ತವೆ.

ಆದರೂ, ಒಂದು ದೇಶದ ಅಥವಾ ಯಾವುದೇ ದೇಶದ ಶಿಕ್ಷಣ ವ್ಯವಸ್ಥೆಯ ಯಶಸ್ಸು ಅದರ ಶಿಕ್ಷಕರ ಕೈಯಲ್ಲಿದೆ. ಜೊತೆಗೆ ಶಿಕ್ಷಕರು ಪಡೆದ ಸಮನ್ವಯ ಮತ್ತು ಸಮಾನತೆಯ ಸಮಾಜವನ್ನು ಸೃಷ್ಟಿಸುವಂತಹ ತರಬೇತಿಯ ಮೇಲೆ ಅವಲಂಬಿತವಾಗಿರುತ್ತದೆ; ಮತ್ತು ಅವರು ಪಠ್ಯಪುಸ್ತಕವನ್ನು ವ್ಯಾಖ್ಯಾನಿಸುವ ವಿಧಾನ, ಆ ಪಠ್ಯಪುಸ್ತಕಗಳು ರಚಿಸಲ್ಪಟ್ಟ ರೀತಿಯಲ್ಲಿರುತ್ತದೆ. ಶಿಕ್ಷಣದ ಸಂಯೋಜಿತ ವಿಚಾರಗಳಿಗೆ ಸರಕಾರ ಕೊಡುವ ಪ್ರಾಮುಖ್ಯತೆಯು ಮತ್ತೊಂದು ಅತ್ಯಂತ ಪ್ರಮುಖ ಅಂಶವಾಗಿದೆ: ಇದು ಕೇವಲ ಬಾಯಿ ಮಾತಿನ ಉಪಚಾರವಾಗಿರದೆ, ತನ್ನ ಆಶಯವನ್ನು ಮಾತಿನಿಂದ ಕೃತಿಗೆ ಇಳಿಸುವ ಮೂಲಕ ಆಗಿರಬೇಕು.

ಶಿಕ್ಷಣ ಸಚಿವ, ಆ ಬಳಿಕ ಉಪ ಮುಖ್ಯಮಂತ್ರಿಯಾದ ಮನೀಷ್ ಸಿಸೋಡಿಯಾ ಅವರ ಈ ಪುಸ್ತಕವು, ಶಿಕ್ಷಣದ ಮೌಲ್ಯ ಕುರಿತ ತಮ್ಮ ಎಲ್ಲಾ ಆಶಯಗಳನ್ನು ಅಸ್ತಿತ್ವದಲ್ಲಿದ್ದ ಅಡೆತಡೆಗಳ ಮುರಿಯುವಿಕೆಗೆ ಹೇಗೆ ಬಳಸಿಕೊಂಡೆವು ಎಂಬುದನ್ನು ದೃಢವಾಗಿ ಪ್ರದರ್ಶಿಸುತ್ತಾ, ಹೇಗೆ ಆಪ್, ಶಿಕ್ಷಣವನ್ನು ತನ್ನ ಕಾರ್ಯಯೋಜನೆಯ ಕೇಂದ್ರ ವಿಷಯವನ್ನಾಗಿಸಿತು ಎಂಬುದನ್ನು ವಿವರಿಸುತ್ತದೆ.

ಈ ಪುಸ್ತಕವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ: **ಶಿಕ್ಷಣದ ಅಡಿಪಾಯ ಮತ್ತು ಅಡಿಪಾಯವಾಗಿ ಶಿಕ್ಷಣ**. ಮೊದಲ ಭಾಗವು ಸರಕಾರಿ ಶಾಲೆಗಳ ವಾಸ್ತವಿಕ ನಿರ್ವಹಣೆಯ ಬಗ್ಗೆ ಚರ್ಚಿಸುತ್ತದೆ. ಮನುಷ್ಯನ ಬೆಳವಣಿಗೆಯಲ್ಲಿ ಆನಂದವನ್ನು ಬಹು ಮುಖ್ಯ ಅಂಶವೆಂದು ಪರಿಗಣಿಸಿದರೆ, ಮೊದಲ ಆದ್ಯತೆಯಾಗಿ ವ್ಯಕ್ತಿಯ ಏಳಿಗೆ ಮತ್ತು ಆ ನಂತರವಷ್ಟೇ ಆರ್ಥಿಕ ಬೆಳವಣಿಗೆಯ ಸಾಧನವಾಗಿ ಯಶಸ್ವಿಯಾಗುವ ಅವನ/ಅವಳ ಸಾಮರ್ಥ್ಯವನ್ನು ನೋಡಲಾಗಿದೆ. ಲೇಖಕರು ಮೂಲಸೌಕರ್ಯ, ಶಿಕ್ಷಕರ ನೇಮಕಾತಿ, ತರಬೇತಿ, ಪ್ರಾಂಶುಪಾಲರು ಮತ್ತು ಪೋಷಕರ ಅಂಶಗಳನ್ನೂ ಈ ಸಂದರ್ಭದಲ್ಲಿ ಪರಿಗಣಿಸಿದ್ದಾರೆ. ಬಯಸಿದ ಬದಲಾವಣೆಯನ್ನು ಸಾಧ್ಯವಾಗಿಸಲು, ವಾಸ್ತವ ರೂಪದಲ್ಲಿ ಕಾರ್ಯರೂಪಕ್ಕೆ ತರಲು ಆರ್ಥಿಕ ಅವಶ್ಯಕತೆ ಇರುವುದರಿಂದ, ಈ ವಿಭಾಗವು ಆಯವ್ಯಯದ ಹೆಚ್ಚಳದೊಂದಿಗೆ ಪ್ರಾರಂಭವಾಗುತ್ತದೆ.

ಇದರ ಪರಿಣಾಮವಾಗಿ ದೆಹಲಿಯ ಸರಕಾರಿ ಶಾಲೆಗಳ ಶೈಕ್ಷಣಿಕ ಸನ್ನಿವೇಶವು–ಭೌತಿಕ ಮತ್ತು ಕಾರ್ಯಾಚರಣೆಯ ಎರಡೂ ಮಟ್ಟಗಳಲ್ಲಿ ಅತ್ಯಂತ ಸಕಾರಾತ್ಮಕ ಮತ್ತು ಆಶಾದಾಯಕವಾಗಿತ್ತು. ಉದಾಹರಣೆಗೆ, ಸ್ಫೂರ್ತಿಯೇ ಇಲ್ಲದೆ ಕಳಾಹೀನವಾಗಿದ್ದ ತರಗತಿ ಕೊಠಡಿಗಳನ್ನು, ಅಲ್ಲಿ ತಮ್ಮ ಬಹುಪಾಲು ಸಮಯವನ್ನು ಕಳೆಯುವ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಕಲಿಕೆಗೆ ಸೂಕ್ತವಾದ ಮನೋಭಾವವನ್ನು ಪಡೆಯುವಂತಹ ರೀತಿಯಲ್ಲಿ ಸುಂದರ–ಗೊಳಿಸಲಾಯಿತು.

ಸಂಬಳದಲ್ಲಿ ಹೆಚ್ಚಳ, ಶಿಕ್ಷಕರು, ವಿದ್ಯಾರ್ಥಿಗಳು ಮತ್ತು ಪೋಷಕರು ಸೇರಿದಂತೆ ಎಲ್ಲಾ ಭಾಗೀದಾರರು ವ್ಯವಸ್ಥೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಪರಸ್ಪರ ಗೌರವಿಸುವುದನ್ನು ಮನೀಷ್ ಸಿಸೋಡಿಯಾ ಅವರ ಅಭಿವೃದ್ಧಿಯ ನಿರೂಪಣೆಯು ಒಳಗೊಂಡಿದೆ.

ನಾಗರಿಕನನ್ನು ರೂಪಿಸುವ ಪ್ರಕ್ರಿಯೆಯಲ್ಲಿ ಆಧ್ಯಾತ್ಮಿಕ ಬೆಳವಣಿಗೆಯ ಪಾತ್ರವನ್ನು ಎರಡನೆಯ ಭಾಗ – 'ಒಂದು ಅಡಿಪಾಯವಾಗಿ ಶಿಕ್ಷಣ'ವು ಒತ್ತಿಹೇಳುತ್ತದೆ. 'ಜೀವನ ವಿದ್ಯಾ' ಮತ್ತು 'ವಿಪಶ್ಯನ ಧ್ಯಾನ'ದಂತಹ ಕೋರ್ಸುಗಳನ್ನು ಬದಲಾವಣೆಯ ಸಾಧನಗಳೆಂದು ವಿವರಿಸಲಾಗಿದೆ. ತಮ್ಮನ್ನು ತಾವೇ ಒಪ್ಪಿಕೊಳ್ಳುವ ಕೌಶಲವನ್ನು ಕಲಿಸುವ ಮತ್ತು ಆಂತರ್ಯದ ಆನಂದವೇ ನಿಜವಾದ ಸಂಪತ್ತು ಎಂದು ತಿಳಿಸುವುದರ ಜೊತೆಗೆ ಆಶಾಭಾವವನ್ನು ಬೆಳೆಸುವ ಉತ್ಸಾಹ ತುಂಬುವ ಕಾರ್ಯಕ್ರಮಗಳೂ ಇರುತ್ತವೆ. ಇದು ಸಂಕುಚಿತ ಮತ್ತು ಸ್ವಕೇಂದ್ರಿತ ಗುರಿಗಳ ದೃಷ್ಟಿಕೋನಗಳಿಂದ ತಮಗೆ ಸಾಧ್ಯವಿರುವಷ್ಟು ಉತ್ತಮವಾಗಿ ಬದಲಾಗಲು ಮಕ್ಕಳನ್ನು ಶಕ್ತರನ್ನಾಗಿಸುತ್ತದೆ.

ಈ ಪುಸ್ತಕವು ಒಂದು ಆದರ್ಶ ಶಿಕ್ಷಣ ಕಾರ್ಯಕ್ರಮದ ಆಸಕ್ತಿದಾಯಕ ವಿವರಣೆಯಾಗಿದ್ದು, ಇದನ್ನು ಸಾಧಿಸಿದರೆ ಮತ್ತು ದೇಶದಾದ್ಯಂತ ಜಾರಿಗೆ ತಂದರೆ ಭವಿಷ್ಯದ ನಾಗರಿಕರು, ಚಾಣಾಕ್ಷ, ವಿಶ್ವಾಸನೀಯ ಮತ್ತು ಪ್ರಜ್ಞಾವಂತ ಕೆಲಸಗಾರರಾಗಿ, ನವ ಭಾರತವನ್ನು ಕಟ್ಟುವಂತಹ ಭರವಸೆಯನ್ನು ತುಂಬುತ್ತದೆ. ಬರವಣಿಗೆಯ ಶೈಲಿಯು ಸಂದರ್ಶಕರೊಬ್ಬರ ಜೊತೆ ಮಾತನಾಡಿದಂತೆ ಇದೆಯಲ್ಲಾ ಎಂದು ಯಾರಿಗಾದರೂ ಆಶ್ಚರ್ಯವಾಗುವಂತೆ ಸಂವಾದದ ಸ್ವರೂಪದಲ್ಲಿದೆ. ಅದೇನೇ ಇರಲಿ, ಈ ಪುಸ್ತಕವು ಉತ್ತಮವಾಗಿ ಓದಿಸಿಕೊಳ್ಳುತ್ತದೆ ಮತ್ತು ಅದು ಕಾರ್ಯರೂಪಕ್ಕೆ ಬಂದರೆ ಎಲ್ಲದಕ್ಕಿಂತಲೂ ಉತ್ತಮವಾಗಿರುತ್ತದೆ.




**ಶೀರ್ಷಿಕೆ:**
Shiksha: My Experiments as an Education Minister

**ಲೇಖಕರು:**
ಮನೀಷ್ ಸಿಸೋಡಿಯ

**ಪೇಪರ್ ಬ್ಯಾಕ್:**
೨೦೮ ಪುಟಗಳು

**ಬೆಲೆ:**
₹ ೨೨೨ ರೂ.

**ಪ್ರಕಾಶಕರು:**
ಪೆಂಗ್ವಿನ್ (೯ ಸೆಪ್ಟೆಂಬರ್ ೨೦೧೯)

**ಭಾಷೆ:**
ಇಂಗ್ಲಿಷ್

**ISBN -10:**
0143448528

**ISBN-13:**
978-0143448525

Amazon.in ನಲ್ಲೂ ಲಭ್ಯವಿದೆ



**ಪ್ರೇಮಾ ರಘುನಾಥ್** ಅವರು ಲರ್ನಿಂಗ್ ಕರ್ವ್‌ನ ಮುಖ್ಯ ಸಂಪಾದಕರು. ಚೆನ್ನೈನ ಕೇಂದ್ರ ಪ್ರೌಢ ಶಿಕ್ಷಣ ಮಂಡಳಿ (ಸಿಬಿಎಸ್‌ಇ) ಮತ್ತು ಐಬಿ (ಇಂಟರ್‌ನ್ಯಾಷನಲ್ ಬ್ಯಾಕಲೌರಿಯೇಟ್) ಶಾಲೆಗಳಲ್ಲಿ ಹಲವು ವರ್ಷ ಕಲಿಸಿದ ಅನುಭವ ಅವರದ್ದು. ಈಗ ಅವರು ಚೆನ್ನೈನ ಕೆಲವು ಶಾಲಾ ಸಮಿತಿಗಳಲ್ಲಿ ಇದ್ದಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದು:
prema.raghunath@azimpremjifoundaton.org

ಅನುವಾದ: **ದೇವಿಕ ಧರ್ಮಿಷ್ಟೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

**ಲರ್ನಿಂಗ್ ಕರ್ವ್ ಹಿಂದಿನ ಸಂಚಿಕೆಗಳನ್ನು ಈ ಕಳಗಿನ ಲಿಂಕ್‌ಗಳಲ್ಲಿ ಡೌನ್ ಲೋಡ್ ಮಾಡಬಹುದು**
http://azimpremjiuniversity.edu.in/SitePages/resources-learning-curve.aspx
http://azimpremjifoundation.org/foundation-publication
http://www.teachersofindia.org/en/periodicals/learning-curve

**ಸಲಹೆಗಳು ಅಥವಾ ಅನಿಸಿಕೆ ಮತ್ತು ನಿಮ್ಮ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳಲು, ನಮಗೆ ಬರೆಯಿರಿ**
**learningcurve@apu.edu.in**

**ಮುದ್ರಣ ಮತ್ತು ಪ್ರಕಟಣೆ: ಮನೋಜ್ ಪಿ, ಅಜೀಂ ಪ್ರೇಮ್‌ಜಿ ಫೌಂಡೇಷನ್ ಫಾರ್ ಡೆವಲಪ್‌ಮೆಂಟ್ ಪರವಾಗಿ**
**ಮುದ್ರಣ:** ರಮ್ಯಾ ರಿಪ್ರೋಗ್ರಾಫಿಕ್ ಪ್ರೈ ಲಿಮಿಟೆಡ್, ಸರ್ವೇ ನಂ. 16/2ಬಿ, ಸಿಂಗಸಂದ್ರ ಗ್ರಾಮ, ಎಇಸಿಎಸ್ ಲೇಔಟ್,
ದಕ್ಷಿಣ್ ಹೋಂಡಾ ಹಿಂಭಾಗ, ಹೊಸೂರು ರಸ್ತೆ, ಬೆಂಗಳೂರು – 560068 ಕರ್ನಾಟಕ
**ಪ್ರಕಟಣೆ:** ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ, ಸರ್ವೇ ನಂ. 66, ಬುರುಗುಂಟೆ ಗ್ರಾಮ,
ಬಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ, ಬೆಂಗಳೂರು – 562125

**ಪ್ರೇಮಾ ರಘುನಾಥ್,** ಮುಖ್ಯ ಸಂಪಾದಕಿ, ಲರ್ನಿಂಗ್ ಕರ್ವ್

